ಉಷಾ ಸಾಹಿತ್ಯ ಮಾಲೆ : ೪೫–೪೬

# ಮುಳುಗು - ತೇಲು

ಬಿ. ಪಿ. ದಕ್ಷಿಣಾಮೂರ್ತಿ, ಬಿ.ಎಸ್‌ಸಿ., ಬಿ.ಟಿ.

೧೯೫೪

ಉಷಾ ಸಾಹಿತ್ಯ ಮಾಲೆ
ಮೈಸೂರು

ಮಾಲೆಯ ಎಂಟನೆಯ ವರುಷದ ೩—೪ನೆಯ ಕಾದಂಬರಿ



**ಬೆಲೆ: ರೂ. ೨—೦—೦**

ಬೆಂಗಳೂರಿನ ನಮ್ಮ ಅಧಿಕೃತ ಮಾರಾಟಗಾರರು
**'ಸಾಹಿತ್ಯ ಕೇಂದ್ರ'**
ಸಂಪಿಗೆ ರಸ್ತೆ, ಮಲ್ಲೇಶ್ವರಂ
ಬೆಂಗಳೂರು—೩

ಮುದ್ರಕರು – ಪ್ರಕಾಶಕರು
**ಆರ್. ಎನ್. ಹಬ್ಬು**
**ಉಷಾ ಪ್ರೆಸ್, ಓಲ್ಡ್ ಪೋಸ್ಟ್ ಆಫೀಸ್ ರೋಡ್, ಮೈಸೂರು**

# ಮುನ್ನುಡಿ

ಇದು ನನ್ನ ಮೊದಲನೆಯ ಕಾದಂಬರಿ. ಈ ಕಾದಂಬರಿಯ ಕಥಾವಸ್ತು ಸುಮಾರು ಒಂದು ವರ್ಷ ನನ್ನ ಮನಸ್ಸಿನಲ್ಲಿಯೇ ಉಳಿದುಕೊಂಡಿದ್ದು ಈಗ ಕೃತಿ ಸ್ವರೂಪಗೊಂಡಿದೆ.

ನೈಜ ಜೀವನದಲ್ಲಿ ಕಾಣಬಹುದಾದ ಕೆಲವು ವ್ಯಕ್ತಿಗಳ ಚಿತ್ರಗಳನ್ನು, ಅವರ ಸಮಸ್ಯೆಗಳನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದೆ. ವ್ಯಕ್ತಿಯು ತಾನು ಕಟ್ಟಿಕೊಂಡಿರುವ ಒಂದು ಆದರ್ಶವನ್ನು, ಧ್ಯೇಯವನ್ನು ಸತ್ಯಜೀವನದಲ್ಲಿ ಸಾಧಿಸಿಕೊಳ್ಳಲು ಪ್ರಯತ್ನಿಸುತ್ತಾನೆ, ಹೆಣಗಾಡುತ್ತಾನೆ. ಆದರೆ ವ್ಯಕ್ತಿ ಕಲ್ಪಿಸಿಕೊಂಡ ನಕ್ಷೆಯಂತೆ ಅವನ ಜೀವನ ರೂಪುಗೊಳ್ಳದಿರಬಹುದು. ಆಸೆ-ನಿರಾಶೆಗಳು, ಸೋಲು-ಸಾಧನೆಗಳು, ಇಷ್ಟ-ಅನಿಷ್ಟಗಳು ಜೀವನದಲ್ಲಿ ಸಹಜ. ನಿರಾಶೆ, ಸೋಲು, ಅನಿಷ್ಟಗಳಿಂದ ವ್ಯಕ್ತಿಯ ಬದುಕಿನ ದಾರಿ ಬೇರೆಯಾಗಬಹುದು. ಅವನು ಕಲ್ಪಿಸಿಕೊಂಡಿದ್ದ ಜೀವನ ಒಂದು ಕನಸಿನಂತೆ ದೂರವಾಗಬಹುದು. ಬದುಕಿನ ನಡುಹಗಲಿನಲ್ಲಿಯೇ ಕತ್ತಲು ಕವಿಯಬಹುದು. ಆದರ್ಶ ಮುರಿದುಬೀಳಬಹುದು.

ವ್ಯಕ್ತಿಯ ಧ್ಯೇಯಕ್ಕೆ ಪೂರ್ಣವಾಗಿ ಸೋಲಾದಾಗ ಅವನ ಜೀವನ ಯಾವ ಗತಿಯನ್ನು ಹಿಡಿಯಬಹುದೆಂಬುದನ್ನು ಈ ಕಾದಂಬರಿಯ ಪುಟಗಳಲ್ಲಿ ಕಂಡುಕೊಳ್ಳಬಹುದು. ವ್ಯಕ್ತಿಯ ಆದರ್ಶ ಮುರಿದುಬಿದ್ದರೆ ಅವನ ಬದುಕಿನ ನೌಕೆಯೇ ಒಡೆದು ಚೂರಾದಂತೆ. ಆಗ ಬಾಳಿನ ಮುಳುಗು-ತೇಲಿನಲ್ಲಿ ಅವನ ಗತಿ ಏನಾಗುತ್ತದೆ ಎಂಬುದು ವ್ಯಕ್ತಿಯನ್ನೇ ಅವಲಂಬಿಸುತ್ತದೆ. ತನ್ನ ಹಂಬಲಗಳೆಲ್ಲ ಮಣ್ಣುಗೂಡಿದ ಮೇಲೆ, ತನ್ನ ಧ್ಯೇಯಗಳ ಆಹುತಿಯಾದ ಮೇಲೆ ಬದುಕು ಏತಕ್ಕಾಗಿ ಎನ್ನುವ ಸಮಸ್ಯೆ ಅವನ ಮುಂದೆ ನಿಲ್ಲುತ್ತದೆ. ವ್ಯಕ್ತಿಯ ಆದರ್ಶ ತೀವ್ರವಾದಷ್ಟೂ, ಅವನ ಆಕಾಂಕ್ಷೆ ಪ್ರಬಲವಾದಷ್ಟೂ ಆ ಪ್ರಶ್ನೆಯನ್ನು ಎದುರಿಸುವುದು ಅವನಿಗೆ ಹೆಚ್ಚು ಕಠಿಣವಾಗುತ್ತದೆ. ಮುಳುಗು-ತೇಲಿನಲ್ಲಿ ವ್ಯಕ್ತಿಯು ಹತಾಶನಾಗಿ ಮುಳುಗಬಹುದು ಅಥವಾ ತೇಲಬಹುದು, ಬಿರುಗಾಳಿಯ ಹೊಡೆತದಿಂದ ದಾರಿಗೆಟ್ಟು ನುಚ್ಚಾದ ದೋಣಿಯ ಹೋಳಿನಂತೆ.

ಬದುಕಿನಲ್ಲಿ ಪ್ರೇಮಕ್ಕಿಂತ ಪ್ರಬಲವಾದ ಬೇರೆಯೊಂದು ಶಕ್ತಿಯಿಲ್ಲ.

ಪ್ರೇಮವು ಜೀವನವನ್ನು ವಸಂತಸ್ಪರ್ಶವಾದ ಹೂವಿನಂತೆ ಅರಳಿಸಬಹುದು, ಕಿಚ್ಚಿನಂತೆ ಭಸ್ಮ ಮಾಡಬಹುದು. ಆನಂದ ಮತ್ತು ರಾಜು ಇಬ್ಬರೂ ಇಂದಿರೆಗಾಗಿ ಹಂಬಲಿಸಿ ಆ ಪ್ರೇಮದ ಬಂಡೆಯ ಮೇಲೆ ತಮ್ಮ ಕಲ್ಪನೆಗಳನ್ನೆಲ್ಲ ಕಟ್ಟಿಕೊಂಡರು. ಆದರೆ ಅವರ ಧ್ಯೇಯಗಳು ಆಸೆಯ ಉಯ್ಯಾಲೆಯ ಮೇಲೆ ಸ್ವಲ್ಪ ಕಾಲ ತೂಗಾಡಿ ಒಡೆದುಹೋದವು—ಹತೋಟಿ ಮೀರಿದ ಶಕ್ತಿಗಳ ತಾಕಲಾಟದಿಂದಿರಬಹುದು, ಪ್ರಸಂಗಗಳ ಪಿತೂರಿಯಿಂದಿರಬಹುದು ಅಥವಾ ವ್ಯಕ್ತಿಗಳ ಧ್ಯೇಯಲೋಪದಿಂದಿರಬಹುದು. ಪರಿಸ್ಥಿತಿಯಲ್ಲಿ ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ತೇಲಿದರು. ಆದರೆ ಇಂದಿರೆ ಮುಳುಗಿದಳು. ಒಬ್ಬೊಬ್ಬ ವ್ಯಕ್ತಿಯೂ ತನ್ನ ಬಾಳಿನ ಅನಿವಾರ್ಯ ಮಾರ್ಗವನ್ನು ಕಂಡುಕೊಂಡಿರಬಹುದು, ಒಂದು ಸಮಾಧಾನವನ್ನು ಕಟ್ಟಿಕೊಂಡಿರಬಹುದು. ಅಂತಹ ಸಮಾಧಾನವು ಕ್ರಿಯಾಪ್ರವೃತ್ತಿಯನ್ನೆಲ್ಲ ನೀಗಿಕೊಂಡು ಬದುಕಿನಲ್ಲಿ ಸೋತುಹೋದ ಮನುಷ್ಯನ ಹಾಡೇ ಅಥವಾ ವಿವೇಕವು ತೋರಿಸಿದ ದಾರಿಯೇ ಎಂಬ ಪ್ರಶ್ನೆಗೆ ಉತ್ತರ ಮತ್ತೆ ವ್ಯಕ್ತಿಯನ್ನೇ ಅವಲಂಬಿಸುತ್ತದೆ.

ಈ ಕೃತಿಯು ಬೆಳಕಿಗೆ ಬರಲು ಕೆಲವರು ನನಗೆ ಸಹಾಯವನ್ನು ಮಾಡಿದ್ದಾರೆ. ಕಾದಂಬರಿಯನ್ನು ಬರೆಯುವಾಗ ವಿಶ್ವಾಸಪೂರ್ವಕ ಸಲಹೆಯನ್ನು ಕೊಟ್ಟು ಪ್ರೋತ್ಸಾಹಿಸಿದ ನನ್ನ ಹಿರಿಯ ಮಿತ್ರರಾದ ಶ್ರೀ ಎ. ಕೆ. ಪುಟ್ಟರಾಮು ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ. ಮತ್ತೆ ಕೆಲವು ಉಪಯುಕ್ತ ಸಲಹೆಗಳನ್ನು ಕೊಟ್ಟು ನನಗೆ ಉತ್ಸಾಹವನ್ನು ದೊರಕಿಸಿಕೊಟ್ಟ ನವಯುಗ (ಹುಬ್ಬಳ್ಳಿ) ಪತ್ರಿಕೆಯ ಸುದ್ದಿಸಂಪಾದಕರಾದ ಶ್ರೀ ರಂ. ಶ್ರೀ. ಚಕ್ರವರ್ತಿ ಅವರಿಗೂ ಮತ್ತು ನನ್ನ ಆಪ್ತಮಿತ್ರರಾದ ಶ್ರೀ ಕೆ. ವಿ. ಸುಬ್ಬರಾವ್ ಅವರಿಗೂ ನನ್ನ ಕೃತಜ್ಞತೆ ಸಲ್ಲಬೇಕಾಗಿದೆ.

ಈ ಕಾದಂಬರಿಯನ್ನು ತಮ್ಮ ಸಾಹಿತ್ಯ ಮಾಲೆಯಲ್ಲಿ ಸೇರಿಸಿಕೊಳ್ಳಲು ದಯವಿಟ್ಟು ಒಪ್ಪಿದುದಕ್ಕಾಗಿ ಉಷಾ ಸಾಹಿತ್ಯ ಮಾಲೆಯ ಪ್ರಕಾಶಕರಾದ ಶ್ರೀ ಆರ್. ಎನ್. ಹಬ್ಬುರವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

'ಶಂಕರ', ಜಯನಗರ
ಬೆಂಗಳೂರು: ೬—೩---೧೯೫೪

ಬಿ. ವಿ. ಡಿ. ಮೂರ್ತಿ

# ಮುಳುಗು-ತೇಲು

೧

ಆನಂದನ ಆನರ್ಸ್ ಎರಡನೆಯ ಪರೀಕ್ಷೆ ಮುಕ್ತಾಯವಾಗಿ ಎರಡು ದಿನವಾಗಿತ್ತು. ಪರೀಕ್ಷೆಯಲ್ಲಿ ತೃಪ್ತಿಕರವಾಗಿ ಮಾಡಿದ್ದ. ಮೊದಲನೆಯ ತರಗತಿಯಲ್ಲಿ ಉತ್ತೀರ್ಣನಾಗುವ ಆಸೆಯನ್ನು ಅವನು ಕಾಣುತ್ತಿದ್ದ.

ಸಂಪಿಗೆಯಲ್ಲಿ ತಾಯಿಕರುಳು ಅವನಿಗಾಗಿ ಕಾತರದಿಂದ ಮಿಡಿಯುತ್ತಿತ್ತು. ತಂಗಿ ಪದ್ಮ ಬಸ್ ನಿಲ್ದಾಣಕ್ಕೆ ಎರಡು ಬಾರಿ ಹೋಗಿ ನಿರುತ್ಸಾಹದಿಂದ ಹಿಂತಿರುಗಿದ್ದಳು. ಹೊರಗಡೆ ಸುತ್ತಾಡಿ ಬಂದು ರಂಗರಾಯರು, 'ಆನಂದ ಇನ್ನೂ ಬರಲಿಲ್ಲವಲ್ಲ, ಏಕೆ?' ಎಂದು ಪ್ರಶ್ನೆ ಹಾಕಿಕೊಳ್ಳುತ್ತಿದ್ದರು.

ಮುಂದಿನ ದಿವಸ ಆನಂದನಿಂದ ಒಂದು ಕಾಗದ ಬಂದಿತು. ಆ ಕಾಗದದಲ್ಲಿ ತಾನು ಇನ್ನೂ ಎರಡು ವಾರ ಬೆಂಗಳೂರಿನಲ್ಲಿಯೇ ನಿಲ್ಲಬೇಕಾಗಿದೆಯೆಂಬ ಸುದ್ದಿಯಿತ್ತು.

ಇಂದಿರೆ ಆ ವರ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತಿದ್ದಳು. ಆನಂದ ತನ್ನ ವಿರಾಮಸಮಯದಲ್ಲಿ ಅವಳಿಗೆ ಪಾಠಗಳನ್ನು ಹೇಳಿಕೊಡುತ್ತಿದ್ದ. ಆನಂದನಿಗೆ ಪರೀಕ್ಷೆಯಲ್ಲಿ ತಾನು ಉತ್ತೀರ್ಣನಾಗಲು ಎಷ್ಟು ಶ್ರದ್ಧೆಯಿತ್ತೋ ಅಷ್ಟೇ ಶ್ರದ್ಧೆ ಇಂದಿರೆಯನ್ನು ಉತ್ತೀರ್ಣಳನ್ನಾಗಿಸುವುದರಲ್ಲಿಯೂ ಇತ್ತು.

ಇಂದಿರೆಯ ಪರೀಕ್ಷೆಯೂ ಆರಂಭವಾಗಿತ್ತು. ಅದು ಮುಕ್ತಾಯವಾಗುವವರೆಗೆ ಅವಳು ಆನಂದನನ್ನು ಊರಿಗೆ ಹೊರಡಬಿಡಲಿಲ್ಲ. ಅವಳ ಹಟಕ್ಕೆ ಆನಂದ ಸಂತೋಷದಿಂದಲೇ ಸೋಲಬೇಕಾಯಿತು. ಪರೀಕ್ಷೆ ಮುಗಿದನಂತರ ಬೆಂಗಳೂರಿನಲ್ಲಿಯೇ ಎರಡು ವಾರ ಕಳೆಯಬೇಕೆಂದು ಆನಂದನಿಗೂ ಇಷ್ಟವಿತ್ತು.

ಗೋಪಾಲರಾಯರಿಗೆ ಇಂದಿರೆಯೊಬ್ಬಳೇ ಮಗಳು. ಅವಳು ಲಕ್ಷಮ್ಮನವರ ಕಣ್ಮಣಿ. ಇಂದಿರೆಯನ್ನು ಕಂಡು ಹಿಗ್ಗಿ ಅವರ ಕಣ್ಣು, 'ನಮ್ಮ ಮನೆಯ ಬೆಳಕು' ಎನ್ನುತ್ತಿತ್ತು.

ಕುಮಾರಾ ಪಾರ್ಕಿನ ಗಡಿಯಲ್ಲಿ ಅವರ ಮನೆ ಒಂಟಿಯಾಗಿ ನಿಂತಿತ್ತು. ಮನೆಯ ಸುತ್ತಲೂ ಶಾಂತ ವಾತಾವರಣ, ನಿಸರ್ಗದ ದೃಶ್ಯಗಳು. ಹಿತವಾದ

ತಂಗಾಳಿ ತಡೆಯಿಲ್ಲದೆ ಬೀಸಿ ತೇಲಿಹೋಗುತ್ತಿತ್ತು. ಆವರಣದ ನಿಶ್ಶಬ್ದತೆಯನ್ನು ಪಕ್ಕದಲ್ಲಿ ಆಗಾಗ ಓಡಾಡುತ್ತಿದ್ದ ರೈಲುಗಾಡಿಗಳ ಕೂಗು ಕಲಕುತ್ತಿತ್ತು. ದೂರದಲ್ಲಿ ನಗರದ ಪೂರ್ಣದೃಶ್ಯ ಬಣ್ಣಬಣ್ಣದ ಚಿತ್ರಪಟದಂತೆ ಕಾಣುತ್ತಿತ್ತು. ಆ ವಿಸ್ತರಣದಲ್ಲಿಯೂ ಅನೇಕ ಹೊಸ ಮನೆಗಳು ತಲೆಯೆತ್ತಿ ಹಸುರು ನಿಸರ್ಗವನ್ನು ದೂರ ದೂರ ಅಟ್ಟುತ್ತಿದ್ದವು.

ಆನಂದ ಆನರ್ಸ್ ಮೊದಲನೆಯ ವರ್ಷವನ್ನು ಸೆಂಟ್ರಲ್ ಕಾಲೇಜಿನ ಹಾಸ್ಟಲಿನಲ್ಲಿ ಕಳೆದಿದ್ದ. ಅಲ್ಲಿ ಅವನಿಗೆ ಪ್ರಪಂಚದ ಅನೇಕ ಹೊಸ ಅನುಭವಗಳು ದೊರೆತಿದ್ದವು. ಅಲ್ಲಿ ಯುವಕರು ಅನೇಕ ದೊಡ್ಡ ಸಮಸ್ಯೆಗಳನ್ನು ಸುಲಭವಾಗಿ ಚರ್ಚಿಸಿ ನಿರ್ಣಯಿಸಿಬಿಡುತ್ತಿದ್ದರು. ಅವರ ಮುಖ್ಯವಾದ ಉದ್ದೇಶ ವ್ಯಾಸಂಗವಾಗಿರಲಿಲ್ಲ, ಮನೋರಂಜನೆಯಾಗಿತ್ತು. ಆನಂದ ಅವರ ಆದರ್ಶಗಳ ಆಳವನ್ನು ಅವರ ಕಣ್ಣೆದುರು ತೋರಿಸಿ ಹಾಸ್ಯಮಾಡುತ್ತಿದ್ದ. ಅವನ ಗೆಳೆಯರು ಅವನನ್ನು ತತ್ವಜೀವಿಯೆನ್ನುತ್ತಿದ್ದರು. ಪುಸ್ತಕ ಕ್ರಿಮಿ ಎಂಬ ಬಿರುದನ್ನೂ ಅವನಿಗೆ ಕೊಟ್ಟಿದ್ದರು. ಆದರೆ ಪರೀಕ್ಷೆ ಸಮೀಪಿಸಿದಂತೆ ಗೆಳೆಯರು ಅವನನ್ನು ವಾಸ್ತವವಾದಿಯೆಂದು ತಿಳಿದರು.

ಆನಂದನಿಗೆ ಹಾಸ್ಟಲಿನ ಜೀವನ ಸುಖವಾಗಿತ್ತು. ಅಲ್ಲಿ ವ್ಯಾಸಂಗಕ್ಕೆ ಎಲ್ಲ ಅನುಕೂಲಗಳೂ ಇದ್ದವು. ಆ ವರ್ಷ ಅವನು ಮೊದಲನೆಯ ದರ್ಜೆಯಲ್ಲಿ ಉತ್ತೀರ್ಣನಾಗಿದ್ದ. ಆದರೆ ಅಲ್ಲಿಯ ವೆಚ್ಚಗಳು ಮುಗಿಲಿಗೇರುತ್ತಿದ್ದವು. ಅದು ಸಿರಿವಂತರ ಬೀಡಾಗಿತ್ತು. ಆ ವರ್ಷ ಆರ್ಥಿಕಸ್ಥಿತಿಯನ್ನು ಸುಧಾರಿಸಿಕೊಳ್ಳುವುದು ರಂಗರಾಯರಿಗೆ ಬಹಳ ಕಠಿಣವಾಯಿತು. ಆದರೂ ಆನಂದನ ವಿದ್ಯಾಭ್ಯಾಸಕ್ಕಾಗಿ ಅವರು ಎಷ್ಟು ತ್ಯಾಗವನ್ನು ಬೇಕಾದರೂ ಮಾಡಲು ಸಿದ್ಧರಿದ್ದರು. ಎರಡನೆಯ ವರ್ಷವೂ ಅವನು ಕಾಲೇಜ್ ಹಾಸ್ಟಲಿನಲ್ಲಿದ್ದು ವ್ಯಾಸಂಗವನ್ನು ಮುಂದುವರಿಸಲು ತಮ್ಮ ಒಪ್ಪಿಗೆಯನ್ನು ಸೂಚಿಸಿದ್ದರು. ಆದರೆ ಆನಂದನಿಗೆ ಮನೆಯ ಆರ್ಥಿಕ ದುಃಸ್ಥಿತಿ ತಿಳಿದಿತ್ತು. ಅವನು ತನ್ನ ವೆಚ್ಚವನ್ನು ಆದಷ್ಟು ಮಟ್ಟಿಗೆ ಕಡಿಮೆ ಮಾಡಿಕೊಳ್ಳುವ ಯೋಚನೆ ಮಾಡಿದ್ದ. ಮರುವರ್ಷ, ಒಂದು ಕೊಠಡಿಯಲ್ಲಿ ವಾಸಮಾಡಿಕೊಂಡು ಸ್ನಾನ ಊಟಗಳನ್ನು ಒಂದು ಹೋಟೆಲಿನಲ್ಲಿ ಮಾಡುವುದೆಂದು ನಿರ್ಧರಿಸಿದ.

ಆನಂದನಿಗೆ ನಗರದ ಮಧ್ಯದಲ್ಲಿ ವಾಸಕ್ಕೆ ಕೊಠಡಿ ದೊರಕಲಿಲ್ಲ.

ಗೋಪಾಲರಾಯರ ಮನೆಯ ಮುಂಭಾಗದ ಒಂದು ಕೊಠಡಿಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡ. ಆ ಆವರಣ ಅವನ ಮನಸ್ಸಿಗೆ ಹಿತವಾಗಿತ್ತು. ಕೆಲವು ದಿನಗಳಲ್ಲಿಯೇ ಅವನ ಒಳ್ಳೆಯ ಗುಣಗಳನ್ನು ಕಂಡುಕೊಂಡ ಗೋಪಾಲರಾಯರು ಅವನನ್ನು ಮನೆಯ ಜನರಲ್ಲಿ ಒಬ್ಬನಂತೆ ಕಾಣಹತ್ತಿದರು.

ಇಂದಿರೆ ಪರೀಕ್ಷೆಯಲ್ಲಿ ತೇರ್ಗಡೆಯಾಗುವುದರಲ್ಲಿ ಸಂದೇಹವಿರಲಿಲ್ಲ. ಗಣಿತದಲ್ಲಿ ಅವಳನ್ನು ಮೇಲಕ್ಕೆತ್ತಲು ಆನಂದ ಹೆಚ್ಚು ಶ್ರಮಪಟ್ಟಿದ್ದ. ಪರೀಕ್ಷೆ ಮುಗಿದ ದಿವಸ ಅವಳ ಮುಖದಲ್ಲಿ ಆನಂದನಿಗಾಗಿ ಕೃತಜ್ಞತೆ ತುಂಬಿತ್ತು. ಆನಂದ ಅದನ್ನು ಗುರುತಿಸಿದಾಗ ಅವನ ಮನಸ್ಸಿಗೆ ತೃಪ್ತಿಯಾಯಿತು.

ಗಾಡಿ ಬಂದು ಮನೆಯ ಮುಂದೆ ನಿಂತಿತು. ಆನಂದನ ಕೊಠಡಿ ಬರಿದಾಯಿತು. ನಿಲ್ದಾಣದಲ್ಲಿ ಅವನನ್ನು ಪ್ರಯಾಣಕ್ಕಾಗಿ ರೈಲು ಕೂಗುತ್ತಿತ್ತು.

'ಆನಂದ, ಹೊರಟೇಬಿಟ್ಟಿಯಾ?'—ಎನ್ನುವಂತಿತ್ತು ಇಂದಿರೆಯ ನೋಟ.

'ಬಹಳ ಕಾಲ ನಿನ್ನನ್ನು ಅಗಲಿರೆನು'—ಎನ್ನುವಂತಿತ್ತು ಆನಂದನ ಮರುನೋಟ.

ಇಂದಿರೆ ಅವನ ನೋಟದ ಇಂಗಿತವನ್ನು ಅರಿತಳು. ಅತೃಪ್ತಿ ಮುಸುಕಿದ್ದ ಅವಳ ಮುಖದ ಮೇಲೆ ಒಂದು ಕ್ಷಣ ಮುಗುಳ್ನಗೆ ಮಿಂಚಿಹೋಯಿತು. ಆನಂದನ ದೀರ್ಘವಾದ ನೋಟ ಅವಳ ಮುಖದ ಮೇಲೆ ಚೆಲ್ಲಿತು, ಅವಳ ಹೃದಯವನ್ನು ತಾಕಿ ಭಾವನೆಗಳನ್ನು ಸ್ಪಂದನಮಾಡಿತು.

"ನಾನು ಇನ್ನು ಬರುತ್ತೇನೆ" ಎಂದ ಆನಂದ. ಅವನ ಕಣ್ಣು ಗೋಪಾಲರಾಯರ ಕಡೆಗೂ ತಿರುಗಿತು.

"ಒಂದು ಕಾಗದವನ್ನು ಹಾಕು, ಆನಂದ" ಎಂದರು ಅವರು.

ಗಾಡಿಯನ್ನು ಕುದುರೆ ಮುಂದಕ್ಕೆಳೆಯಿತು.

ರೈಲ್ವೆನಿಲ್ದಾಣದಲ್ಲಿ ಹೆಚ್ಚು ಗಲಾಟೆಯಿತ್ತು. ಬಹಳ ಪ್ರಯತ್ನದಿಂದ ಆನಂದ ಕಿಟಕಿಯ ಬಳಿ ಒಂದು ಅನುಕೂಲವಾದ ಸ್ಥಳವನ್ನು ದೊರಕಿಸಿಕೊಂಡ. ಕೆಲವು ಕ್ಷಣಗಳಲ್ಲಿಯೇ ಅವನ ಮುಖದಲ್ಲಿ ಕಾಣುತ್ತಿದ್ದ ಸಂತೋಷ ಕಾಣದಾಯಿತು. ಅನೇಕ ಚಿತ್ರಗಳು ಅವನ ಮನಸ್ಸಿನಲ್ಲಿ ಸುಳಿದುಹೋದವು. ಬಡತನಕ್ಕೆ ಸಿಕ್ಕಿದ ಮನೆಯ ಯೋಚನೆಗಳು ಹೃದಯವನ್ನು ಚುಚ್ಚಿದವು.

ಅಲ್ಲಿನ ದೃಶ್ಯಗಳು ಅವನ ಕಣ್ಣೆದುರು ತೇಲಿಹೋದವು. ಬೆಂಗಳೂರಿನ ಜೀವನದ ಯಾವುದೋ ಒಂದು ಉತ್ಸಾಹ ಸಂಪಿಗೆಯ ಎಲ್ಲ ವಿಷಯಗಳನ್ನೂ ಮನಸ್ಸಿನಿಂದ ಮರೆಮಾಡಿತು. ಒಂದು ಕ್ಷಣದಲ್ಲಿ ಅವನ ಮನಸ್ಸು ರೆಕ್ಕೆಕೊಡವಿ ಸಂಪಿಗೆ ಮತ್ತು ಬೆಂಗಳೂರುಗಳ ನಡುವೆ ಅನೇಕ ಬಾರಿ ಹಾರಾಡಿತು. ಆನಂದನ ಮನಸ್ಸಿನಲ್ಲಿ ಅನೇಕ ಕಲ್ಪನೆಯ ಮುಗಿಲುಗಳು ಸುತ್ತಾಡಿದವು. ಅವನ ದೃಷ್ಟಿಗೆ ರೈಲ್ವೆಸಿಲ್ದಾಣವೇ ಜೀವನ ನಾಟಕದ ಒಂದು ನಿಜವಾದ ದೃಶ್ಯದಂತೆ ಕಂಡಿತು.

ಒಬ್ಬ ಭಿಕ್ಷುಕಿ, ಹೃದಯವನ್ನು ಮುಟ್ಟುವ ಕಂಠದಿಂದ ಪುರಂದರದಾಸರ ಹಾಡೊಂದನ್ನು ಹಾಡುತ್ತಿದ್ದಳು. ಅದು ಆನಂದನ ಅಂತಃಕರಣವನ್ನು ಕಲಕಿತು. ಅವನ ಕಣ್ಣಿನಲ್ಲಿ ಹೊಳಪು ಮೂಡಿತು. ಆ ಭಿಕ್ಷುಕಿಯ ದೇಹ ಬಡತನದಿಂದ ಜೀರ್ಣವಾಗಿತ್ತು. ಅವಳ ಭಿಕ್ಷಾಪಾತ್ರೆ ಬರಿದಾಗಿಯೇ ಇತ್ತು. ಆನಂದ ಅದರೊಳಕ್ಕೆ ಒಂದಾಣೆ ಹಾಕಿದ.

ಮಲ್ಲಿಗೆ ಮೊಗ್ಗನ್ನು ಮಾರುತ್ತಿದ್ದ ಹೆಂಗಸು ತನ್ನ ಕೂಗಿಗೆ ಸ್ವಲ್ಪ ಗಾಯನವನ್ನೂ ಬೆರಸಿದ್ದಳು. ಆ ಕೂಗು ಕಿವಿಯನ್ನು ತಾಕಿದೊಡನೆಯೇ ಆನಂದನಿಗೆ ಪದ್ಮಳ ನೆನಪಾಯಿತು. ಹೂ ಮಾರುವವಳನ್ನು ಕರೆದ. ಬೆಲೆಯನ್ನೇ ವಿಚಾರಿಸದೆ ಎಂಟಾಣೆ ಹೂವನ್ನು ಕಟ್ಟಹೇಳಿದ. ಮೊಗ್ಗು ತನ್ನಲ್ಲಿ ಅಡಗಿಕೊಂಡಿದ್ದ ಪರಿಮಳವನ್ನು ಚೆಲ್ಲಿ ಅರೆ ಅರಳುತ್ತಿತ್ತು. ತಕ್ಷಣವೇ ಆನಂದನ ಮನಸ್ಸಿನಲ್ಲಿ ಮತ್ತೊಂದು ಭಾವನೆ ಮಿಂಚಿಹೋಯಿತು : ‘ ಅಂತೆಯೇ ಅಲ್ಲವೆ, ಇಂದಿರೆಯ ಯೌವನವೂ ಅರುಳುತ್ತಿರುವುದು ! ’

ರೈಲು ಕೂಗುತ್ತಾ ಮುಂದಕ್ಕುರುಳಿತು. ಬೆಂಗಳೂರು ದೂರ ದೂರ ಸರಿಯಿತು.

೨

ರಂಗರಾಯರು ಸಂಪಿಗೆಯಲ್ಲಿ ಆನುವಂಶಿಕವಾಗಿ ನೆಲಸಿದ್ದರು. ಮಧ್ಯಮ ವರ್ಗದ ಸಂಸಾರ. ಅವರ ತಂದೆ ತಾತಂದಿರು ಗೌರವವಾಗಿ ಬದುಕನ್ನು ನಡಸಿ ಮನೆತನಕ್ಕೆ ಒಂದು ಹೆಸರನ್ನು ಗಳಿಸಿದ್ದರು. ರಂಗರಾಯರಿಗೆ ಸುಖ ಜೀವನಕ್ಕೆ ಸಾಕಷ್ಟು ಒಂದು ಮನೆ, ತೋಟ, ಹೊಲ ಮತ್ತು ಗದ್ದೆಗಳನ್ನು

ಉಳಿಸಿಟ್ಟಿದ್ದರು. ರಂಗರಾಯರು ತಮ್ಮ ಜೀವನದಲ್ಲಿ ಒಂದು ಹೊಸ ಧ್ಯೇಯವನ್ನು ಕಟ್ಟಿಕೊಂಡಿದ್ದರು. ತಲೆಮಾರಿನಿಂದ ಬಂದ ಒಂದೇ ಬಗೆಯ ಬದುಕು ಅವರಿಗೆ ಬೇಸರವಾಗಿತ್ತು. ಆನಂದನನ್ನು ವಿಶ್ವವಿದ್ಯಾನಿಲಯದ ಪದವೀಧರನನ್ನಾಗಿ ಮಾಡಲು ಅವರು ಮನಸ್ಸುಮಾಡಿದರು. ಕೆಲವು ಸಂದರ್ಭಗಳಲ್ಲಿ ಹೆಚ್ಚಿನ ಆಸೆಯನ್ನು ಮನಸ್ಸಿಗೆ ಹಚ್ಚಿಕೊಂಡು ಜೀವನದಲ್ಲಿ ಅವರು ತೂಕ ತಪ್ಪುತ್ತಿದ್ದರು.

ಈಚೆಗೆ ರಂಗರಾಯರ ವ್ಯವಹಾರಗಳು ಹತೋಟಿ ತಪ್ಪಿದ್ದವು. ಅವರ ಗೃಹಜೀವನದ ವಿಚಾರಗಳು ಜನರ ನಾಲಗೆಯ ಮೇಲೆ ಇರುತ್ತಿದ್ದವು.

' ರಂಗರಾಯರು ಸಾಹಸಿಗಳು. ಮಗನನ್ನು ಹೆಚ್ಚುವರಿ ಓದಿಸುತ್ತಿದ್ದಾರೆ. ಅಂತೂ ಒಂದು ಹೆಜ್ಜೆ ಹಾಕಿದ್ದಾರೆ.'

' ಇವರು ಇಷ್ಟು–ಅಷ್ಟು ಭೂಮಿ ರೂಢಿಸಿಕೊಂಡು ಸುಖವಾಗಿ ಬಾಳುವುದನ್ನು ಬಿಟ್ಟು ಸಿಗದುದಕ್ಕೆ ಕೈಚಾಚಿದರೆ ಕಡೆಗೆ ಎಲ್ಲ ಹಾಳೇ. ಸಾಲ ಹತ್ತಿ ಹೋಗುತ್ತಿದೆ. ಆನಂದನ ವ್ಯಾಸಂಗ ಮುಗಿಯುವ ವೇಳೆಗೆ ಅವರ ಮನೆಯೇ ನೆಲಮುಟ್ಟಬಹುದು.'

' ತೋಟ ಗದ್ದೆ ಎರಡೂ ಗೋವಿಂದಯ್ಯನ ಸ್ವಾಧೀನ. ಮಗಳ ಮದುವೆ ಬೇರೆ ಆಗಬೇಕು. ವರನನ್ನೇ ಇನ್ನೂ ಹುಡುಕಿಲ್ಲ. ಸಾಲಕ್ಕೆ ಓಡಾಡುತ್ತಿದ್ದಾರೆ. ಹೆಣ್ಣಿನ ಮದುವೆ ಮಾಡುವುದು ಸಾಮಾನ್ಯ ಕೆಲಸವೆ ? ಇನ್ನು ಎಷ್ಟು ದಿನ ಮಗಳನ್ನು ಮನೆಯಲ್ಲೇ ಸಾಕಿಕೊಳ್ಳುತ್ತಾರೆ ? '

—ಎಂದು ಜನ ಬಗೆಬಗೆಯಾಗಿ ಆಡಿಕೊಳ್ಳುತ್ತಿದ್ದರು.

ರಂಗರಾಯರ ಸಂಸಾರದ ಪಾಡು ಚಿಂತಾಜನಕವಾಗಿತ್ತು. ಅವರ ಉಕ್ಕಿನಂತಹ ಗುಂಡಿಗೆ ಪ್ರಸಂಗಗಳನ್ನು ಹೇಗೋ ಇದಿರಿಸಿತ್ತು. ತಮ್ಮ ಮೈಯಲ್ಲಿ ಮಿಡಿತವಿರುವ ವರೆಗೂ ಹೇಗೋ ದುಡಿದು ಆನಂದನನ್ನು ಕೊನೆ ಮುಟ್ಟಲು ಮುಟ್ಟಿಸಬೇಕೆಂದು ಅವರಿಗೆ ಆಸೆ. ಆ ಆಸೆ ಅವರಿಗೆ ಬದುಕಿನಲ್ಲಿ ಶಕ್ತಿಯನ್ನು ಕೊಟ್ಟಿತ್ತು. ವ್ಯಾಸಂಗ ಮುಗಿಯುತ್ತಲೆ ಅವನು ಕುಟುಂಬದ ಹೊಣೆಯನ್ನು ಸುಲಭವಾಗಿ ನಿರ್ವಹಿಸಬಲ್ಲ ಎಂಬ ಭರವಸೆಯಿಂದ ಅವರು ಕಷ್ಟಗಳನ್ನು ಸಹಿಸಿಕೊಂಡಿದ್ದರು.

ಒಂದೊಂದು ವೇಳೆ ರಂಗರಾಯರ ಚಿಂತೆ ಬೇರೆ ದಾರಿಯಲ್ಲಿ ಹರಿಯು

ತ್ತಿತ್ತು. ಆಗ ಆನಂದನ ವ್ಯಾಸಂಗಕ್ಕಾಗಿ ತಾವು ಪಟ್ಟ ಶ್ರಮ ಬಹಳ ಹೆಚ್ಚೆಂದು ಅವರಿಗೆ ಅನ್ನಿಸುತ್ತಿತ್ತು. ಆದರೆ ಇನ್ನು ಒಂದು ವರ್ಷದ ಅವನ ವ್ಯಾಸಂಗ ಮುಗಿಯಲೇಬೇಕೆಂಬ ಅವರ ನಿರ್ಧಾರ ಮಾತ್ರ ಸಡಿಲವಾಗಲಿಲ್ಲ.

ಪದ್ಮಳ ನೆನಪು ಬಂದಾಗ ಈ ವಿಚಾರದ ಹಾದಿಯಲ್ಲಿಯೆ ಅವರ ಮನಸ್ಸು ಬಹಳ ದೂರ ಹೋಗಿ ಗುರಿ ಕಾಣದೆ ಹಿಂದಕ್ಕೆ ಸರಿದುಬರುತ್ತಿತ್ತು. ಅವರ ಭಾವನೆಗಳಲ್ಲಿ ತಳಮಳ ಉಂಟಾಗುತ್ತಿತ್ತು.

'ನಾನು ಕರ್ತವ್ಯಭ್ರಷ್ಟನಾಗುತ್ತಿದ್ದೇನೆಯೆ ? ಪದ್ಮಳ ವಯಸ್ಸು ಯೌವನಕ್ಕೆ ಕಾಲಿಟ್ಟಿದೆ. ಅವಳ ಮದುವೆ ಕೂಡಲೆ ಆಗಬೇಕು. ನಾನು ಅಸಹಾಯಕ. ಆ ಯೋಚನೆ ನನ್ನ ಹೃದಯವನ್ನು ಯಾವಾಗಲೂ ಒತ್ತುತ್ತಿದೆ. ನಾನು ನೊಂದರೆ ಸಮಾಜಕ್ಕೇನು ? ನನ್ನೆದೆಯ ತಳಮಳವನ್ನು ಲಕ್ಷಿಸುವವರು ಯಾರು ? ಸಮಾಜದ ಕಣ್ಣಿನಲ್ಲಿ ನಾನು ನೀತಿಭ್ರಷ್ಟನೆ. ನನ್ನ ಹೃದಯದಲ್ಲಿ ನೋವಿದ್ದರೆ ಅದು ಅಲ್ಲಿಯೇ ಬೆಂದು ಸವೆಯಬೇಕು. ಸಮಾಜದ ದೃಷ್ಟಿಯನ್ನು ಅದು ಬದಲಾಯಿಸಲಾರದು. ಸಮಾಜದ ನೀತಿಗೆ ಬೆಂಕಿಹಚ್ಚಬೇಕು' ಎಂದು ರಂಗರಾಯರ ಮನಸ್ಸು ಕೆರಳಿ ಗುಡುಗುತ್ತಿತ್ತು.

೩

ಆನಂದ ಸಂಪಿಗೆಗೆ ಬರುವ ದಿನ. ನಾಗಮ್ಮನವರಿಗೆ ಮಗನನ್ನು ಕಾಣುವ ಕಾತರ. ಪದ್ಮ ರಾತ್ರಿಯೆಲ್ಲ ಸ್ವಪ್ನಗಳನ್ನು ಕಾಣುತ್ತಾ ನೂಕಿದಳು. ಆನಂದನಿಗಾಗಿ ಕೊಠಡಿಯನ್ನು ಸ್ವಚ್ಛಗೊಳಿಸಿದಳು. ಬಸ್ ನಿಲ್ದಾಣಕ್ಕೆ ಹೊರಡಲು ಅನೇಕ ಗಂಟೆಗಳ ಪೂರ್ವಸಿದ್ಧತೆಯನ್ನು ಮಾಡಿಕೊಂಡಳು. ನಿಲ್ದಾಣದಲ್ಲಿ ಒಂದೊಂದು ಕ್ಷಣವೂ ನಿಧಾನವಾಗಿ ಜಾರುತ್ತಿರುವಂತೆ ಅವಳಿಗೆ ಭಾವನೆಯಾಯಿತು.

"ಆನಂದ ಬಂದ"—ಕೂಗುತ್ತಾ ಓಡಿಬಂದಳು ಪದ್ಮ ಮನೆಯೊಳಗೆ.

ನಾಗಮ್ಮನವರೂ ಧಾವಿಸಿ ಬಂದರು. 'ಆನಂದ!' ಎಂದಿತು ಅವರ ಹೃದಯ. ಕಣ್ಣೀರೂರಿತು.

ರಂಗರಾಯರ ಮುಖ ಅರಳಿತು. ಅವರ ನೋಟದಲ್ಲಿ ವಾತ್ಸಲ್ಯವಿತ್ತು.

ಊಟವಾದನಂತರ ಆನಂದ ಆ ವರ್ಷದ ತನ್ನ ಬೆಂಗಳೂರು ಜೀವನದ

ವರದಿಯನ್ನೊಪ್ಪಿಸಿದ. ಗೋಪಾಲರಾಯರ ಮನೆಯ ಕತೆ ವರ್ಣಿಸುವಾಗ ಆನಂದನ ಉಬ್ಬು ಹೇಳತೀರದು. ಪ್ರಾಸಂಗಿಕವಾಗಿ ಇಂದಿರೆಯ ಗುಣಗಾನ ಮಾಡುವಾಗಲಂತೂ ಅವನಿಗೆ ಹತ್ತು ನಾಲಗೆ.

"ಎಂತಹ ಒಳ್ಳೆಯ ಜನ ಆ ಮನೆಯವರು!" ಎಂದರು, ಕತೆಯನ್ನು ಕೇಳಿ ರಂಗರಾಯರು. ಆ ಮಾತು ಇಂದಿರೆಯ ಸ್ನೇಹವನ್ನು ಆನಂದನ ಮನಸ್ಸಿನ ಮೇಲೊತ್ತಿ ಅಲ್ಲಿ ಅನೇಕ ಬಿಂಬಗಳನ್ನುಂಟುಮಾಡಿತು.

"ಬಡವರಿಗೆ ದೇವರ ಆಶ್ರಯವಿಲ್ಲವೇ?" ಎಂದು ನಾಗಮ್ಮನವರು ಉತ್ತರ ಕೊಟ್ಟರು.

"ಎಷ್ಟು ಕಷ್ಟ ಆಯಿತು ನಿನಗೆ, ಆನಂದ. ಈ ತಿಂಗಳು ನಿನಗೆ ಹಣ ಕಳುಹಿಸಲು ನಾನು ಬಹಳ ಪ್ರಯತ್ನಪಟ್ಟೆ; ಆಗಲಿಲ್ಲ. ಹಣದ ಮುಗ್ಗಟ್ಟು ನನ್ನನ್ನು ಹಿಂಡಿಬಿಟ್ಟಿದೆ" ಎಂದು ರಂಗರಾಯರು ಮುಂದುವರಿಸಿದರು.

"ಹೇಗೋ ಕಾಲವನ್ನು ತಳ್ಳಿಯಾಯಿತಲ್ಲಾ, ಬಿಡಪ್ಪ. ಇಲ್ಲಿಯ ಯೋಚನೆ ನನ್ನನ್ನು ಕಾಡುತ್ತಲೇ ಇರುತ್ತೆ."

"ಇಲ್ಲಿಯ ಚಿಂತೆಯನ್ನು ನೀನು ಹಚ್ಚಿಕೊಳ್ಳಬೇಡ, ಆನಂದ. ನಿನ್ನ ಮನಸ್ಸನ್ನೆಲ್ಲ ವ್ಯಾಸಂಗದಲ್ಲಿಡು. ಹೇಗೋ ಇನ್ನೊಂದು ವರ್ಷ ನೂಕಿದರೆ ನಿನ್ನ ವಿದ್ಯಾಭ್ಯಾಸ ಮುಗಿಯಿತು. ಅನಂತರ ಸುಖದ ದಿನಗಳು ಬಂದೇ ಬರುತ್ತವೆ."

ತಾನೇ ಅವರ ಬದುಕಿನ ಕೈದೀವಿಗೆಯೆಂದು ತಂದೆ ಆಶಿಸಿದುದನ್ನು ತಿಳಿದು, ಆನಂದನ ಹೃದಯ ತುಂಬಿ ಬಂತು. ಮರುಕ್ಷಣವೇ ಅವನ ಮನಸ್ಸನ್ನು ಅನೇಕ ಯೋಚನೆಗಳು ಮುತ್ತಿದವು. ಅವನ ಎದೆ ಝಲ್ಲೆಂದಿತು. ಮುಖದಲ್ಲಿ ಕಾಂತಿ ಅಳಿಸಿಹೋಯಿತು. ಬೇಸರ ಕಾಣಿಸಿಕೊಂಡಿತು.

ಸಂಪಿಗೆಯ ಸುತ್ತ ಹಸುರು ತುಂಬಿ ತೂಗಾಡುತ್ತಿದ್ದ ತೋಟಗಳು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದವು. ಪಟ್ಟಣದ ಗದ್ದಲದಲ್ಲಿ ಬೇಸತ್ತ ಮನಸ್ಸು ಆ ದೃಶ್ಯಗಳ ನಡುವೆ ಶಾಂತಿಯಿಂದ ತಣಿಯುತ್ತಿತ್ತು. ಸಂಜೆ ಆನಂದ ನಿರ್ಜನವಾದ ನಿಸರ್ಗದ ನಡುವೆ ಸಂಚರಿಸುತ್ತಿದ್ದ. ಆಗ ಅವನ ಭಾವನೆಗಳು ಮುಗಿಲು ಮುಟ್ಟುತ್ತಿದ್ದವು. ಒಂದೊಂದು ವೇಳೆ ಬಹಳ ಮೇಲೆ ಹಾರಿ, ರೆಕ್ಕೆ ಸೋತು ಮುಂದುಗಾಣದೆ ನೆಲಕ್ಕಿಳಿಯುತ್ತಿದ್ದವು. ಒಂದು ದಿನ

ದಂತೆ ಮತ್ತೊಂದು ದಿನ ಸರಿದುಹೋಗುತ್ತಿತ್ತು. ಮನೆಯ ಅದೇ ಆವರಣ, ಸಂಜೆಯ ಅದೇ ಕಾರ್ಯಕ್ರಮ, ಮನಸ್ಸಿನಲ್ಲಿ ಜಾಡನ್ನು ಕಾಣದೆ ಅಲೆದಾಡುತ್ತಿದ್ದ ಅವೇ ಆಲೋಚನೆಗಳು. ಆವರಣ ಶಾಂತವಾಗಿದ್ದರೂ ಆನಂದನ ಮನಸ್ಸಿನಲ್ಲಿ ಶಾಂತಿಯಿರಲಿಲ್ಲ.

ಬೇಸಗೆಯ ಉರಿದಿನಗಳನ್ನು ನೂಕುವುದು ಆನಂದನಿಗೆ ಕಷ್ಟವಾಯಿತು. ಸಂಪಿಗೆಯ ಜೀವನ ಬೇಸರವಾಯಿತು. ಮನೆಯ ಆರ್ಥಿಕಸ್ಥಿತಿ ಕೆಟ್ಟಿತ್ತು. ರಂಗರಾಯರ ತೊಳಲಿಕೆ ಅವನ ಯೋಜನೆಯನ್ನು ನಾಟಿತು. ಪದ್ಮಳನ್ನು ನೋಡಿದಾಗ ರಂಗರಾಯರ ಕಣ್ಣಿನಲ್ಲಿ ಮೂಡಿಹೋಗುತ್ತಿದ್ದ ಚಿಂತೆಯ ಸುಳಿವನ್ನು ಆನಂದ ಗುರುತಿಸಿದ್ದ. ಆಗ ಅವನ ಮನಸ್ಸಿನಲ್ಲಿ ವಿಚಾರ ಚಕ್ರ ವೇಗವಾಗಿ ಸುತ್ತುತ್ತಿತ್ತು.

ಇನ್ನು ಒಂದು ವಾರದಲ್ಲಿ ಆನಂದ ಬೆಂಗಳೂರಿಗೆ ಹೊರಡುವವನಿದ್ದ. ಬೆಂಗಳೂರು ಜೀವನದ ನೆನಪು ಅವನ ಮನಸ್ಸನ್ನು ಅರಳಿಸಿತು. ಆದರೆ ಆ ನೆನಪುಗಳೆಲ್ಲ ವಾಸ್ತವತೆಯಲ್ಲಿ ಮರೆಯಾದವು.

ಅಂದು ಮಧ್ಯಾಹ್ನ ರಂಗರಾಯರು ಆನಂದನೆದುರು ತಮ್ಮ ಹೃದಯವನ್ನು ಬಿಚ್ಚಿದರು. ಆದರೂ ಆನಂದನಿಗೆ ಮನೆಯ ಚಿಂತೆ ಹತ್ತಬಾರದೆಂಬ ಉದ್ದೇಶ ಅವರ ಮಾತಿನಲ್ಲಿತ್ತು.

"ಆನಂದ, ಬಡವರ ಬಾಳೇ ಹೀಗೆ. ಮಕ್ಕಳಿಗೆ ಬುದ್ಧಿ ಉತ್ಸಾಹ ಇರುತ್ತವೆ. ಆದರೆ ಕೈಲಿ ಹಣ ಇರುವುದಿಲ್ಲ" ಎಂದರು ರಂಗರಾಯರು.

"ನಾನು ಇನ್ನೂ ಒಂದು ವರ್ಷ ವ್ಯಾಸಂಗ ಮಾಡಬೇಕು. ಮುಂದುವರಿಸಲೇ ಬೇಡವೇ ಎಂಬ ಪ್ರಶ್ನೆ ನನ್ನ ಮುಂದೆ ನಿಂತಿದೆ" ಎಂದ ಆನಂದ.

"ನೀನು ವ್ಯಾಸಂಗ ಮುಂದುವರಿಸದಿದ್ದರೆ ನಮ್ಮ ಮುಂದಿನ ಆಸೆಯೂ ಮಣ್ಣುಪಾಲೇ."

ಆನಂದ ಉತ್ತರ ಕೊಡಲಿಲ್ಲ.

"ನಿನ್ನ ವ್ಯಾಸಂಗ ಹೇಗೋ ನಡೆದುಹೋಗುತ್ತೆ, ಆನಂದ. ಅದರ ಚಿಂತೆ ನನಗಿಲ್ಲ...." ಎಂದು ಮಾತನ್ನು ತಡೆದರು.

ಆನಂದನಿಗೆ ಅವರ ಮುಂದಿನ ಮಾತು ಇಂಗಿತವಾಯಿತು. ಮನಸ್ಸನ್ನು ಯೋಚನೆ ಕೊರೆಯಿತು. ಪದ್ಮ ಎದುರಿಗಿಲ್ಲದಿದ್ದರೂ ಅವಳ ಚಿತ್ರ ಸುಳಿಯಿತು.

" ಪದ್ಮಳ ಮದುವೆ ಹೇಗೆ ಮಾಡಿ ಮುಗಿಸಬೇಕೋ—ಆ ವಿಚಾರ ನನ್ನನ್ನು ಚುಚ್ಚುತ್ತಿದೆ" ಎಂದು ರಂಗರಾಯರು ಮುಂದುವರಿಸಿದರು.

" ಆ ಮಗುವನ್ನು ಕಂಡಾಗ ನನಗೆ ಬಹಳ ಸಂಕಟವಾಗುತ್ತೆ. ಅವಳಿಗೆ ವಯಸ್ಸು ಬಂತು. ನಿತ್ಯ ಅದೇ ವಿಷಯ ಹೇಳಿ ಹೇಳಿ ಸಾಕಾಗಿದೆ. ನಾಲ್ಕು ಮಂದಿಯಂತೆ ಅವಳಿಗೂ ಒಂದು ಬದುಕು ಬೇಡವೆ ? " ಎಂದು ನಾಗಮ್ಮನವರು ನೊಂದು ನುಡಿದರು.

ರಂಗರಾಯರ ಹೃದಯದ ಮೇಲೆ ಬರೆಹಾಕಿದಂತಾಯಿತು.

" ಮಗಳ ಮದುವೆ ಅಷ್ಟು ಸುಲಭವೆ ? ವರ ಬೇಡವೆ, ಹಣ ಬೇಡವೆ ? ನನ್ನ ಮನಸ್ಸೂ ಬೇಯುತ್ತಿದೆ. ದೇವರೇ ಗತಿ. ಹೂಂ, ಅದಕ್ಕೂ ಲಗ್ನ ಒದಗಬೇಕು."

" ಬಡವರ ಮೇಲೆ ದೇವರಿಗೂ ನಿರ್ದಯೆ " ಎಂದಿತು ನಾಗಮ್ಮನವರ ತಾಯಿಕರುಳು.

ಆನಂದನಿಗೆ ಒಂದೇ ಕ್ಷಣದಲ್ಲಿ ಆಸೆಯ ಬಟ್ಟಲು ಬರಿದಾದಂತೆನಿಸಿತು.

' ಇನ್ನೂ ಒಂದು ವರ್ಷ ಕಾಲೇಜ್ ವಿದ್ಯಾಭ್ಯಾಸ ! ನನಗಾಗಿ ಇನ್ನೂ ಎಷ್ಟು ಹಣ ಬೇಕು ? ನನ್ನ ಆನರ್ಸ್ ಮುಗಿಯುವ ವೇಳೆಗೆ ಸಂಸಾರದ ಗತಿ ? ಕಳೆದ ವರ್ಷವೇ ಸಾಲ ಎರಡು ಸಾವಿರಕ್ಕೆ ಮೀರಿತ್ತು ; ಈಗ ಎಷ್ಟಕ್ಕೇರಿದೆಯೊ ! ಜಮೀನೂ ಕೈಯಿಂದ ಜಾರುವಂತೆ ಕಾಣುತ್ತೆ. ಅಪ್ಪ ಹೇಗೋ ಸಂಸಾರದ ಗಾಲಿಯನ್ನು ಉರುಳಿಸುತ್ತಿದ್ದಾರೆ. ಎಷ್ಟು ದೂರ ಈ ಗಾಲಿ ಉರುಳೀತು ? ' —ಆನಂದನ ಜೀವ ನೊಂದುಕೊಂಡಿತು.

ಆ ಸಂಜೆ ಆನಂದ ಒಂಟಿಯಾಗಿ ಗಾಳಿಸೇವನೆಗೆ ಹೊರಟ. ಅವನ ಉದ್ವಿಗ್ನವಾದ ಮನಸ್ಸಿನಲ್ಲಿ ಅನೇಕ ವಿಷಯಗಳು ಎದ್ದು ಗೊಂದಲವನ್ನೆಬ್ಬಿಸಿದವು. ಹೃತ್ಪಟಲದ ಮೇಲೆದ್ದ ಒಂದೊಂದು ಭಾವನೆಯೂ ಅವನ ವಿಚಾರದ ಉರಿಗೆ ಎಣ್ಣೆಯನ್ನೆರಚಿತು. ಆ ಉರಿ ನಾಲಗೆ ಚಾಚಿತು.

ಪದ್ಮಳ ಚಿತ್ರ ಆನಂದನೆದುರು ನಿಂತು ಅವನ ಅಂತಃಕರಣವನ್ನು ಸ್ಪಂದನ ಮಾಡಿತು.

' ಪದ್ಮ ನನ್ನ ತಂಗಿಯಲ್ಲವೆ ? ಅವಳಿಗೆ ಯೌವನ ಬಂದಿದೆ. ಅವಳ ವಿಚಾರವಾಗಿ ನಾನು ಯಾವ ಯೋಚನೆಯನ್ನೂ ಮಾಡಿಲ್ಲ. ನಮಗೆಲ್ಲ

ತಾನೊಂದು ಹೊರೆಯೆಂದು ಅವಳು ಎಷ್ಟು ನೊಂದಿದ್ದಾಳೋ! ಅವಳಿಗೆ ಒಂದು ಬದುಕನ್ನು ಹೂಡಿಕೊಡುವುದು ನಮ್ಮೆಲ್ಲರ ಕರ್ತವ್ಯವಲ್ಲವೇ ?'

ಪದ್ಮಳ ಚಿತ್ರ ಅವನ ಮನಸ್ಸಿನಿಂದ ಜಾರಿ ರಂಗರಾಯರ ಚಿತ್ರ ಅಲ್ಲಿ ಮನೆಮಾಡಿತು.

'ಅಪ್ಪ ಭಾವಿಸಿರುವ ಹಾಗೆ ನಾನೇ ಮನೆಗೆ ಆಶಾದೀಪ! ಕುಟುಂಬದ ನೌಕೆಯನ್ನು ಮುಂದೆ ನಡಸುವ ನಾವಿಕನೂ ನಾನೇ! ಸಾಲ ಏರುತ್ತಿದೆ. ನನ್ನ ವಿದ್ಯಾಭ್ಯಾಸಕ್ಕೆ ಅಪ್ಪ ಇನ್ನೂ ಸಾಲಮಾಡಬೇಕಾಗಿದೆ. ಪದ್ಮಳ ಮದುವೆಯನ್ನು ಇನ್ನು ಎಷ್ಟು ದಿನ ಮುಂದಕ್ಕೆ ಹಾಕುವುದು? ಕತ್ತಲಲ್ಲಿ ಈ ಬಿರುಗಾಳಿಯನ್ನು ಎದುರಿಸುವುದು ಹೇಗೆ ?'

ಈ ಎಲ್ಲ ಯೋಚನೆಗಳೂ ಆನಂದನ ಅಂತರಂಗವನ್ನು ಕೊರೆದವು.

ತಿಳಿ ಮುಗಿಲುಗಳು ಆಕಾಶದಲ್ಲಿ ಚಿತ್ರವಿಚಿತ್ರವಾದ ಆಕಾರಗಳನ್ನು ತಾಳಿ ಗುರಿಯಿಲ್ಲದೆ ಅಲೆದಾಡುತ್ತಿದ್ದವು. 'ಅಂತೆಯೇ ಅಲ್ಲವೆ ಈಗ ನಿನ್ನ ತಲೆಯಲ್ಲಿಯ ವಿಚಾರಗಳು?'—ಆನಂದನ ಬುದ್ಧಿ ಅವನ ಮನಸ್ಸನ್ನು ಅಣಕಿಸಿತು.

ಆ ಸಂಜೆ ಆನಂದ ಬಹಳ ದೂರ ನಡೆದುಹೋದ. ಕಾಡುದಾರಿ ಮುಂದೆ ಮುಂದೆ ಡೊಂಕು ಡೊಂಕಾಗಿ ಚಾಚಿತ್ತು, ಆನಂದನ ವಿಚಾರದ ಹಾದಿಯಂತೆ. ಸೂರ್ಯನು ತನ್ನ ಕೊನೆಯ ಕಿರಣಗಳನ್ನು ಅಡಗಿಸಿಕೊಂಡು ಪಶ್ಚಿಮದ ಬಾನಂಚಿನಲ್ಲಿ ನಸುಗೆಂಪನ್ನು ಚೆಲ್ಲಿದ್ದನು. ಆ ಚಂಚಲ ಕಿರಣಗಳು ಸುತ್ತಲೂ ಕುಣಿದಾಡುತ್ತಿದ್ದ ಹಸುರನ್ನು ಮುತ್ತಿಟ್ಟಿದ್ದವು. ದೂರದ ತಮ್ಮ ಗದ್ದೆಯಲ್ಲಿ ಹುಲುಸಾಗಿ ಬೆಳೆದುನಿಂತ ಪೈರು ತಂಗಾಳಿಯಲ್ಲಿ ತಲೆತೂಗುತ್ತಿತ್ತು.

'ಈ ಭೂಮಿ ಈಗ ಗೋವಿಂದಯ್ಯನದು. ಅದು ಪುನಃ ನಿನ್ನದಾಗುವುದು ಭ್ರಾಂತಿ!' ಎಂದಿತು ಗದ್ದೆಯಲ್ಲಿ ನಿಂತಿದ್ದ ಬೆಳೆ.

ಮೂಡಲಲ್ಲಿ ಕಾರ್ಮೋಡಗಳು ಕ್ಷಿತಿಜಕ್ಕಿಳಿದು ಓಲಾಡುತ್ತಿದ್ದವು. ಆನಂದನ ಮನಸ್ಸಿನಲ್ಲಿ ಅನೇಕ ಸಮಸ್ಯೆಗಳು ಏಕಕಾಲದಲ್ಲಿ ಮುಸೆದಾಡಿದವು, ಬಿರುಗಾಳಿಗೆ ಸಿಕ್ಕಿದ ಅಲೆಗಳಂತೆ. ಮುಸಕು ಮುಸಕಾಗಿ ಕಾಮನಬಿಲ್ಲು ಹಬ್ಬಿತ್ತು. ಆನಂದನ ಆಸೆಯೂ ಮುಸಕಾಗಿತ್ತು.

ಬಹಳ ದೂರ ನಡೆದುಹೋಗಿದ್ದುದು ಆನಂದನಿಗೆ ಅರಿವಾಯಿತು. ಅಷ್ಟೇ ದಾರಿಯನ್ನು ಮತ್ತೆ ತುಳಿಯಬೇಕೆಂಬ ಅರಿವಾದಾಗ ಬೇಸರವಾಯಿತು.

ಆದರೆ ಬೇಸರಕ್ಕೆ ಎಡೆಗೊಡದೆ ಬೇರೆ ವಿಚಾರಗಳು ಮನಸ್ಸನ್ನು ಹೊಕ್ಕು ಭಾವನೆಯನ್ನು ಒಂದೇ ಕ್ಷಣದಲ್ಲಿ ಹಿಗ್ಗಿಸಿದವು.

ಆನಂದನ ಮನಸ್ಸು ಕಲ್ಪನೆಯ ಕುದುರೆಯನ್ನೇರಿ ಬೆಂಗಳೂರಿಗೆ ಹಾರಿತು. ತನ್ನ ಪರೀಕ್ಷೆ ಮುಗಿದ ಸಂಜೆ ಇಂದಿರೆ ಆನಂದನೊಡನೆ ಬಹಳ ಕಾಲ ಅವನ ಕೋಣೆಯಲ್ಲಿ ಕುಳಿತು ಮಾತನಾಡಿದ್ದಳು. ಅವನು ಬೇಸಗೆಗೆ ಊರಿಗೆ ಹೋಗುವ ವಿಚಾರ ಇಂದಿರೆಯ ಮನಸ್ಸನ್ನು ಬಾಡಿಸಿತ್ತು. ಆದರೂ ಇನ್ನೂ ಒಂದು ವರ್ಷಕಾಲ ಅವನಿಗೆ ತಮ್ಮ ಮನೆಯಲ್ಲಿಯೇ ವಾಸ ಎಂಬ ಯೋಚನೆ ಅವಳಿಗೆ ಸಮಾಧಾನವನ್ನು ತಂದುಕೊಟ್ಟಿತ್ತು. ಯಾವುದೋ ಅದೃಷ್ಟಹಸ್ತ ಅವರಿಬ್ಬರನ್ನೂ ಒಂದು ಬಂಧನಾತಂತುವಿನಿಂದ ಹತ್ತಿರ ತರುತ್ತಿದ್ದುದು ಅವರ ಅರಿವಿಗೆ ಬಂದಿರಲಿಲ್ಲ.

ಇಂದಿರೆ ಅವನೊಡನೆ ಆಡಿದ್ದ ಮಾತುಗಳನ್ನು ಆನಂದ ಮನಸ್ಸಿನಲ್ಲಿಯೇ ಮೆಲುಕುಹಾಕುತ್ತಿದ್ದ. ಅವಳ ಕೆಂದುಟಿಗಳ ಮೇಲಿದ್ದ ನಗುವಿನೊಡನೆ ಸ್ನೇಹದ ಭಾವನೆ ಬೆರತಿತ್ತು. ಅವಳ ಅಗಲವಾದ ಕಣ್ಣುಗಳಲ್ಲಿ ಅಸ್ಪಷ್ಟ ಪ್ರಶ್ನೆಗಳಿದ್ದವು.

'ಪೂರ್ತಿ ಬೇಸಗೆಯನ್ನು ನೀವು ಸಂಪಿಗೆಯಲ್ಲಿಯೆ ಕಳೆಯುತ್ತೀರಾ?' ಎಂದಿದ್ದಳು ಇಂದಿರೆ.

ಪ್ರಶ್ನೆಯ ಭಾವವನ್ನರಿತು ಆನಂದನ ಸಂತೋಷ ಉಕ್ಕಿತು.

'ಬೇಸಗೆ ರಜದಲ್ಲೂ ಬೆಂಗಳೂರಿನಲ್ಲಿ ನನಗೇನು ಕೆಲಸ?'

'ಸಂಪಿಗೆ ಸೇರುತ್ತಲೂ ನಮ್ಮೆಲ್ಲರನ್ನೂ ಮರೆತುಬಿಡುತ್ತೀರಿ.'

'ಎಲ್ಲರನ್ನೂ ಮರೆತುಬಿಡುವುದಿಲ್ಲ.'

'ಯಾರನ್ನು ನೀವು ಅಲ್ಲಿ ನೆನಸಿಕೊಳ್ಳುವುದು?'

'ಖಂಡಿತವಾಗಿ ಒಬ್ಬರನ್ನು.' ನಗುತ್ತ ಹೇಳಿದ್ದ ಆನಂದ.

'ಯಾರು ಆ ಒಬ್ಬರು?' ನಗುತ್ತ ಕೇಳಿದ್ದಳು ಇಂದಿರೆ.

'ನನ್ನೊಡನೆ ಈಗ ಮಾತನಾಡುತ್ತಿರುವವರು.'

ಇಬ್ಬರೂ ಗಟ್ಟಿಯಾಗಿ ನಕ್ಕಿದ್ದರು.

'ಇಂದಿರೆ ಎಂತಹ ಮಾಯಗಾತಿ!' ಎನ್ನಿಸಿತು ಆನಂದನಿಗೆ. ಅವಳ ಮುಗ್ಧಸ್ನೇಹ ಅವನ ಯೋಚನೆಗಳನ್ನೆಲ್ಲ ಮರೆಸಿತ್ತು. ಇಂದಿರೆಯ ಅಂತರಂಗದಲ್ಲಿ ತಾನೂ ಸುಳಿದಾಡಿರಬಹುದೆಂದು ಆಸೆ ಕಟ್ಟಿಕೊಂಡ.

'ಇಂದಿರೆಗೆ ವ್ಯಾಸಂಗದಲ್ಲಿ ಸಹಾಯಮಾಡಿದ್ದೇನೆ, ನಿಜ. ಆ ಅಲ್ಪ ಉಪಕಾರಕ್ಕಾಗಿ ಅವಳು ತನಗೆ ಕೊಟ್ಟಿರುವ ಸ್ಥಾನ ಸಲ್ಲುವುದೆ? ಹಾಗಾದರೆ ಬೇರೆ ಯಾವುದೋ ಉಚ್ಚತರದ ಭಾವನೆ ಅವಳ ಮನಸ್ಸಿನಲ್ಲಿರಬೇಕು. ಅದು ಎಂತಹ ಭಾವನೆ ಇರಬಹುದು? ಹೃದಯದ ಭಾವನೆ ಅಷ್ಟು ಸುಲಭ ವಾಗಿ ವಿಶ್ಲೇಷಣಕ್ಕೆ ಸಿಗುವುದಿಲ್ಲ. ಇಂದಿರೆಯಲ್ಲಿ ಹೊರಹೊಮ್ಮುವ ಭಾವನೆಯ ಅರಿವಿದೆಯೆ ನನಗೆ? ಆ ಭಾವನೆ ಪೂರ್ತಿಯಾಗಿ ನನ್ನ ಅರಿವಿಗೆ ಸಿಕ್ಕಿಲ್ಲ, ಸಿಗುವುದೇ ಇಲ್ಲ. ಬಹುಶಃ ನನ್ನಲ್ಲಿ ಇಂದಿರೆಗಿರುವ ಭಾವನೆಯೂ ಅಂತಹುದೆ.'

ಈ ಆಲೋಚನೆಗಳು ಆನಂದನ ಮನಸ್ಸನ್ನು ಬಹಳ ದೂರ ತೆಗೆದು ಕೊಂಡುಹೋಗಿ ಯಾವುದೋ ಕಲ್ಪನಾಪ್ರಪಂಚದಲ್ಲಿ ಗಾಳಿಯ ಪಟದಂತೆ ಹಾರಿಸಿಬಿಟ್ಟವು.

ಬಹಳ ದೂರ ದಾರಿ ಸಾಗಿತ್ತು. ಕತ್ತಲೆ ತೆರೆತೆರೆಯಾಗಿ ಹರಡಿ ಬಂದಿತು. ಅಲೆದಾಡುತ್ತಿದ್ದ ಮುಗಿಲುಗಳು ಒಟ್ಟುಗೂಡಿ ಕಪ್ಪುಕಟ್ಟುತ್ತಿದ್ದವು. ಬೇಸರದ ಬದುಕಿನಲ್ಲಿಯ ಆಸೆಯಂತೆ ಆ ಕಪ್ಪು ಮೋಡಗಳಲ್ಲಿ ಕೋಲ್ಮಿಂಚು ಸುಳಿದು ಹೋಯಿತು.

ದೂರದಲ್ಲಿ ಮನೆಯ ದೀಪಗಳು ಮಿಣುಕು ಹುಳುಗಳಂತೆ ಮಿನುಗುತ್ತಿ ದ್ದವು. ಅವು ಗಾಳಿಯೊಡನೆ ಹೋರಾಡಿ ಅಲುಗಾಡುತ್ತಿದ್ದವು. ಹತ್ತಿರದಲ್ಲಿ ಕೇಳುತ್ತಿದ್ದ 'ಘಮ್ ಘಮ್' ಶಬ್ದದ ಕಡೆಗೆ ಆನಂದನ ಕಣ್ಣು ತಿರುಗಿತು. ಆ ಶಬ್ದ ಕಮ್ಮಾರನ ಹಟ್ಟಿಯಿಂದ ಕತ್ತಲಿನಲ್ಲಿ ತೂರಿಬರುತ್ತಿತ್ತು. ಕಮ್ಮಾರನು ಕೆಂಗಾದ ಕಬ್ಬಿಣದ ತುಂಡೊಂದನ್ನು ಅಡಿಗಲ್ಲಿನ ಮೇಲಿಟ್ಟು ಚಮ್ಮಟಿಗೆಯಿಂದ ಚಚ್ಚುತ್ತಿದ್ದನು. ಕುಲುಮೆಯಿಂದ ಹಾರುತ್ತಿದ್ದ ಕೆಂಗಿಡಿಗಳು ಕ್ಷಣದಲ್ಲಿ ಬೆಳಗಿ ಕತ್ತಲಿನಲ್ಲಿ ಕರಗಿಹೋಗುತ್ತಿದ್ದವು. ಕಮ್ಮಾರನ ದಣಿದ ಮೈಯಿಂದ ಬೆವರೂರುತ್ತಿತ್ತು.

ಅವನು ತನ್ನ ಮನಸ್ಸಿನಲ್ಲಿಯ ಯಾವ ರೂಪವನ್ನು ಆ ಕಬ್ಬಿಣದ ತುಂಡಿಗೆ ಅಂಟಿಸುತ್ತಾನೋ! ಮನುಷ್ಯನ ಬದುಕೂ ಕೆಂಗಾದ ಆ ಕಬ್ಬಿಣದಂತೆ ಅಡಿಗಲ್ಲಿನ ಮೇಲಿದೆ. ಅದೃಷ್ಟದ ಎಷ್ಟು ಚಮ್ಮಟಿಗೆಯ ಏಟುಗಳನ್ನು ಸಹಿಸಿ ಕೊಳ್ಳಬೇಕೋ, ಅದು ಒಂದು ಆಕಾರವನ್ನು ತಾಳಲು?

ಮನೆಯನ್ನು ಸೇರುವ ವೇಳೆಗೆ ಆನಂದನ ಬಟ್ಟೆಗಳ ಮೇಲೆ ಹನಿಗಳು

ಬಿದ್ದಿದ್ದವು.

" ಎಲ್ಲಿ ಹೋಗಿದ್ದೆ ಆನಂದ, ಇಷ್ಟು ಹೊತ್ತು ? ಮಳೆ ಬಂತು. ಪದ್ಮ ನಿನಗೋಸ್ಕರ ಊಟ ಮಾಡದೆ ಕಾದಿದ್ದಾಳೆ " ಎಂದರು ನಾಗಮ್ಮನವರು.

ಬೇಸಗೆ ರಜ ಕಳೆದು ಆನಂದ ಬೆಂಗಳೂರಿಗೆ ಹೊರಡುವ ದಿನ ಬಂದೇ ಬಂದಿತು.

೪

ಇಂದಿರೆಗೆ ಬೇಸಗೆ ಕಳೆಯುವುದು ಕಷ್ಟವಾಗಿತ್ತು. ಆನಂದನ ಕೊಠಡಿಯಲ್ಲಿಯೇ ಹೆಚ್ಚು ಕಾಲವನ್ನು ಕಳೆಯುತ್ತಿದ್ದಳು. ಆನಂದನೊಡನೆ ತಾನು ಕಳೆದ ಅನೇಕ ರಸಗಳಿಗೆಗಳ ನೆನಪು ಅವಳ ಮನಸ್ಸಿನಲ್ಲಿ ಸುಳಿದಾಡುತ್ತಿತ್ತು. ಮನಸ್ಸು ಜಾಗ್ರದವಸ್ಥೆಯಿಂದ ಕನಸಿಗೆ ಜಾರುತ್ತಿತ್ತು.

' ನೀವು ಈ ದಿನ ಊಟ ಮಾಡಿಲ್ಲ.'

' ನಿನಗೆ ಹೇಗೆ ಗೊತ್ತು ? '

' ಎಷ್ಟು ಹೊತ್ತಿನಲ್ಲಿ ಮಾಡಿದಿರಿ ? '

' ಹನ್ನೆರಡೂವರೆಯಲ್ಲಿ.'

' ನಿನ್ನೆ ದಿವಸವಲ್ಲವೆ ? '

'...............'

' ಹನ್ನೆರಡೂವರೆಯಲ್ಲಿ ಯಾವುದೋ ಪುಸ್ತಕ ಓದುತ್ತಿದ್ದಿರಿ.'

ಆನಂದನ ನಗುಮುಖದಲ್ಲಿ ನೋವಿನ ಕುಡಿಯಿತ್ತು.

' ನೀನು ನನಗಾಗಿ ಬಹಳ ಚಿಂತೆ ಹಚ್ಚಿಕೊಳ್ಳುತ್ತಿ, ಇಂದಿರೆ.'

' ನಾನು ಹಚ್ಚಿಕೊಂಡಿಲ್ಲ, ನೀವು ಹಚ್ಚುತ್ತಿದ್ದೀರಿ.'

ಇಂದಿರೆಯ ಕಣ್ಣು ಆನಂದನ ಹೃದಯವನ್ನು ಭೇದಿಸಿತ್ತು. ಅವಳ ಮುಖದ ಮೇಲೆ ಕುಣಿದಾಡುತ್ತಿದ್ದ ನಾಟ್ಯಭಂಗಿಯಲ್ಲಿ ಅನುಕಂಪ ಬೆರತಿತ್ತು. ಅವಳು ಒಳಗೆ ಓಡಿದಳು. ಕೆಲವು ನಿಮಿಷಗಳಲ್ಲಿ ಗೋಪಾಲರಾಯರು ಕೊಠಡಿಗೆ ಬಂದರು. ವಾತ್ಸಲ್ಯದಿಂದ,

' ಎಷ್ಟು ಸಂಕೋಚ ನಿನಗೆ, ಆನಂದ ? ನಮ್ಮ ಮನೆಯಲ್ಲಿ ನಿನಗೆ ಊಟವಿಲ್ಲವೆ ? ಎರಡು ಗಂಟೆ ಮೀರಿಹೋಗಿದೆ. ಏಳು ಊಟಕ್ಕೆ ' ಎಂದು ಕೈಹಿಡಿದು

ಆನಂದನನ್ನು ಒಳಗೆ ಕರೆದುಕೊಂಡು ಹೋಗಿದ್ದರು.

ಆನಂದ ಊಟ ಮಾಡುತ್ತಿದ್ದಾಗ ಅವನ ದೃಷ್ಟಿ ಇಂದಿರೆಯ ಮೇಲೆಯೇ ಇತ್ತು. ಇಬ್ಬರ ಕಣ್ಣುಗಳೂ ಆಗಾಗ ಕೂಡಿದವು. ಊಟದ ಮನೆಯಲ್ಲಿ ಅವಳು ಚಿಟ್ಟೆಯಂತೆ ಹಾರಾಡುತ್ತಿದ್ದಳು. ಲಕ್ಷಮ್ಮನವರು ಪ್ರೀತಿಯಿಂದ ಬಡಿಸುತ್ತಿದ್ದರು.

ಮುಂದಿನ ಎರಡು ವಾರಗಳು ಆನಂದನಿಗೆ ಊಟ ತಿಂಡಿ ಗೋಪಾಲ ರಾಯರ ಮನೆಯಲ್ಲಿಯೇ. ಕಾಫಿ ತಿಂಡಿ ಕೊಡುವ ಕೆಲಸ ಇಂದಿರೆಯ ಪಾಲಿಗೆ. ಆ ಎರಡು ವಾರಗಳಲ್ಲಿ ಅವರಿಬ್ಬರಲ್ಲಿ ಸಲಿಗೆ ಹೆಚ್ಚಿತು.

ಬೇಸಗೆಯ ನಡುಹಗಲುಗಳಲ್ಲಿ ಇಂದಿರೆ ಸುಮ್ಮನೆ ಆರಾಮಾಸನದ ಮೇಲೆ ಮಲಗಿಬಿಡುತ್ತಿದ್ದಳು. ನಿದ್ರೆ ಎಚ್ಚರಗಳ ನಡುವೆ ಅವಳು ಹಗಲುಗನಸು ಗಳನ್ನು ಕಾಣುತ್ತಿದ್ದಳು. ಆಗ ಆನಂದನ ಹೃದಯದ ಕೆಲವು ಪದರಗಳು ಅವಳಿಗೆ ಗೋಚರವಾಗುತ್ತಿದ್ದವು.

'ನನ್ನ ಹೃದಯವನ್ನು ಅವನು ಅರ್ಥಮಾಡಿಕೊಂಡಿರುವುದನ್ನು ನಾನು ಅನೇಕ ವೇಳೆ ಗುರ್ತಿಸಿದ್ದೇನೆ. ಅವನ ಹೃದಯದಲ್ಲಿ ನಾನು ಗುರುತಿಸಿರುವು ದೇನು? ಅಲ್ಲಿ ನೆಟ್ಟುಹೋಗಿರುವ ನನ್ನ ಬಿಂಬವನ್ನು. ಅದನ್ನು ನಾನು ಹೇಗೆ ತಿಳಿದೆ? ಮಾತನ್ನೇ ಆಡದ ಅವನ ಕಣ್ಣುಗಳು ಅದನ್ನು ತಿಳಿಸಿವೆ.'

ಅವಳ ಹೃದಯ ಕೂಡಲೆ ಹಿಗ್ಗಿ ತನ್ನ ಭಾವನೆಗಳಿಗೆ ಸಾಕ್ಷಿ ಕೊಟ್ಟಿತು. ಆ ಕ್ಷಣ ಅವಳ ಮುಖ ಅರಳುಮಲ್ಲಿಗೆಯಾಯಿತು.

ಇಂದಿರೆಗೆ ಕಾದಂಬರಿಗಳನ್ನೋದುವುದರಲ್ಲಿದ್ದ ಉತ್ಸಾಹ ಮತ್ತೂ ಹೆಚ್ಚಿತು. ಒಂದಲ್ಲ ಒಂದು ಕಾದಂಬರಿ ಯಾವಾಗಲೂ ಅವಳ ಕೈಯಲ್ಲಿರುತ್ತಿತ್ತು. ಕಾದಂಬರಿಕಾರನ ಕಲ್ಪನಾಪ್ರಪಂಚದಲ್ಲಿ ಅವಳ ಮನಸ್ಸು ಹಕ್ಕಿಯಂತೆ ಹಾರಾಡಿ ಗಾಳಿಗೋಪುರಗಳನ್ನು ಕಟ್ಟುತ್ತಿತ್ತು. ಅದರ ಪರಿಣಾಮವಾಗಿ ಅವಳ ಭಾವನಾಪ್ರಪಂಚ ವಿಶಾಲವಾಯಿತು. ಸೂಕ್ಷ್ಮವಾದ ಅಂತರಂಗದ ವ್ಯಾಪಾರಗಳಲ್ಲಿ ಸಿಕ್ಕಿ ಯಾವಾಗಲೂ ಮಿಡಿಯುತ್ತಿರುವ ಪ್ರೇಮಿಗಳ ಹೃದಯ ಕೋಶವನ್ನು ಅರ್ಥಮಾಡಿಕೊಳ್ಳಲು ಮನಸ್ಸು ಕಾತರಪಡುತ್ತಿತ್ತು. ಪರಸ್ಪರ ಅಂತರಂಗದ ತರಂಗಗಳನ್ನು ಗುರುತಿಸಲಾರದೆ ಅವರ ಬಾಳನೌಕೆ ಹೇಗೆ ನಿರಾಶೆಯ ಬಂಡೆಗೆ ಅಪ್ಪಳಿಸಿ ಚೂರುಚೂರಾಗಬಹುದು ಎಂಬುದನ್ನು ಅರಿತು

ಅವಳ ಎದೆ ನಡುಗುತ್ತಿತ್ತು. ದುರಂತವಾದ ಒಂದು ಕಾದಂಬರಿಯನ್ನೋದಿದಾಗ ನಾಯಕ ನಾಯಕಿಯರಿಗಾಗಿ ಅವಳ ಹೃದಯ ಅನುಕಂಪಗೊಳ್ಳುತ್ತಿತ್ತು. ಆದರ್ಶಗಳ ಘರ್ಷಣೆಯಲ್ಲಿ ಹೇಗೆ ಬಿರುಗಾಳಿಯ ಏಟಿನಿಂದ ಹೊಯ್ದಾಟಕ್ಕೆ ಸಿಕ್ಕಿದ ತೆರೆಗಳ ಮೇಲೂ ಅಸಹಾಯಕವಾಗಿ ಅವರು ತಮ್ಮ ಜೋಡಿ ಬದುಕನ್ನು ತೇಲಿಬಿಡಬೇಕಾಯಿತು ಎಂಬುದನ್ನು ಮನಗಂಡು ವಿಧಿಯ ವ್ಯಾಪಾರಕ್ಕಾಗಿ ಬೇಸರಪಡುತ್ತಿದ್ದಳು. ಅವರ ಸಮಸ್ಯೆಗಳ ಜಾಲವನ್ನು ಬಿಡಿಸಲು ಹೊರಟು ತಾನೂ ಸೋತುಹೋಗುತ್ತಿದ್ದಳು. ಮತ್ತೆ ಕೆಲವು ಕತೆಗಳಲ್ಲಿ, ಎಷ್ಟು ತ್ಯಾಗಮಾಡಿದರೂ ಪ್ರೇಮದ ಭಿಕ್ಷಾಪಾತ್ರೆ ಬರಿದಾಗಿಯೇ ಉಳಿದುಹೋದ ಬದುಕಿಗಾಗಿಯೂ ಅವಳ ಕಣ್ಣು ಒದ್ದೆಯಾಗುತ್ತಿತ್ತು. ಕೂಡಲೆ ತನ್ನ ಮತ್ತು ಆನಂದನ ಹೃದಯಗಳಲ್ಲಿ ಒಂದೇ ತಾಳದಿಂದ ಮಿಡಿಯುತ್ತಿದ್ದ ಭಾವನೆಗಳ ನೆನಪಾಗಿ ಅವಳ ಅಂತರಂಗದಲ್ಲಿ ಸಂತೋಷದ ಚಿಲುಮೆ ಉಕ್ಕುತ್ತಿತ್ತು. ಪುಸ್ತಕದ ಪುಟಗಳೆಲ್ಲ ಮುಗಿದ ಮೇಲೂ ವಾಸ್ತವಪ್ರಪಂಚಕ್ಕಿಳಿಯಲು ಸ್ವಲ್ಪ ಕಾಲವಾಗುತ್ತಿತ್ತು, ಅವಳಿಗೆ.

ಅಂದು ಸಾಯಂಕಾಲ ಇಂದಿರೆ ಪಬ್ಲಿಕ್ ಲೈಬ್ರರಿಯಿಂದ ಹೊರಬಿದ್ದಾಗ ವಿಶೇಷ ಬೆಡಗಿನಿಂದ ಕಂಡಳು. ಮನೆಯಿಂದ ಹೊರಟಾಗ ಅರಳುತ್ತಿದ್ದ ಅವಳ ಲಾವಣ್ಯವನ್ನು ನೋಡಿ ಲಕ್ಷ್ಮಮ್ಮನವರ ಹೃದಯ ತುಂಬಿಬಂದಿತ್ತು. ಅವರ ತುಂಬಿದ ನೋಟದಲ್ಲಿ ಹೆಮ್ಮೆ ಮೂಡಿತ್ತು.

'ನನ್ನ ಬಾಳಬಳ್ಳಿಯ ಪುಷ್ಪವದು' ಎಂದಿತು ಅವರ ಹೃದಯ.

ಕೆಲವು ಹೆಜ್ಜೆಗಳನ್ನು ಹಾಕುತ್ತಿರುವಾಗಲೇ ರಾಜು ಅವಳನ್ನು ಸಂಧಿಸಿದ. ರಾಜುವಿನ ಮುಖದ ಮೇಲೆ ಇಂದಿರೆಯೊಡನೆ ಮಾತನಾಡಬೇಕೆಂಬ ಭಾವ ಕಾಣಿಸಿತು. ಅವಳು ನಿಂತಳು.

ರಾಜು ಆನಂದನ ಹಳೆಯ ಸ್ನೇಹಿತ. ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಲಾರದೆ ಅವನು ವ್ಯಾಸಂಗವನ್ನು ಮುಕ್ತಾಯಮಾಡಿದ್ದ. ಲಲಿತಕಲೆಗಳಲ್ಲಿ ಅವನಿಗೆ ಹೆಚ್ಚು ಅಭಿರುಚಿ. ಅವನ ಪಾಲಿಗೆ ದೊಡ್ಡ ಆಸ್ತಿಯನ್ನು ಬಿಟ್ಟುಹೋಗಿದ್ದರು ಅವನ ತಂದೆ. ರಾಜು ಅನೇಕ ಉದ್ಯಮಗಳಲ್ಲಿ ಕೈಹಾಕಿ ಯಾವುದೂ ಸರಿಯಾಗಿ ನಡೆಯದೆ ಕೊನೆಗೆ ಒಂದು ಕಲಾಶಾಲೆಯನ್ನು ತೆರೆದಿದ್ದ.

ರಾಜು ಆನಂದನ ಕೊಠಡಿಗೆ ಅನೇಕ ಬಾರಿ ಬಂದುಹೋಗಿದ್ದ. ಆನಂದ ಅವನನ್ನು ಗೋಪಾಲರಾಯರಿಗೆ ಪರಿಚಯ ಮಾಡಿಕೊಟ್ಟಿದ್ದ. ಅವನ ಕಲೆಯನ್ನು ಮೆಚ್ಚಿ ಅವರು ಕೆಲವು ಚಿತ್ರಪಟಗಳನ್ನು ಅವನಿಂದ ಕೊಂಡಿದ್ದರು. ರಾಜು ಗೋಪಾಲರಾಯರ ಮನೆಗೆ ಬಂದಾಗ ಇಂದಿರೆ ಎಷ್ಟೋ ಬಾರಿ ಅವನ ಕಣ್ಣುಮುಂದೆ ಸುಳಿದಿದ್ದಳು. ಇಂದಿರೆಯನ್ನು ನೋಡುವ ಉದ್ದೇಶದಿಂದಲೇ ಅವನು ಆನಂದನನ್ನು ಹುಡುಕಿಕೊಂಡು ಕೆಲವು ಸಲ ಅವನ ಕೊಠಡಿಗೆ ಬಂದುದೂ ಉಂಟು. ಆದರೆ ಇಂದಿರೆಯ ಮುಗ್ಧತೆ ಅವನ ಮನಸ್ಸನ್ನು ತೆರವು ಮಾಡಿತ್ತು.

" ಆನಂದ ಬಂದರೆ ? " ಎಂದ ರಾಜು.

" ಇನ್ನು ಮೂರು ನಾಲ್ಕು ದಿನಗಳಲ್ಲಿ ಬರಬಹುದು." ಇಂದಿರೆ ಉತ್ತರ ಕೊಟ್ಟಳು.

" ಕಾಗದ ಬಂದಿತ್ತೆ ? "

" ನಿನ್ನೆ ದಿನ ಬಂತು."

" ವ್ಯಾಸಂಗ ಮುಂದುವರಿಸುತ್ತಾರಷ್ಟೇ ? "

" ಮುಂದುವರಿಸದೆ ಏನು ? "

" ಏನೋ ತೊಂದರೆಗಳು ಎಂದು ಹೇಳಿದ್ದರು."

ಇಂದಿರೆಗೆ ಮಾತನ್ನು ಮುಂದುವರಿಸಲು ಬೇಸರವಾಯಿತು. ಅವನ ತೊಂದರೆಗಳೇನು ಎನ್ನುವುದು ಅವಳಿಗೆ ಅಷ್ಟು ಸ್ಪಷ್ಟವಾಗಿರದಿದ್ದರೂ ಹಣ ಕಾಸಿನ ಮುಗ್ಗಟ್ಟಿರಬಹುದು ಎಂದು ಊಹೆ ಮಾಡಿದಳು.

ರಾಜುವಿನ ಪ್ರಶ್ನೆ ಬೇರೆ ಜಾಡನ್ನು ಹಿಡಿಯಿತು.

" ಪರೀಕ್ಷೆಯಲ್ಲಿ ಪಾಸಾಗಿದ್ದಕ್ಕೆ ಕಂಗ್ರ್ಯಾಟ್ಸ್ (congrats)." ಅವನ ಕಣ್ಣುಗಳು ಇಂದಿರೆಯ ಮುಖದಲ್ಲಿ ನೆಟ್ಟಿದ್ದವು.

ಅಷ್ಟೊಂದು ಮಾತನಾಡುವಷ್ಟು ಇಂದಿರೆಗೆ ರಾಜುವಿನ ಪರಿಚಯವಿರಲಿಲ್ಲ. ಅವನು ಆನಂದನ ಸ್ನೇಹಿತನೆಂದು ಮಾತ್ರ ಗೊತ್ತಿತ್ತು.

" ಥ್ಯಾಂಕ್ಸ್ " ಎಂದಳು ಇಂದಿರೆ

ಅವಳ ಮುಗುಳ್ನಗೆ ರಾಜುವಿನ ಮನಸ್ಸನ್ನು ಹಿಗ್ಗಿಸಿತು.

ಇಂದಿರೆ ಮುಂದೆ ನಡೆದಳು. ರಾಜು ಆಗ ಮಾತನ್ನು ಮುಗಿಸಲೇ

ಬೇಕಾಯಿತು.

"ಆನಂದ ಬರುತ್ತಲೇ ನಾನು ಕೇಳಿದೆ ಎಂದು ದಯವಿಟ್ಟು ತಿಳಿಸುತ್ತೀರಾ ?"

"ಆಗಲಿ."

ಸಾಯಂಕಾಲ ತಿಳಿಯಾಗಿತ್ತು. ಮರಗಳು ತೋಳುಗಳನ್ನು ಬೀಸಿ ಮಂದಮಾರುತವನ್ನು ಹರಡುತ್ತಿದ್ದವು. ಸೂರ್ಯನ ಸಂಜೆ ಕಿರಣಗಳು ಪ್ರಕೃತಿ ಸೌಂದರ್ಯವನ್ನು ತಮ್ಮ ಉದ್ದವಾದ ತೋಳುಗಳಿಂದ ಅಪ್ಪಿದ್ದವು. ಆವರಣ ಮಾಯಾವಿಯ ತೋಟದಂತೆ ಸುಂದರವಾಗಿತ್ತು. ಇಂದಿರೆಯ ನೆರಳು ನೀಳವಾಗಿ ಹಸುರು ಹುಲ್ಲಿನ ಮೇಲೆ ಚಾಚಿಹೋಗಿತ್ತು.

'ಎಂತಹ ಅಪ್ಸರೆ, ಇಂದಿರೆ' ಎಂದವು ರಾಜುವಿನ ಕಣ್ಣುಗಳು.

ಆ ಸಂಜೆ ಇಂದಿರೆಯ ರೂಪರಾಶಿಯ ಪೂರ್ಣ ದರ್ಶನವಾಯಿತು ರಾಜುಗೆ. ಅವನು ಮೈಮರೆತಿದ್ದ.

೫

ರಾಜು ತನ್ನ ಕಲಾಗಾರವನ್ನು ನೇರವಾಗಿ ಸೇರಿದ. ಇಂದಿರೆ ಎದುರಿಗಿರದಿದ್ದರೂ ಅವಳ ರೂಪರೇಖೆಗಳೆಲ್ಲ ಅವನ ಮನಃಪಟಲದ ಮೇಲೆ ಮುದ್ರೆಯೊತ್ತಿದ್ದವು. ಸುತ್ತಲೂ ದೃಷ್ಟಿ ಚೆಲ್ಲಿದ. ಕೊಠಡಿಯ ವರ್ಣರಂಜಿತ ಗೋಡೆಗಳ ಮೇಲೆ ಶೃಂಗಾರಮಯವಾದ ಚಿತ್ರಪಟಗಳು ಕಂಗೊಳಿಸಿದವು. ಅವನ ಕಣ್ಣೆದುರು ತಾನೇ ಸೃಷ್ಟಿಸಿದ್ದ ಒಬ್ಬ ನಾರಿಯ ಸೌಂದರ್ಯಮೂರ್ತಿಯಿತ್ತು. ಕೂಡಲೆ ಅದನ್ನು ಅವನ ಕಣ್ಣು ಹೊಕ್ಕು ಆ ಚಿತ್ರದ ರೇಖೆಗಳನ್ನೆಲ್ಲ ಬಿಡಿಸಿತು. ಆ ಕಲಾಕೃತಿಯನ್ನು ಪೂರ್ಣಮಾಡಿದ ದಿನ ಅವನು ತನ್ನ ಕುಂಚದ ಮಾಯಾಶಕ್ತಿಯನ್ನು ಮನಸಾ ಮೆಚ್ಚಿಕೊಂಡಿದ್ದ. ಆ ಸಂಜೆ ತಾನು ಕಂಡ ಇಂದಿರೆಯ ಚಿತ್ರವೂ ಅವನ ಮನಸ್ಸಿನೆದುರು ನಿಂತಿತು. ಅವಳ ಮೋಹನರೂಪ ಅವನ ಕುಂಚದ ಕಲ್ಪನೆಯನ್ನು ಸೋಲಿಸಿತ್ತು. ತನ್ನ ಮುಂದಿದ್ದ ಚಿತ್ರದಲ್ಲಿ ಇಂದಿರೆಯ ರೂಪದಲ್ಲಿ ಕಂಡ ಅನೇಕ ಸೌಂದರ್ಯರೇಖೆಗಳು ಅವನಿಗೆ ಕಾಣಲಿಲ್ಲ.

ರಾಜು ಕಣ್ಣೆದುರು ಸುಳಿದುಹೋಗಿದ್ದ ಅನೇಕ ಯುವತಿಯರ ಬಿಂಬಗಳು ಏಕಕಾಲದಲ್ಲಿ ಅವನ ನೆನಪಿನ ತೆರೆಯ ಮೇಲೆ ಕಾಣಿಸಿಕೊಂಡವು. ಒಂದೊಂದು

ಬಿಂಬದಲ್ಲಿಯೂ ಒಂದೊಂದು ಆಕರ್ಷಣೀಯವಾದ ಭಂಗಿ ಅವನಿಗೆ ಗೋಚರ ವಾಯಿತು. ಆ ಬಿಂಬಗಳ ನಡುವೆ ಇಂದಿರೆಯ ರೂಪು ಪ್ರಕಾಶಿಸಿತು. ಆ ತೇಜಸ್ಸಿನಲ್ಲಿ ಉಳಿದೆಲ್ಲ ರೂಪಗಳೂ ಕಾಂತಿಹೀನವಾದವು.

'ದೇವರು ಸೃಷ್ಟಿಸಿರುವ ಕಲಾಮೂರ್ತಿ, ಇಂದಿರೆ. ಅದು ಜೀವಂತ ಕಲಾಮೂರ್ತಿ. ಅದರ ನೈರಕ್ತದಲ್ಲಿ ಕಾವಿದೆ, ಹೃದಯದಲ್ಲಿ ಮಿಡಿತವಿದೆ. ನಿನ್ನ ನಿರ್ಜೀವ ಕುಂಚ ಅಂತಹುದನ್ನು ಸೃಷ್ಟಿಸೀತೆ!' ಎಂದಿತು ರಾಜುವಿನ ಮನಸ್ಸು.

ಆ ರಾತ್ರಿ ರಾಜುವಿನ ಮನಸ್ಸಿನಲ್ಲಿ ನಾನಾ ಯೋಚನೆಗಳು ಮೂಡಿ ಹೋದವು. ಅವುಗಳಿಗೆಲ್ಲ ಮೂಲ, ಅವನು ಆ ಸಂಜೆ ಕಂಡ ಇಂದಿರೆ! ಆಗ ಮನಸ್ಸು ಆನಂದನ ಕಡೆ ಹರಿಯಿತು. ಅಸೂಯೆ ತಲೆಯೆತ್ತಿತು. ಅವನ ತಲೆಯಲ್ಲಿ ಅಶಾಂತವಾದ ಆಲೋಚನೆಗಳಿದ್ದವು.

'ನಾನೇ ಆನಂದನಾಗಿದ್ದಿದ್ದರೆ!'

'ನೀನು ಆನಂದನಾಗಿಲ್ಲವಲ್ಲ!'

'ಇಂದಿರೆ ನನ್ನವಳಾಗುವುದು ಸಾಧ್ಯವಾದೀತೆ?'

'ಅಷ್ಟು ದೂರ ಓಡಿತೋ ನಿನ್ನ ಮನಸ್ಸು?'

'ನನ್ನ ಮನಸ್ಸು ಕಲಕಿಹೋಗಿದೆ.'

'ಯಾರು ಕಲಕಿದವರು?'

'ಸಂಜೆ ನಾನು ಕಂಡ ಇಂದಿರೆ.'

'ಸುಂದರವಾದ ಒಂದು ವಸ್ತು ಆಸೆಪಟ್ಟವರದೆಲ್ಲ ಹೇಗಾದೀತು? ಅದು ಯಾರದೋ ಒಬ್ಬರದಾದೀತು.'

'ಆ ಒಬ್ಬ ನಾನೇ ಆಗಬಾರದೇಕೆ?'

'ಇಂದಿರೆಯ ವಿಷಯ ಹೇಳು.'

'ಅದೇ ವಿಷಯವನ್ನೇ ನಾನು ಹೇಳಿದ್ದು.'

'ಆ ಒಬ್ಬನು ನೀನಲ್ಲ.'

'ಆ ಒಬ್ಬನು ಇಂದಿರೆಯ ಹೃದಯವನ್ನು ಆಗಲೆ ಗೆದ್ದಿದ್ದಾನೆಯೆ?'

'ಓಹೋ! ಅಂತಹ ಚೆಲುವೆಯ ಹೃದಯವನ್ನು ಇಷ್ಟು ದಿನಗಳ ವರೆಗೆ ಯಾರೂ ಗೆಲ್ಲದೆ ಇರುವುದುಂಟೆ?'

'ನಾನು ನಿರಾಶನಾಗಲಾರೆ.'

'ಹಾಗಾದರೆ ಆಸೆಯೇ ನಿನ್ನನ್ನು ಸುಟ್ಟುಹಾಕುತ್ತದೆ'

'ನೀನು ಹೇಳಿದ ಆ ಒಬ್ಬನು ಯಾರು ?'

'ತೀಡೇನು ಮಾಡುತ್ತೀ ನೀನು ?'

'ನನ್ನ ಆಸೆಯನ್ನು ಗೆದ್ದುಕೊಳ್ಳಲು ಪ್ರಯತ್ನಿಸುತ್ತೇನೆ.'

'ನಿನ್ನ ಪ್ರಯತ್ನ ವ್ಯರ್ಥ.'

'ವ್ಯರ್ಥವೇಕೆ ?'

'ನಿನ್ನ ಮನಸ್ಸು ಕಲ್ಮಷದಿಂದ ತುಂಬಿದೆ. ಎಷ್ಟು ಹೆಣ್ಣುಗಳ ರೂಪಗಳು ಅಲ್ಲಿ ಮನೆಮಾಡಿಕೊಂಡಿವೆಯೋ! ಒಂದು ರೂಪವನ್ನು ನೋಡಿ ಮೆಚ್ಚುತ್ತೀ. ಅದಕ್ಕಿಂತಲೂ ಹೆಚ್ಚು ಚೆಲುವಾದ ರೂಪ ಕಂಡರೆ ಅದರ ಬೆನ್ನುಹತ್ತುತ್ತದೆ ನಿನ್ನ ಮನಸ್ಸು. ನಾನೂ ಹೇಳುತ್ತೇನೆ, ಇಂದಿರೆಯಂತಹ ಚೆಲುವೆಯನ್ನು ನೀನು ಬೇರೆ ನೋಡಲಾರೆ. ಆದರೆ ಏಕೆ ಸುಮ್ಮನೆ ಆಕಾಂಕ್ಷೆಯಿಂದ ಸುಟ್ಟುಹೋಗುತ್ತೀ ?'

'ನನ್ನ ಬಾಳು ಅವಳಿಲ್ಲದೆ ಮುಂದೆ ನಡೆದರೂ ವ್ಯರ್ಥವೇ.'

'ಅವಳಿಗಾಗಿ ನೀನು ಆಸೆಯನ್ನು ಬಲಿಸಿಕೊಂಡರೆ ನಿನ್ನ ಆಸೆಯೇನೋ ಹಾಳೇ, ಜೊತೆಗೆ ಅವಳ ಬಾಳನ್ನೂ ಬೆಂಕಿಯ ಪಾಲು ಮಾಡೀಯೆ, ಜೋಕೆ.'

'ನನ್ನವಳಾಗದಿದ್ದರೆ ಅವಳ ಬಾಳು ಹಾಳಾದರೇನು ?'

'ಪಾಪೀ, ಎಂತಹ ಮಾತಾಡುತ್ತೀ! ನಿನ್ನವಳಾಗದಿದ್ದರೆ ಇಂದಿರೆಯ ಅಷ್ಟೊಂದು ಸೌಂದರ್ಯರಾಶಿಯೂ ಮಣ್ಣುಪಾಲಾಗಬೇಕೆ ?'

'ನನ್ನ ಪ್ರಶ್ನೆಯನ್ನೇ ಮರೆಸಿದೆಯಲ್ಲಾ !'

'ಏನದು ?'

'ನೀನು ಹೇಳಿದ ಆ ಒಬ್ಬನು ಯಾರು ?'

'ನಿನ್ನ ಮನಸ್ಸು ಆಗಲೆ ಅದನ್ನು ಊಹಿಸಿದೆ.'

'ಯಾರು—ಆನಂದನೆ ?'

'ಹೌದು, ಅವನೇ—'

ರಾಜುಗೆ ಎಚ್ಚರವಾಯಿತು. ಸೂರ್ಯನ ಎಳೆಯ ಕಿರಣಗಳು ಕೊಠಡಿಯೊಳಕ್ಕೆ ತೂರಿ ಬೆಳಕನ್ನು ಚೆಲ್ಲಿದ್ದವು.

ಇಂದಿರೆಯನ್ನು ಪುನಃ ನೋಡಲು ರಾಜುವಿನ ಕಣ್ಣು ಬಯಸಿತು. ಎರಡು ಸಾಯಂಕಾಲಗಳನ್ನು ಅವನು ಕಬ್ಬನ್ ಪಾರ್ಕಿನಲ್ಲಿಯೇ ಅಲೆದಾಡುತ್ತ ಕಳೆದ. ಇಂದಿರೆಯನ್ನು ಕಾಣಲಿಲ್ಲ. ಮತ್ತೊಂದು ಸಂಜೆಯೂ ಜಾರಿಹೋಯಿತು. ಪಕ್ಷಿಗಳ ಕಲಕಲ ಧ್ವನಿ ಅವನ ಕಿವಿಗೆ ನಿರಾಶೆಯ ಗಂಟೆಯಂತೆ ಕೇಳಿಸಿತು. ಸಂಜೆಗತ್ತಲು ಬಿದ್ದಿತು. ತಕ್ಷಣ ರಾಜುವನ್ನು ಯಾರೋ ಎಚ್ಚರಿಸಿದರು.

"ಏನೋ, ವೇದಾಂತಿಯ ಹಾಗೆ ಆಕಾಶ ನೋಡುತ್ತಾ ಯೋಚನೆಯಲ್ಲಿ ಮುಳುಗಿದ್ದೀ? ಜೂಜೇನಾಯಿತೋ?" ಎಂದು ಗೆಳೆಯ ರಾಮು ಅವನ ಭುಜವನ್ನು ಚಪ್ಪರಿಸಿದ.

"ಜೂಜು ಹಾಳಾಯ್ತು, ಬಿಡಯ್ಯ. ಏನೋ ಬೇಸರ, ಸುಮ್ಮನೆ ಕೂತೆ" ಎಂದ ರಾಜು.

"ಏನೋ ನಿನಗಾದ ನಿರಾಶೆ, ಬೇಸರ ಆಗಲಿಕ್ಕೆ?" ಹಾಸ್ಯದ ನಗು ಬೀರಿದ.

ಆ ಮಾತು ರಾಜು ಹೃದಯದಲ್ಲಿ ನಿಜವಾಗಿಯೂ ತುಂಬಿಕೊಂಡಿದ್ದ ನಿರಾಶೆಗೆ ಸಾಕ್ಷಿಯಾಯಿತು.

"ಬರಿ ಮಾತೇಕೋ? ಬಾ, ಕಾಫಿ ಕುಡಿದು ಮನೆಗೆ ಹೋಗೋಣ" ಎಂದು ರಾಜು ಹೆಜ್ಜೆ ಹಾಕಿದ.

೬

ಗಡಿಯಾರ ಹನ್ನೊಂದು ಗಂಟೆಯನ್ನು ಹೊಡೆಯಿತು. ಹನ್ನೊಂದೂವರೆ ಮೀರಿತು. ಇಂದಿರೆಯ ಮುಖದಲ್ಲಿ ಬೇಸರ ಮೂಡಿತು.

'ಆನಂದ ಈ ದಿನ ಬರುವುದಿಲ್ಲವೇ? ಹಾಕಿದ ಕಾರ್ಯಕ್ರಮಕ್ಕೆ ಅವನು ತಪ್ಪುವವನಲ್ಲವಲ್ಲಾ. ಗಾಡಿ ಲೇಟಾಗಿರಬಹುದೆ?'

ಅವಳ ಕಣ್ಣುಗಳಲ್ಲಿ ಪುನಃ ಉತ್ಸಾಹದ ಮಿಂಚು ಕಾಣಿಸಿತು.

ಸ್ವಲ್ಪ ಹೊತ್ತಿನಲ್ಲಿ ಕುದುರೆಗಾಡಿ ಮನೆಯ ಮುಂದೆ ನಿಂತಿತು. ಆನಂದ ಕೆಳಗಿಳಿದ.

ಲಕ್ಷಮ್ಮನವರು ಆನಂದನೊಡನೆ ಅನೇಕ ವಿಷಯಗಳನ್ನು ಕುರಿತು ಮಾತ

ನಾಡಿದರು. ಇಂದಿರೆ ಅವರ ಮಾತು ಮುಗಿಯುವುದನ್ನೇ ಅವಸರದಿಂದ ಕಾದಿದ್ದಳು. ಆನಂದ ಕೊಠಡಿಯನ್ನು ಹೊಗುತ್ತಲೇ ಅವನನ್ನು ಹಿಂಬಾಲಿಸಿದಳು.

"ಮೊದಲನೇ ತರಗತಿಯಲ್ಲಿ ಉತ್ತೀರ್ಣವಾಯಿತು ಎಂದು ನಿಮಗೆ ಜಂಬ ಬಂದಿರಬೇಕು" ಎಂದು ಇಂದಿರೆ ನಗೆಯಲ್ಲಿ ಕೇಳಿದಳು.

"ಇಷ್ಟು ಬೇಗ ಅದನ್ನು ನೀನು ಹೇಗೆ ತಿಳಿದೆ ?" ಆನಂದನೂ ನಗೆಯಲ್ಲಿ ಕೇಳಿದ.

"ಅದರಿಂದಲೇ ನೀವು ಪತ್ರ ಬರೆಯಲಿಲ್ಲ."

"ಬರೆದೆನಲ್ಲಾ !"

"ಇಲ್ಲವಲ್ಲಾ !"

"ಖಂಡಿತ ಬರೆದೆ!"

"ಖಂಡಿತ ಇಲ್ಲ! ಯಾರಿಗೆ ನೀವು ಬರೆದದ್ದು ?"

"ಗೋಪಾಲರಾಯರಿಗೆ...."

ಇಂದಿರೆಯ ಮಾತಿನ ಅರ್ಥ ಆನಂದನಿಗೆ ಪೂರ್ತಿಯಾಗಿ ತಿಳಿಯಿತು. ಇಬ್ಬರ ಮುಖಗಳೂ ವಿನೋದದಲ್ಲಿ ತೇಲಿದವು.

"ನನಗೊಂದು ಪತ್ರ ಬರೆಯುತ್ತೀರೆಂದು ನಿರೀಕ್ಷಿಸಿದ್ದೆ."

"ನಾನೂ ಅಂತೆಯೇ ನಿರೀಕ್ಷಿಸಿದ್ದೆ. ಆದರೆ ನಿನ್ನಿಂದ ಯಾವ ಪತ್ರವೂ ಬರಲಿಲ್ಲ. ಅದಕ್ಕೆ ಕಾರಣ—ಜಂಬವೇ ಇರಬೇಕು."

"ನನಗೇಕೆ ಜಂಬ ?"

"ಪರೀಕ್ಷೆಯಲ್ಲಿ ಪಾಸಾದ್ದಕ್ಕೆ."

"ಆ ಜಂಬವೂ ನಿಮ್ಮದೇ ಆಗಿದೆಯಲ್ಲಾ." ಇಬ್ಬರೂ ನಗುವಿನಲ್ಲಿ ಮಾತು ಮುಗಿಸಿದರು.

ಆ ವೇಳೆಗೆ ಗೋಪಾಲರಾಯರು "ಆನಂದ" ಎಂದು ಕೂಗಿದರು.

"ಮೆಟ್ಟಿಲನ್ನು ಹತ್ತುವಾಗಲೇ ನೀನು ಬಂದಿದ್ದೀ ಎಂದು ನನಗೆ ತಿಳಿದು ಹೋಯಿತು."

"ಅದು ಹೇಗಪ್ಪಾ ?" ಎಂದು ಇಂದಿರೆ ಅವರ ಹಾಸ್ಯವನ್ನು ತಿಳಿದೂ ಕೇಳಿದಳು.

"ನಿನ್ನ ನಗು ದೂರದಲ್ಲೇ ನನಗೆ ಸುದ್ದಿ ಮುಟ್ಟಿಸಿತು."

ಇಂದಿರೆ ಪುನಃ ನಕ್ಕಳು. ಗೋಪಾಲರಾಯರು,

" ನಿನ್ನ ಉಪಕಾರಕ್ಕಾಗಿ ನಾವು ಋಣಿಗಳು, ಆನಂದ " ಎಂದರು.

" ನಾನು ಮಾಡಿದ ಅಂತಹ ಉಪಕಾರವೇನು ? "

" ಇಂದಿರೆ ಪರೀಕ್ಷೆ ಪಾಸಾದದ್ದು."

" ನಾನೇನೂ ಹೆಚ್ಚು ಮಾಡಲಿಲ್ಲ. ಅದನ್ನೇ ದೊಡ್ಡ ಉಪಕಾರ ಎಂದು ತಿಳಿದಿದ್ದೀರಿ."

ಆನಂದನ ವಿನಯದ ಮಾತು ಗೋಪಾಲರಾಯರಿಗೆ ಅವನಲ್ಲಿದ್ದ ಮೆಚ್ಚಿಗೆಯನ್ನು ಮತ್ತೂ ದೃಢಪಡಿಸಿತು.

" ಆನಂದ, ನೀನು ಶ್ರಮ ಪಡದೆ ಇದ್ದಿದ್ದರೆ ಇಂದಿರೆಯಂತೂ ಸ್ಕೂಲ್ ಪುಸ್ತಕಗಳನ್ನು ಕೈಲಿ ಹಿಡಿಯುತ್ತಿರಲಿಲ್ಲ " ಎಂದು ಲಕ್ಷ್ಮಮ್ಮನವರೂ ಅವನನ್ನು ಪ್ರಶಂಸಿಸಿದರು.

" ಬೇಕಾದಷ್ಟು ಕಾದಂಬರಿಗಳನ್ನು ಓದುತ್ತಿದ್ದಳು ! " ವಿನೋದವಾಗಿ ಗೋಪಾಲರಾಯರು ನುಡಿದರು.

ಇಂದಿರೆ ಆನಂದನ ಕಡೆಗೆ ಮುಗುಳ್ನಗೆ ಬೀರಿದಳು.

ಆನಂದ ಸಂಪಿಗೆಯ ಯೋಚನೆಗಳನ್ನು ಮನಸ್ಸಿನಿಂದ ಸುಲಭವಾಗಿ ಕಿತ್ತುಹಾಕಲಾಗಲಿಲ್ಲ. ದಾರಿಗಾಣದ ಚಿಂತೆ ಅವನ ತಲೆಯಲ್ಲಿ ಸುತ್ತುತ್ತಿತ್ತು. ಮನಸ್ಸನ್ನು ಅಲ್ಲಿಂದ ತಿರುಗಿಸಿ ಬೇರೆ ಕಡೆಗೆ ಹರಿಸುವುದು ಕಷ್ಟವಾಯಿತು. ಕೆಲವು ದಿವಸಗಳಲ್ಲಿ ಅವನ ಜೀವನದಲ್ಲಿ ಮತ್ತೆ ಉತ್ಸಾಹ ತುಂಬಿತು. ಅದಕ್ಕೆ ಕಾರಣ— ಇಂದಿರೆ.

' ಇಂದಿರೆಯಿಲ್ಲದಿದ್ದರೆ ನನ್ನ ಚಿಂತೆ ನನಗೆ ಹುಚ್ಚು ಹಿಡಿಸುತ್ತಿತ್ತು ' ಎನ್ನಿಸಿತು ಆನಂದನಿಗೆ.

ಅಂದು ಭಾನುವಾರ. ಕಾಲೇಜಿಗೆ ರಜ. ಇಂದಿರೆಯೊಡನೆ ಮಾತನಾಡಲು ಆನಂದನಿಗೆ ವಿರಾಮ ದೊರೆಯಿತು. ಹರ್ಷಚಿತ್ತದಲ್ಲಿ ಅವರ ಮಾತು ಬೆಳೆಯಿತು.

" ಬೇಸಗೆಯನ್ನು ಹೇಗೆ ಕಳೆದೆ ? " ಎಂದು ಆನಂದ ಕುತೂಹಲದಿಂದ ಪ್ರಶ್ನಿಸಿದ.

ಇಂದಿರೆಗೆ ತಾನು ಕಂಡ ಅನೇಕ ಕನಸುಗಳ ನೆನಪಾಯಿತು. ಕಾದಂಬರಿಗಳಲ್ಲಿ ಚಿತ್ರಿತವಾಗಿದ್ದ ಬಣ್ಣಬಣ್ಣದ ದೃಶ್ಯಗಳು ತೆರೆತೆರೆಯಾಗಿ ತೇಲಿದವು.

ಆನಂದನನ್ನು ಹೋಲುತ್ತಿದ್ದ ಕೆಲವು ಪಾತ್ರಗಳು ಎದ್ದು ನಿಂತು ಕಾಣದೆ ಮರೆಯಾದವು. ಅವು ಎದುರಿಗೆ ಕುಳಿತಿದ್ದ ಆನಂದನ ಪ್ರತೀಕಗಳಾಗಲಾರವು, ಎಂದೆನಿಸಿತು ಅವಳಿಗೆ.

“ ಅದೇ ಕಳೆದುಹೋಯಿತು. ಬೇಕಾದಷ್ಟು ಕಾದಂಬರಿಗಳನ್ನೋದಿದೆ ” ಎಂದು ಇಂದಿರೆ ನಕ್ಕಳು.

“ ಕಾದಂಬರಿಕಾರನ ಪ್ರಪಂಚದಲ್ಲಿ ಹಾರಾಡುತ್ತಾ ನಮ್ಮ ಪ್ರಪಂಚವನ್ನೇ ಮರೆತುಬಿಟ್ಟೆಯೇನೋ.”

“ ನಮ್ಮ ಪ್ರಪಂಚವನ್ನು ಮರೆಯುವುದು ಹೇಗೆ? ಅದನ್ನೇ ಕಾದಂಬರಿಕಾರನ ಪ್ರಪಂಚದಲ್ಲೂ ಕಾಣುತ್ತಿದ್ದೆ.”

ಆನಂದನ ಅನುಭವವೂ ಆ ಮಾತನ್ನು ನಿಜವೆಂದು ಒಪ್ಪಿತು. ಇಂದಿರೆ ಬೇರೆ ಮಾತನ್ನೆತ್ತಿದಳು.

“ ಒಂದು ಸಂಜೆ ನಿಮ್ಮ ಗೆಳೆಯರು ಸಿಕ್ಕಿದ್ದರು.”

“ ಯಾರು ? ”

“ ನೀವೇ ಊಹಿಸಿ ಹೇಳಿ.”

“ ರಾಜೂನೇ ? ”

“ ನಿಮ್ಮ ಊಹೆ ತಪ್ಪಾದೀತೆ ? ”

“ ಏನು ಹೇಳಿದ ? ”

“ ನಿಮಗೆ ತಿಳಿಸಿ ಎಂದು.”

“ ಏನನ್ನು ? ”

“ ಆ ಮಾತನ್ನೇ.”

“ ಮಾತಿನ ವಿಷಯ ? ”

“ ವಿಷಯ ಏನೂ ಇರಲಿಲ್ಲ ಅವರ ಮಾತಿನಲ್ಲಿ.” ಇಂದಿರೆಯ ಮಾತಿನಲ್ಲಿ ಹಾಸ್ಯದ ಕುಡಿಯಿತ್ತು.

“ ಅದೇ ಅವನ ಕಲೆ ! ” ಆನಂದನೂ ಹಾಸ್ಯವನ್ನು ಮುಂದುವರಿಸಿದ.

೭

ಮೂರು ದಿನಗಳಿಂದ ಆನಂದನ ಮುಖ ಪೆಚ್ಚಾಗಿತ್ತು. ಇಂದಿರೆ ಜ್ವರದಿಂದ ಮಲಗಿದ್ದುದೇ ಅದಕ್ಕೆ ಕಾರಣ. ಕಾಲೇಜಿನಲ್ಲಿ ಪಾಠಗಳೂ ಅವನ

ತಲೆಗೆ ಹತ್ತುತ್ತಿರಲಿಲ್ಲ. "ಏಕೆ ಆನಂದ, ಮುಖ ಸಪ್ಪಗಿದೆ? ಮೈಯಲ್ಲಿ ಸ್ವಸ್ಥ ವಿಲ್ಲವೇ?" ಎಂದು ಅವನ ಗೆಳೆಯರು ಪ್ರಶ್ನಿಸಿದರು. ಆದರೆ ಆನಂದ ಕಾರಣ ವನ್ನು ಬಿಟ್ಟುಕೊಡಲಿಲ್ಲ.

ಡಾಕ್ಟರ್ ಷಾಪಿನಿಂದ ಆನಂದನೇ ಇಂದಿರೆಗೆ ನಿತ್ಯ ಔಷಧವನ್ನು ತಂದು ಕೊಡುತ್ತಿದ್ದ. ಮಾರ್ಕೆಟ್ಟಿನಿಂದ ತಾನೇ ಒಳ್ಳೆಯ ಹಣ್ಣನ್ನು ಆರಿಸಿ ತರುತ್ತಿದ್ದ. ಅದನ್ನು ಕಂಡು ಗೋಪಾಲರಾಯರ ಮಿತ್ರರಾದ ಪುರುಷೋತ್ತಮರಾಯರು ಆನಂದನ ಒಳ್ಳೆಯ ಗುಣಗಳನ್ನು ಅನೇಕ ಬಾರಿ ಪ್ರಶಂಸಿಸಿದ್ದರು.

"ಹೊಟ್ಟೆಯಲ್ಲಿ ಹುಟ್ಟಿದ ಮಗನ ಹಾಗೆ ಆನಂದ ನಿಮ್ಮೆಲ್ಲರಲ್ಲಿ ಎಷ್ಟು ವಿಶ್ವಾಸ ಇಟ್ಟುಕೊಂಡಿದಾನೆ" ಎಂದು ಗೋಪಾಲರಾಯರೊಡನೆ ಅವರು ನುಡಿದಿದ್ದರು. ಆ ಮಾತು ಗೋಪಾಲರಾಯರ ಅಂತರಂಗದಲ್ಲಿದ್ದ ಭಾವನೆ ಯನ್ನು ಹೊರಗೆಡಹಿತ್ತು.

ಇಂದಿರೆಗೆ ಜ್ವರ ನಿಂತು ನಾಲ್ಕು ದಿನವಾಗಿತ್ತು. ಅವಳು ಹೊರಪ್ರಪಂಚ ದಲ್ಲಿ ಸುಳಿದಾಡಿ ಒಂದು ವಾರವಾಗಿತ್ತು. ಅವಳಿಗೆ ಸ್ವಲ್ಪ ಮನೋರಂಜನೆ ಬೇಕಾಗಿತ್ತು.

"ಈ ಹೊತ್ತು ನಾನು ಒಂದು ಚಿತ್ರವನ್ನು ನೋಡಲು ಹೋಗಲೆ?" ಎಂದು ತಂದೆಯನ್ನು ಕೇಳಿದಳು.

"ಯಾರು ಯಾರು ಹೋಗುತ್ತೀರಿ?"

"ಆನಂದ ಬರುತ್ತಾರೆ."

ಇಂದಿರೆಯ ನೋಟದಲ್ಲಿ ಮಾಯೆ ಬೆರೆತಿತ್ತು. ಅದನ್ನು ಕಂಡು ಗೋಪಾಲ ರಾಯರು ಅಂತರಂಗದಲ್ಲಿ ಹೆಮ್ಮೆಪಟ್ಟುಕೊಂಡರು. ಇಂದಿರೆಯನ್ನು ಆನಂದ ನೊಡನೆ ಕಳುಹಿಸಲು ಅವರಿಗೆ ಯಾವ ಬಗೆಯ ಸಂಕೋಚವೂ ತೋರಲಿಲ್ಲ. ಆದರೂ ತಕ್ಷಣ ಅವರ ಮುಖದಲ್ಲಿ ಒಪ್ಪಿಗೆ ಕಾಣಲಿಲ್ಲ. ಅವಳ ಇಷ್ಟಕ್ಕೆ ಅಡ್ಡಿ ಬರಲು ಅವರು ಒಪ್ಪಲಿಲ್ಲ.

"ಹೋಗಿ ಬನ್ನಿ" ಎಂದು ಒಪ್ಪಿಗೆ ಸೂಚಿಸಿದರು.

ಅದೇ ಮಧ್ಯಾಹ್ನ ರಾಜು ತನ್ನ ಕೊಠಡಿಯಲ್ಲಿ ಏನನ್ನೋ ಯೋಚಿಸುತ್ತಾ ಒಂಟಿಯಾಗಿ ಕುಳಿತಿದ್ದ. ಬಾಗಿಲು ತೆರೆಯಿತು. ರಾಮು ಒಳಗೆ ಕಾಲಿಟ್ಟ.

"ಏನೊ, ಕೂತೇ ನಿದ್ದೆ ಮಾಡುತ್ತಿದ್ದೀ! ಕಲಾವಿದನಿಗೆ ಎಲ್ಲಾ ಸಾಧ್ಯ."

"ನಿದ್ದೆಯೆಲ್ಲಿಯದೋ ? ಏನೋ ಯೋಚನೆ ಮಾಡುತ್ತಿದ್ದೆ."

"ನಿನಗೆ ಯಾವಾಗಲೂ ಒಂದಲ್ಲ ಒಂದು ಯೋಚನೆ."

"ಯೋಚನೆ ಇಲ್ಲದವನು ಮನುಷ್ಯನೇನೋ ?"

"ಮನುಷ್ಯನಿಗೆ ನಿನ್ನ ಯೋಚನೆಗಳು ಬೇಕಾಗಿಲ್ಲ!" ರಾಮುವಿನ ಹಾಸ್ಯ ಸ್ವಲ್ಪ ಹರಿತವಾಗಿತ್ತು.

"ಹೊಸದಾಗಿ ಯಾವ ಕೃತಿಯೂ ಮಾರಾಟ ಆಗಲಿಲ್ಲವೇ ?" ಸುತ್ತಲೂ ನೋಡಿ ರಾಮು ಮುಂದುವರಿಸಿದ.

"ಜನಕ್ಕೆ ಕಲೆಯ ಬೆಲೆ ಗೊತ್ತೇ ? ಈ ಉದ್ಯೋಗವನ್ನೇ ನಂಬಿಕೊಂಡವನು ಬಾಳನ್ನು ಸಾಗಿಸಿದ ಹಾಗೇ ಇದೆ."

"ನಿರಾಶೆಯಿಂದ ಜನವನ್ನೇಕೆ ಹಳಿಯುತ್ತೀ. ಬಹಳ ಬೇಸರಪಟ್ಟುಕೊಂಡಿದ್ದೀ. ಯಾವುದಾದರೂ ಒಂದು ಚಿತ್ರ ನೋಡೋಣವೆ ?"

ರಾಜುವಿನ ಮನಸ್ಸಿಗೆ ಆಗ ಸ್ವಲ್ಪ ಉಲ್ಲಾಸ ಬೇಕಾಗಿತ್ತು. ಅವನು ಉಡುಪನ್ನು ಧರಿಸಿ ಹೊರಟ.

"'ಆವಾರ' ಚಿತ್ರ ಚೆನ್ನಾಗಿದೆಯಂತೆ, ನೋಡೋಣವೆ ?" ಎಂದು ಹೆಜ್ಜೆಹಾಕುತ್ತ ರಾಮು ಕೇಳಿದ.

"ಆಗಲೆ ಹೊತ್ತಾಗಿದೆ, ಸೀಟು ಸಿಕ್ಕುತ್ತೊ ಇಲ್ಲವೋ. ನೋಡೋಣ, ನಡಿ" ಎಂದ ರಾಜು.

ಅವರು ಮೆಜೆಸ್ಟಿಕ್ ಚಿತ್ರಮಂದಿರಕ್ಕೆ ಬರುವ ವೇಳೆಗೆ 'ಕ್ಯೂ' ಬಹಳ ದೂರ ಬೆಳೆದಿತ್ತು.

"ರಾಜು, ಹೌಸ್ ಫುಲ್ ಆಗಿದೆಯಲ್ಲೋ" ಎಂದು ರಾಮು ಬಂದು ತಿಳಿಸಿದ.

"ಯಾವ ಟಿಕೆಟ್ಟೂ ಉಳಿದಿಲ್ಲವೆ ?"

"ಬಾಲ್ಕನಿ ಟಿಕೆಟ್ಟು ಕೆಲವು ಉಳಿದಿವೆ."

"ತೆಗೆ, ಎರಡು."

ರಾಮು ಅವನಿಂದ ಅದೇ ಉತ್ತರವನ್ನು ನಿರೀಕ್ಷಿಸಿದ್ದ. ಇಬ್ಬರೂ ಚಿತ್ರಮಂದಿರವನ್ನು ಪ್ರವೇಶಿಸಿದರು.

ರಾಜು ಚಿತ್ರಮಂದಿರದಲ್ಲಿದ್ದ ಎಲ್ಲ ವ್ಯಕ್ತಿಗಳ ಕಡೆ ಕಣ್ಣು ಹೊರಳಿಸಿದ.

" ಏನೋ, ನಿನ್ನ ಕಣ್ಣು ಕಲೆಗೆ ವಸ್ತು ಹುಡುಕಿಕೊಳ್ಳುತ್ತಿದೆಯೆ ? " ಎಂದ ರಾಮು.

ರಾಜು ನಸುನಕ್ಕು ಉತ್ತರವನ್ನು ಕೊಡದೆ ಮೌನವಾಗಿದ್ದ. ಒಂದೇ ಕ್ಷಣದಲ್ಲಿ ಅವನ ನೋಟ ಇಬ್ಬರು ವ್ಯಕ್ತಿಗಳನ್ನು ಆವರಿಸಿತು. ಅವನ ನೋಟ ದಲ್ಲಿ ಏನೋ ಆಸೆ ಹೊರಹೊಮ್ಮುತ್ತಿತ್ತು. ಚಿತ್ರದ ಕಾರ್ಯಕ್ರಮವನ್ನು ಸೂಚಿಸಿದುದಕ್ಕಾಗಿ ತನ್ನ ಗೆಳೆಯನನ್ನು ಮನಸ್ಸಿನಲ್ಲಿಯೇ ಅಭಿನಂದಿಸಿದ. ಅವನು ನೋಡಿದ ವ್ಯಕ್ತಿಗಳು ಇಂದಿರೆ ಮತ್ತು ಆನಂದ! ಅವನು ರಾಮುಗೆ ಅವರಿಬ್ಬರನ್ನೂ ತೋರಿಸುತ್ತಿರುವಂತೆಯೇ ದೀಪಗಳು ಆರಿದವು.

ರಾಜುವಿನ ಕಣ್ಣು ತೆರೆಯ ಕಡೆಗೆ ನೋಡುವುದಕ್ಕಿಂತ ಇಂದಿರೆಯ ಕಡೆಗೇ ಹೆಚ್ಚಾಗಿ ತಿರುಗಿತ್ತು. ಸುಂದರ ಚಿತ್ರಗ್ರಹಣ ಮತ್ತು ಮಧುರ ಸಂಗೀತ ಎಲ್ಲರ ಮನಗಳನ್ನೂ ಸೂರೆಗೊಂಡಿದ್ದವು. ರಾಜುಗೆ ಚಿತ್ರ ಬೇಕಾಗಿರಲಿಲ್ಲ. ಅದು ಅವನಿಗೆ ಉದ್ದವಾಗಿ ಕಂಡಿತು.

ಚಿತ್ರ ಮುಗಿಯಿತು. ರಾಷ್ಟ್ರಗೀತೆಯನ್ನು ಗಮನಿಸದೆ ರಾಜು ಹೊರಗೆ ಹೊರಡಲುದ್ಯುಕ್ತನಾದ. ರಾಮು ಅವನನ್ನು ಬಟ್ಟೆ ಹಿಡಿದು ನಿಲ್ಲಿಸಿ, " ತಾಳಯ್ಯ, ರಾಷ್ಟ್ರಗೀತೆ ಮುಗಿಯಲಿ " ಎಂದ. ಆಗ ಗೆಳೆಯನ ಸಂಗವೂ ಅವನಿಗೆ ಅಸಹನೀಯವಾಯಿತು. ಜನಸಮೂಹವೆಲ್ಲ ಅದೃಶ್ಯವಾಗಿ ಇಂದಿರೆ ಯೊಬ್ಬಳೆ ಅಲ್ಲಿರುವಂತೆ ಅವನ ಮನಸ್ಸಿಗೆ ಭ್ರಾಂತಿಯಾಯಿತು.

ರಾಜು, ರಾಮು ನೇರವಾಗಿ ಆನಂದನಿಗೆ ಕಾಣಿಸಿಕೊಂಡರು. ಅವನಿಗೆ ಆ ಪ್ರಸಂಗ ಬೇಸರವಾಯಿತು.

" ಊರಿಗೆ ಬಂದ ಮೇಲೆ ನಿನ್ನನ್ನು ನೋಡುವುದಕ್ಕಾಗಲಿಲ್ಲ, ಆನಂದ " ಎಂದು ರಾಜು ಮಾತನ್ನು ಆರಂಭಿಸಿದ. ನೋಟವನ್ನು ಇಂದಿರೆಯ ಮೇಲೆ ಬೀರಿದ್ದ.

" ಒಂದು ಸಲ ಕೊಠಡಿಗೆ ಬಾ " ಎಂದು ಚುಟುಕಿನಲ್ಲಿ ಉತ್ತರ ಕೊಟ್ಟು ಆನಂದ ಹೊರಡಲು ಆತುರ ತೋರಿಸಿದ.

" ಏಕೆ ಬಹಳ ಅವಸರದಲ್ಲಿದ್ದೀ, ಆನಂದ ? ಹವೆ ಚೆನ್ನಾಗಿದೆ, ಎಲ್ಲರೂ ಸ್ವಲ್ಪ ದೂರ ನಡೆದು ಹೋಗಬಹುದಲ್ಲಾ " ಎಂದು ರಾಜು ಸೂಚನೆ ಕೊಟ್ಟ.

" ನೀನು, ರಾಮು ಬಸವನಗುಡಿಗೆ ಹೋಗುವವರು ; ನಾವು ಕುಮಾರಾ

ಪಾರ್ಕಿಗೆ ಹೋಗುವವರು. ನಾವು ಗಾಡಿಯಲ್ಲೇ ಹೊರಡುತ್ತೇವೆ" ಎಂದು ಅವನ ಆಸೆಯನ್ನು ಆನಂದ ಕತ್ತರಿಸಿದ. ಮರು ಉಸಿರಿನಲ್ಲಿಯೇ ಗಾಡಿಗಾಗಿ ಆಳನ್ನು ಕೂಗಿದ.

ರಾಜು ಉಪಾಯ ಕಾಣದೆ ಸುಮ್ಮನಾಗಬೇಕಾಯಿತು. ಒಂದೇ ಕ್ಷಣ ದಲ್ಲಿ ಅವನು ಇಂದಿರೆಯಿಂದ ದೂರವಾಗಬೇಕಾಯಿತು.

"ಬರುತ್ತೇನೆ, ಹೊತ್ತಾಗಿದೆ" ಎಂದು ಉಪಚಾರಕ್ಕೆ ಕಟ್ಟುಬಿದ್ದು ಆನಂದ ಹೇಳಿದ. ಅವನ ಕಣ್ಣು ರಾಜು, ರಾಮು ಇಬ್ಬರ ಕಡೆಗೂ ತಿರುಗಿತ್ತು. ಆದರೆ ರಾಜುವಿನ ಕಣ್ಣು ಅವನ ಕಣ್ಣನ್ನು ಸಂಧಿಸಿರಲಿಲ್ಲ.

ನಿಲುಕಲಾರದ ಆಸೆಯಲ್ಲಿ ಮನಸ್ಸು ತೊಳಲಿ ರಾಜುಗೆ ಆ ರಾತ್ರಿ ನಿದ್ರೆ ಹತ್ತಲಿಲ್ಲ. ಆನಂದ ಮತ್ತು ಇಂದಿರೆ ಇಬ್ಬರ ಸಂಬಂಧ ಯಾವ ಹಾದಿಯನ್ನು ಹಿಡಿಯುತ್ತದೆ ಎಂಬುದನ್ನು ಅವನ ಊಹೆ ಸರಿಯಾಗಿ ತರ್ಕಿಸಿತ್ತು.

೮

ಆನಂದನ ಕಾಲೇಜಿನ ಕಾರ್ಯಚಕ್ರ ಬಿರುಸಾಗಿ ನಡೆಯುತ್ತಿತ್ತು. ಕೊನೆಯ ಆನರ್ಸ್ ಪರೀಕ್ಷೆಯ ಫಲಿತಾಂಶವೇ ಅವನ ಭವಿಷ್ಯವನ್ನು ನಿರ್ಧರಿಸು ವುದಿತ್ತು. ಅವನು ವ್ಯಾಸಂಗದಲ್ಲಿ ತಲ್ಲೀನನಾಗಿದ್ದ.

ಕಾಲ ಬೇಗ ಬೇಗ ಸರಿಯಿತು. ಪರೀಕ್ಷೆ ಹತ್ತಿರವಾದಂತೆ ಆನಂದನ ವ್ಯಾಸಂಗ ದಿನರಾತ್ರಿಗಳ ಭೇದವನ್ನರಿಯದೆ ಸಾಗಿತು. ಅವನ ಬೇಸತ್ತ ಮನಸ್ಸು ಇಂದಿರೆಯ ಸಂಗದಿಂದ ಹಗುರಾಗುತ್ತಿತ್ತು.

ಒಂದೊಂದು ಸಂಜೆ ರಾಜು ಆನಂದನ ಬಳಿಗೆ ಬರುತ್ತಿದ್ದ. ಸಮಯ ವನ್ನು ಹೊಂಚುಹಾಕಿಕೊಂಡಿದ್ದು ಇಂದಿರೆಯೊಡನೆ ಒಂದೊಂದು ಸಲ ಮಾತ ನಾಡುತ್ತಿದ್ದ. ಅಂತಹ ಸಮಯ ಅವನ ಮನಸ್ಸಿಗೆ ಅಪೂರ್ವವಾದ ತೃಪ್ತಿ ಯಾಗುತ್ತಿತ್ತು. ಆನಂದ ಅವನೊಡನೆ ತಿರುಗಾಡಲು ಹೊರಡುತ್ತಿದ್ದ.

ತಾನು ರಚಿಸಿದ ಹೊಸ ಚಿತ್ರಗಳನ್ನು ರಾಜು ಆನಂದನಿಗೆ ತೋರಿಸು ತ್ತಿದ್ದ. ಅವು ಆನಂದನ ಮೆಚ್ಚಿಗೆಯನ್ನು ಗಳಿಸಿದ್ದವು. ಆ ಸಮಯದಲ್ಲಿ ಇಂದಿರೆಯೂ ಆ ಚಿತ್ರಗಳನ್ನು ನೋಡುತ್ತಿದ್ದಳು. ತನ್ನ ಪ್ರಶಂಸೆಯನ್ನು ವ್ಯಕ್ತ ಪಡಿಸುತ್ತಿದ್ದಳು. ಇಂದಿರೆಯ ಪ್ರಶಂಸೆಯಿಂದ ರಾಜುಗೆ ಸ್ವರ್ಗದ ಸೋಪಾನ

ಹತ್ತಿದಷ್ಟು ಹರ್ಷವಾಗುತ್ತಿತ್ತು.

ಸುಭಾಷ್‌ನಗರದಲ್ಲಿ ಒಂದು ಸಲ ವಸ್ತುಪ್ರದರ್ಶನವೇರ್ಪಟ್ಟಿತ್ತು. ಅಲ್ಲಿ ರಾಜು ತನ್ನ ಕಲಾಪ್ರದರ್ಶನವನ್ನೂ ಏರ್ಪಡಿಸಿದ್ದ. ಆ ಪ್ರದರ್ಶನದಿಂದ ಅವನ ಕಲೆಗೆ ಪ್ರಚಾರ ದೊರೆಯಿತು.

ಭಾನುವಾರದ ಒಂದು ಸಂಜೆ ಗೋಪಾಲರಾಯರು ತಮ್ಮ ಕುಟುಂಬ ದೊಂದಿಗೆ ವಸ್ತುಪ್ರದರ್ಶನವನ್ನು ನೋಡಲು ಹೊರಟರು. ಆನಂದನನ್ನೂ ಅವರು ಜೊತೆಗೂಡಿಸಿಕೊಂಡರು. ಕೆಲವು ಪ್ರದರ್ಶನಶಾಲೆಗಳನ್ನು ನೋಡಿ ದರು. ಎಲ್ಲರೂ ಅನಂತರ ಒಂದು ಫಲಾಹಾರ ಮಂದಿರವನ್ನು ಪ್ರವೇಶಿಸಿದರು. ಗೋಪಾಲರಾಯರು ನಾಲ್ಕು ಬಟ್ಟಲು ಹಾಲನ್ನು ತರಿಸಿದರು. ಲಕ್ಷ್ಮಮ್ಮನವರು ಸಂಕೋಚಪಟ್ಟುಕೊಂಡೇ ಹಾಲು ಕುಡಿದರು. ಇಂದಿರೆಯ ಒತ್ತಾಯಕ್ಕೆ ಅವರು ಮಣಿಯಬೇಕಾಯಿತು. ಹಾಲನ್ನು ಕುಡಿಯುತ್ತಿರುವಂತೆ ಇಂದಿರೆಯ ಮತ್ತು ಆನಂದನ ಕಣ್ಣು ಸಂಧಿಸಿದವು.

“ಬಿಸ್ಕತ್ತು, ಪೆಪ್ಪರಮೆಂಟು, ಹುರಿಗಾಳು, ರಿಬ್ಬನ್—ಇಷ್ಟೇ ಆಗಿದೆ ವಸ್ತುಪ್ರದರ್ಶನವೆಲ್ಲ” ಎಂದು ಇಂದಿರೆ ಹಾಸ್ಯ ಮಾಡಿದಳು.

“ರಾಜುವಿನ ಪ್ರದರ್ಶನಶಾಲೆಯನ್ನು ನೋಡಿಕೊಂಡು ಇನ್ನು ಹೊರ ಡೋಣ” ಎಂದು ಗೋಪಾಲರಾಯರು ದನಿಗೂಡಿಸಿದರು.

ರಾಜು ಅವರನ್ನೆಲ್ಲ ಸ್ವಾಗತಿಸಿ ತನ್ನ ಕಲಾಶಾಲೆಗೆ ಬರಮಾಡಿಕೊಂಡ. ಒಂದೊಂದು ಕಲಾಕೃತಿಯನ್ನೂ ಅವರಿಗೆ ತೋರಿಸಿ ವಿವರಿಸಿದ. ಎಲ್ಲರೂ ಅವನ ಕಲಾಕೌಶಲ್ಯವನ್ನು ಮನಗಂಡು ಶ್ಲಾಘಿಸಿದರು. ಇಂದಿರೆಯೂ ಅವನ ಕಲೆಗೆ ಮಾರುಹೋಗಿರುವುದನ್ನು ರಾಜು ಅರಿತುಕೊಂಡ. ಗೋಪಾಲರಾಯರು ಹೊರಡಲನುವಾದರು. ರಾಜು ವಿಶ್ವಾಸದಿಂದ ಅವರನ್ನು ಕುಳ್ಳಿರಿಸಿ ಎಲ್ಲರಿಗೂ ತಂಪಾದ ಪಾನೀಯವನ್ನು ತರಿಸಿಕೊಟ್ಟ. ಬಸ್ಸಿಗೆ ಹೊತ್ತಾಯಿತು. ರಾಜು ಅವರನ್ನು ಮಹಾದ್ವಾರದ ವರೆಗೆ ಬೀಳ್ಕೊಟ್ಟು ಹಿಂತಿರುಗಿದ. ವಿದ್ಯುದ್ದೀಪದ ಪ್ರಭೆಯಲ್ಲಿ ಕಾಂತಿಯನ್ನೆರಚುತ್ತಿದ್ದ ಇಂದಿರೆಯ ರೂಪ ಅವನ ಅಂತರಂಗದಲ್ಲಿ ಊರಿ ನಿಂತಿತು.

ಮತ್ತೆರಡು ತಿಂಗಳು ಕಳೆಯಿತು. ಆನಂದನ ಗಮನ ವ್ಯಾಸಂಗದಿಂದ ಬೇರೆ ಕಡೆ ತಿರುಗುತ್ತಲೇ ಇರಲಿಲ್ಲ. ಪರೀಕ್ಷೆ ಸಮೀಪಿಸಿತು. ಅವನ ಕೊಠಡಿ

ಯಲ್ಲಿಯ ದೀಪ ಆರುತ್ತಲೇ ಇರಲಿಲ್ಲ.

'ಈ ಪರೀಕ್ಷೆಯಲ್ಲಿ ನೂರಕ್ಕೆ ನೂರೈವತ್ತು ಅಂಕಗಳನ್ನು ಗಳಿಸಿಬಿಡಲು ಮನಸ್ಸು ಮಾಡಿರುವ ಹಾಗಿದೆ' ಎಂದು ಇಂದಿರೆ ಹಾಸ್ಯಮಾಡುತ್ತಿದ್ದಳು.

ಆದರೆ ಮಾತುಗಾರಿಕೆಯಿಂದ ಅವಳು ಆನಂದನ ಸಮಯವನ್ನು ವ್ಯರ್ಥ ಮಾಡುತ್ತಿರಲಿಲ್ಲ. ಪರೀಕ್ಷೆ ಮುಗಿಯುತ್ತಲೇ ಹೊತ್ತನ್ನೆಲ್ಲ ಮಾತಿಗಾಗಿಯೇ ಮೀಸಲಿಡಲು ಆನಂದನಿಗೆ ಅವಳು ಎಚ್ಚರಿಕೆಯನ್ನು ಕೊಟ್ಟಿದ್ದಳು.

ಆನಂದನ ಪರೀಕ್ಷೆ ಬಂದೇಬಿಟ್ಟಿತು. ಅವನು ಎಲ್ಲ ಪಠ್ಯಪುಸ್ತಕಗಳನ್ನೂ ಹತ್ತಾರು ಬಾರಿ ಪುಟ ತಿರುಗಿಸಿದ್ದ. ಅವನ ಮನಸ್ಸು ಸ್ಥಿರವಾಗಿತ್ತು. ಪರೀಕ್ಷೆಯನ್ನು ಅವನು ಆಕಾಂಕ್ಷೆಯಿಂದ ಎದುರುನೋಡುತ್ತಿದ್ದ. ನಿರೀಕ್ಷಿಸಿದಂತೆ ಆನಂದ ಎಲ್ಲ ಪ್ರಶ್ನೆಗಳನ್ನೂ ತೃಪ್ತಿಕರವಾಗಿ ಸಾಧಿಸಿದ. ಕಡೆಯ ಪ್ರಶ್ನ ಪತ್ರಿಕೆಯೂ ಮುಗಿಯಿತು. ಮೊದಲನೆಯ ತರಗತಿಯಲ್ಲಿ ಜಯಶೀಲನಾಗುವುದರಲ್ಲಿ ಅವನಿಗೆ ಯಾವ ಸಂದೇಹವೂ ಇರಲಿಲ್ಲ.

ಆನಂದನ ಜೀವ 'ಅಬ್ಬ!' ಎಂದಿತು.

ಆನಂದನ ಹೆಗಲಿನಿಂದ ದೊಡ್ಡ ಭಾರವಿಳಿದಂತಾಯಿತು. ಗಾಳಿಯಲ್ಲಿ ತೂರಾಡುವ ಹಕ್ಕಿಯ ಪುಕ್ಕದಂತೆ ಅವನ ಮನಸ್ಸು ಉಲ್ಲಾಸದಲ್ಲಿ ತೂರಾಡಿತು. ತಾನು ಆತುರದಿಂದ ಹಂಬಲಿಸುತ್ತಿದ್ದ ದಿನಗಳು ಬಂದಿವೆ. ರಂಗರಾಯರ ಆಲೋಚನೆಗಳನ್ನೆಲ್ಲ ತಾನು ಬೇಗ ಬಗೆಹರಿಸಬೇಕು. ಇನ್ನು ಕನಸಿನಲ್ಲಿಯೂ ಯಾವ ವಿಚಾರವೂ ಅವರನ್ನು ಕಾಡಬಾರದು. ತನ್ನ ವ್ಯಾಸಂಗಕ್ಕಾಗಿ, ತನ್ನ ಸುಖಕ್ಕಾಗಿ ಅವರು ಪಟ್ಟ ಕಷ್ಟಗಳೆಲ್ಲ ಪರ್ವತದಂತೆ ಬೃಹದಾಕಾರವಾಗಿ ಅವನ ಮುಂದೆ ತೋರುವುವು. ಇನ್ನು ಕುಟುಂಬದ ಸೌಖ್ಯಕ್ಕಾಗಿ ತಾನು ಯಾವ ತ್ಯಾಗವನ್ನಾದರೂ ಮಾಡಲು ಸಿದ್ಧನಾಗಬೇಕು. ಅದು ತನ್ನ ಕರ್ತವ್ಯ. ಈ ಭಾವನೆಗಳೆಲ್ಲ ಆನಂದನ ಅಂತರಂಗದಲ್ಲಿ ಭದ್ರವಾಗಿ ನೆಟ್ಟಿವು.

ರಂಗರಾಯರು ತನ್ನನ್ನು ಎಷ್ಟು ಹಂಬಲದಿಂದ ಎದುರುನೋಡುತ್ತಿದ್ದರು ಎಂಬುದನ್ನು ಆನಂದ ತಿಳಿದಿದ್ದ. ತನ್ನ ತಾಯಿ ಮತ್ತು ತಂಗಿ ಬಹುಶಃ ಕನಸಿನಲ್ಲಿಯೂ ತನ್ನನ್ನೇ ಕಾಣುತ್ತಿರಬಹುದೆಂದೆನಿಸಿತು ಅವನಿಗೆ. ಅವನ ಹೃದಯವೂ ಅವರನ್ನು ಕಾಣಲು ಆತುರವಾಗಿತ್ತು.

ಪರೀಕ್ಷೆ ಮುಗಿದು ಎರಡು ದಿನವಾಯಿತು. ಗೋಪಾಲರಾಯ

ಒತ್ತಾಯದಿಂದ ಆ ಎರಡು ದಿನ ಆನಂದ ಅವರ ಮನೆಯಲ್ಲಿ ನಿಲ್ಲಬೇಕಾಯಿತು. ಅವನನ್ನು ನಿಜವಾಗಿ ಕಟ್ಟಿಹಾಕಿದವಳು ಇಂದಿರೆ. ಅವಳ ಇಷ್ಟವನ್ನು ಮೀರುವ ಶಕ್ತಿ ಅವನಿಗಿರಲಿಲ್ಲ. ಮರುದಿನ ಬೆಳಗಿನ ಗಾಡಿಗೆ ಅವನು ಸಂಪಿಗೆಗೆ ಹೊರಡುವವನಿದ್ದ. ಆ ದಿನ ಸಂಜೆ ಇಂದಿರೆಯೊಡನೆ ಗಾಳಿಸೇವನೆಗೆ ಹೊರಟ. ಅವರ ದಾರಿ ಕಬ್ಬನ್ ಪಾರ್ಕ್ ಹಿಡಿಯಿತು.

ಸಂಜೆ ನಿರ್ಮಲವಾಗಿತ್ತು. ಸ್ವಲ್ಪ ಹೊತ್ತು ಪಾರ್ಕಿನಲ್ಲಿ ಸುತ್ತಾಡಿದರು. ಸಂಜೆ ಬೇಗ ಜಾರಿಹೋಯಿತು. ವರ್ಣರಂಜಿತವಾದ ಬೆಳಕಿನಲ್ಲಿ ಚಿಲುಮೆಯ ನೀರು ದೂರದಲ್ಲಿ ಮೇಲಕ್ಕೆ ಚಿಮ್ಮುತ್ತಿತ್ತು. ಅಂತೆಯೇ ಅವರಿಬ್ಬರ ಅಂತರಂಗ ದಲ್ಲಿ ಆಸೆ ಚಿಮ್ಮಿತು. ಎಲ್ಲ ದೃಶ್ಯಗಳಲ್ಲಿಯೂ ಅವರಿಗೆ ಸೌಂದರ್ಯದ ದರ್ಶನ ಕಾಣುತ್ತಿತ್ತು. ಆ ಸಂಜೆಯ ಮಾತುಗಳು ಅವರಿಬ್ಬರ ಹೃದಯದಲ್ಲಿಯೂ ಊರಿನಿಂತವು. ಆ ಮಾತುಗಳಲ್ಲಿ ಆನಂದನ ಮತ್ತು ಇಂದಿರೆಯ ಎರಡು ವರ್ಷಗಳ ಸ್ನೇಹದ ಪರಿಣಾಮವಿತ್ತು.

ಇಂದಿರೆ ಮೌನವಾಗಿ ಕುಳಿತಿದ್ದಳು.

" ಏಕೆ, ಇಷ್ಟೊಂದು ಮೌನ ? "

" ನಮ್ಮ ಸಂಗವನ್ನೇ ಬಿಟ್ಟು ಹೋಗುವವರೊಡನೆ ಮಾತನಾಡುವು ದಾದರೂ ಏನಿದೆ ? " ಎಂದು ಇಂದಿರೆ ನಸುನಕ್ಕಳು. ನಗು ಹಗುರವಾಗಿರಲಿಲ್ಲ.

" ಸಂಪಿಗೆಗೆ ಹೊರಟರೆ ನಿಮ್ಮ ಸಂಗ ಬಿಟ್ಟಂತೆ ಆಯಿತೆ ? "

" ನಾಳೆಯಿಂದ ನೀವು ನಮ್ಮ ಸಂಗದಲ್ಲಿ ಇರುವುದಿಲ್ಲ. ಆದ್ದರಿಂದ ನೀವು ನಮ್ಮ ಸಂಗ ಬಿಟ್ಟಂತೆ ಆಗಲಿಲ್ಲವೆ ? "

" ದೂರ ಹೋದ ಮಾತ್ರಕ್ಕೆ ಮನಸ್ಸು ಹೃದಯಗಳ ಸಂಗ ಹೇಗೆ ಬಿಟ್ಟು ಹೋದೀತು ? "

" ನಮ್ಮ ಸಂಗ ನಿಮ್ಮ ಮನಸ್ಸು ಹೃದಯಗಳಷ್ಟು ದೂರ ಹೋಗಿರ ಬೇಕಲ್ಲ ? "

" ನಿಮ್ಮೆಲ್ಲರ ಅಗಲಿಕೆ ನನ್ನ ಹೃದಯವನ್ನು ಎಷ್ಟು ತಳಮಳಗೊಳಿಸಿದೆ ಗೊತ್ತೆ ? "

" ಈ ಅಗಲಿಕೆಯ ತಳಮಳ ನನ್ನ ಹೃದಯದ ಒಂದು ಮೂಲೆಯಲ್ಲಿ ಎಷ್ಟೋ ದಿನದಿಂದ ಇತ್ತು. ಈಗ ಆ ಸಮಯ ಬಂದೇಬಿಟ್ಟಿತು."

" ಅಷ್ಟೊಂದು ಚಿಂತೆ ಹಚ್ಚಿಕೊಳ್ಳಬೇಕಾದ್ದಿಲ್ಲ, ಇಂದಿರಾ. ಮದುವೆ ಯಾದರೂ ನಾನು ಬೆಂಗಳೂರಿನಲ್ಲೇ ಇರಬೇಕಾಗುತ್ತೆ."

" ಸಂಪಿಗೆಯಲ್ಲಿ ನೀವು ಎಷ್ಟು ದಿನ ಇರುತ್ತೀರಿ ? "

" ಬೆಂಗಳೂರಿನಲ್ಲಿ ಒಂದು ಕೆಲಸ ಸಿಕ್ಕುವ ತನಕ."

" ಯಾವುದಾದರೂ ನಿರೀಕ್ಷಣೆ ಇದೆಯೆ ? "

" ಸೆಂಟ್ರಲ್ ಕಾಲೇಜಿನಲ್ಲಿ ಒಂದು ಅಧ್ಯಾಪಕ ಕೆಲಸ ಸಿಕ್ಕಬಹುದು. ರಜ ಮುಗಿಯುತ್ತಲೂ ತಮ್ಮನ್ನು ಕಾಣುವಂತೆ ಪ್ರೊಫೆಸರ್ ಹೇಳಿದ್ದಾರೆ."

ಆ ಉತ್ತರ ಇಂದಿರೆಯ ಮನಸ್ಸನ್ನು ಸಮಾಧಾನಪಡಿಸಿತು.

" ಈ ಎರಡು ವರ್ಷಗಳು ಬಹಳ ಬೇಗ ಕಳೆದುಹೋದವು " ಎಂದು ಇಂದಿರೆ ಮಾತನ್ನು ಬೇರೆ ವಿಷಯಕ್ಕೆ ತಿರುಗಿಸಿದಳು.

" ಎಕ್ಕದ ಹಕ್ಕಿಯಂತೆ ಹಾರಿಹೋದವು."

" ನೀವು ಉಪಚಾರಕ್ಕೆ ಹಾಗೆ ಹೇಳುತ್ತೀರಿ."

" ಹೃದಯವೇ ಮಾತನಾಡುವಾಗ ಉಪಚಾರಕ್ಕೆ ಎಡೆ ಎಲ್ಲಿದೆ ? "

" ನನ್ನಿಂದ ನಿಮ್ಮ ವ್ಯಾಸಂಗಕ್ಕೆ ತೊಂದರೆಯಾಗಿರಬಹುದು."

" ನೀನಿಲ್ಲದಿದ್ದರೆ ಬಹುಶಃ ನನಗೆ ಹುಚ್ಚು ಹಿಡಿದುಹೋಗುತ್ತಿತ್ತು."

" ನಾನು ನಿಮಗೆ ಹುಚ್ಚು ಹಿಡಿಸಲಿಲ್ಲವಲ್ಲಾ ! " ಇಬ್ಬರೂ ನಗುವಿನಲ್ಲಿ ತೇಲಿದರು.

' ನಿಜವಾಗಿಯೂ ಇಂದಿರೆ ನನಗೆ ಹುಚ್ಚು ಹಿಡಿಸಿಲ್ಲವೆ ? ' ಎಂದೆನಿಸಿತು ಆನಂದನಿಗೆ. ಅವನ ಅಗಲಿಕೆಯ ಶೋಕದ ಛಾಯೆ ತಿಳಿಯಲಾಗಲಿಲ್ಲ, ಮತ್ತೂ ಮಸಕಾಯಿತು.

" ನಿಮ್ಮ ಉಪಕಾರವನ್ನು ಶ್ವಾಸವಿರುವ ವರೆಗೂ ಮರೆಯುವಂತಿಲ್ಲ."

" ನಿಮ್ಮ ವಿಶ್ವಾಸವನ್ನು ನಾವೂ ಮರೆಯುವಂತಿಲ್ಲ."

ವಿಶ್ವಾಸಕ್ಕಿಂತಲೂ ಮರ್ಮವಾದ ಯಾವುದೋ ಭಾವನೆ ಅವರಿಬ್ಬರ ಹೃದಯಗಳನ್ನೂ ಸಮತಾಳದಿಂದ ಮಿಡಿಸುತ್ತಿತ್ತು. ಇಬ್ಬರ ಕಣ್ಣುಗಳೂ ಸೇರಿ ಅಲ್ಲಿ ಅಂಕುರಿಸಿದ್ದ ಭಾವನೆಯನ್ನು ಕಂಡುಕೊಂಡವು.

" ಹೊತ್ತು ಬಹಳ ಆಯಿತೆ ? " ಯಾವುದೋ ಅರಿವಿನಿಂದ ಆನಂದ ಕೇಳಿದ.

" ಹೊರಡೋಣವೆ ? "

" ಹೊರಡಲೇಬೇಕಲ್ಲ."

ಇಬ್ಬರೂ ಭಾರವಾಗಿ ಹೆಜ್ಜೆ ಹಾಕುತ್ತ ಮನೆಯ ಕಡೆಗೆ ನಡೆದರು.

೬

ಸುಂದರರಾಯರು ಬೆಂಗಳೂರಿನಲ್ಲಿ ಒಬ್ಬ ಗಣ್ಯವ್ಯಕ್ತಿಗಳು. ಮಲ್ಲೇಶ್ವರದಲ್ಲಿಯ ಅವರ ಮನೆ ಶ್ರೀಮಂತಿಕೆಯ ನಿಕೇತನವಾಗಿತ್ತು. ನವೀನ ನಾಗರಿಕತೆಯ ಕಲಾಸೌಂದರ್ಯವೂ ವಿಲಾಸಭಂಗಿಯೂ ಆ ಮನೆಯ ರಚನೆಯಲ್ಲಿಯೇ ಬೆರೆತಿದ್ದವು. ಮನೆಯ ಮುಂದೆ ಸುಂದರವಾದ ಹೂದೋಟ. ರಂಗುರಂಗುಗಳ ಹೂಗಳು ಅರಳಿ ತಲೆದೂಗುತ್ತಿದ್ದುವು.

ಆ ಸುಂದರವಾದ ಆವರಣದಲ್ಲಿ ಸರೋಜ ನವುರಾಗಿ ಬೆಳೆದಿದ್ದಳು. ಒಂದು ಸಂಜೆ ಅವಳು ಹೂದೋಟದಲ್ಲಿ ಹೂವುಗಳನ್ನು ಆಯುತ್ತ ಅಡ್ಡಾಡುತ್ತಿದ್ದಳು. ಸುಂದರರಾಯರೂ ಕಮಲಮ್ಮನವರೂ ಆರಾಮಾಸನಗಳ ಮೇಲೆ ಕುಳಿತು ಗಾಳಿಸೇವನೆ ಮಾಡುತ್ತಿದ್ದರು. ತಮ್ಮ ಮಗಳನ್ನು ಹೆಮ್ಮೆಯಿಂದ ನೋಡುತ್ತಿದ್ದರು.

" ಸರೋಜಳಿಗೆ ಈ ವರ್ಷ ಮದುವೆ ಮಾಡಲೇಬೇಕು. ಆ ಸಂತೋಷವನ್ನು ನಾವು ಬೇಗ ನೋಡೋಣ."

" ಅವಳಿಗೆ ವರನನ್ನು ಹುಡುಕುವ ಶ್ರಮವೇ ಇಲ್ಲ ನನಗೆ. ಅವಳಿಗಾಗಿ ವರಗಳೇ ಸ್ಪರ್ಧಿಸಿ ಮುಂದೆ ಬರುತ್ತಾರೆ."

" ಸರಿಯಾದ ವರ ಕಣ್ಣಿಗೆ ಬಿದ್ದಿದ್ದಾನೆಯೆ ? "

" ನಮ್ಮ ಮನಸ್ಸಿಗೆ ಪೂರ್ತಿ ತೃಪ್ತಿಯಾಗುವ ವರ ಬೇಕು."

" ಜೋಯಿಸರು ಏನು ಹೇಳಿದರು ? ನಮ್ಮ ರಾಜುನ ಜಾತಕ ಹೊಂದಿಕೊಳ್ಳುತ್ತದೆಯೋ ? "

" ನಿನ್ನೆಯ ದಿನ ಹೇಳಿದರಲ್ಲಾ. ಹೊಂದುವುದಿಲ್ಲವಂತೆ."

" ಹಾಗಾದರೆ........"

" ಹಾಗಾದರೇನು ? ಜಾತಕ ಹೊಂದದೆ ಇದ್ದದ್ದೇ ಒಳ್ಳೆಯದಾಯಿತು. ಸರೋಜಳನ್ನು ರಾಜುಗೆ ಖಂಡಿತ ಕೊಡುತ್ತಿರಲಿಲ್ಲ."

" ಅದೇನು ? "

" ಅವನ ನಡೆ ಚೆನ್ನಾಗಿಲ್ಲ ಎಂದು ನನಗೆ ತಿಳಿದಿದೆ. ಯಾವಾಗಲೂ ಸಿಗರೇಟು, ಇಸ್ಪೀಟು, ಜೂಜು—ಅಷ್ಟೇ ಅವನ ಉದ್ಯೋಗ. ಇವನ ಕಳೆಗೆ ಬೆಲೆ ಹಚ್ಚುವವರು ಯಾರು? ಅಪ್ಪನ ಆಸ್ತಿ ಕರಗಿತು. ಮನೆಯ ವ್ಯಾಜ್ಯ ಇನ್ನೂ ಕೋರ್ಟಿನಲ್ಲೇ ಕೂತಿದೆ "

" ನನ್ನ ಕಿವಿಗೂ ಈ ಮಾತು ಬಿದ್ದಿತ್ತು."

" ಸರೋಜಳ ಕೈಹಿಡಿಯುವವನು ವಿದ್ಯಾವಂತನಾಗಿರಬೇಕು. ನಮ್ಮ ಗೌರವಕ್ಕೆ ತಕ್ಕಂತಿರಬೇಕು."

" ವರನ ಲಕ್ಷಣವನ್ನು ಚೆನ್ನಾಗಿ ಹೇಳುತ್ತೀರಿ. ವರನನ್ನು ಮಾತ್ರ ಹುಡುಕಲಿಲ್ಲ."

" ನನ್ನ ದೃಷ್ಟಿಯಲ್ಲಿ ಒಬ್ಬ ಇದ್ದಾನೆ. ಇನ್ನೂ ವಿಚಾರ ಮಾಡಿಲ್ಲ."

" ಯಾರು ಅವನು, ಪೂರ್ತಿಯಾಗಿ ಹೇಳಬಾರದೆ ? "

" ಅವನು ರಾಜುನ ಸ್ನೇಹಿತ. ಹುಡುಗ ಬಹಳ ಒಳ್ಳೆಯವನು. ರೂಪವಂತ. ಕಾಲೇಜಿನ ಅಧ್ಯಾಪಕರೆಲ್ಲ ಅವನನ್ನು ಮೆಚ್ಚಿದ್ದಾರೆ. ಈ ವರ್ಷ ಫಿಸಿಕ್ಸ್ ಆನರ್ಸ್ ಕೊನೆಯ ಪರೀಕ್ಷೆಗೆ ಕುಳಿತಿದ್ದ."

" ಕೂಡಲೇ ವಿಚಾರ ಬೆಳೆಸಿ. ಮನೆತನ ಹೇಗಂತೆ ? "

" ಸಿರಿವಂತರ ಮನೆತನ ಏನೂ ಅಲ್ಲ. ಕುಟುಂಬ ಸ್ವಲ್ಪ ಕಷ್ಟದಲ್ಲಿದೆ. ಅಷ್ಟು ಸಾಲ ಇದೆಯಂತೆ, ಮಗಳ ಮದುವೆ ಆಗಬೇಕಂತೆ. ಅದಕ್ಕೆಲ್ಲಾ ನಾವು ನೆರವಾಗಬಹುದು. ಮುಖ್ಯವಾಗಿ ಅವರು ಸಂಬಂಧಕ್ಕೆ ಒಪ್ಪಬೇಕು."

" ದೇವರು ನಮಗೆ ಕೊಟ್ಟಿರುವ ಸಿರಿತನ ಸಾಕು. ಹುಡುಗ ಹೆಚ್ಚು ಮಟ್ಟಿಗೆ ಓದಿದ್ದಾನೆ ಎನ್ನುತ್ತೀರಿ. ನಾಳೆ ನಾಳಿದ್ದೇ ಈ ಸಂಬಂಧಕ್ಕೆ ನೀವು ಪ್ರಯತ್ನ ಮಾಡಿ."

ಸುಂದರರಾಯರು ಆ ವಿಷಯವಾಗಿ ಮನಸ್ಸನ್ನು ನಿಶ್ಚಯ ಮಾಡಿಕೊಂಡಿದ್ದರು. ಅವರು ವ್ಯವಹಾರಚತುರರು. ವಿಷಯದ ಎಲ್ಲ ಬಗೆಗಳನ್ನೂ ಯೋಚಿಸಿದ್ದರು. ಅವರ ತಂಗಿಯ ಮಗನಾದ ನಾಣಿಗೆ ಮದುವೆಯ ವಯಸ್ಸು ಬಂದಿತ್ತು. ಅವನು ದೇವನಹಳ್ಳಿಯಲ್ಲಿ ಸುಖಜೀವನಕ್ಕೆ ಸಾಕಷ್ಟು ದಾರಿ ಮಾಡಿಕೊಂಡಿದ್ದ. ಎಳೆಯ ವಯಸ್ಸಿನಲ್ಲಿಯೇ ಅವನ ತಂದೆ ತೀರಿಕೊಂಡರು. ಅವನನ್ನು ಇಪ್ಪತ್ತು

ವರ್ಷಗಳ ಕಾಲ ಮನೆಯಲ್ಲಿರಿಸಿಕೊಂಡಿದ್ದು ಕಡೆಗೆ ಒಂದು ಜೀವನೋಪಾಯ ವನ್ನು ಮಾಡಿಕೊಟ್ಟವರು ಸುಂದರರಾಯರೇ. ಈಗ ನಾಣಿ ತನ್ನ ಕಾಲ ಮೇಲೆ ತಾನು ನಿಂತುಕೊಳ್ಳಲು ನೆಲೆಯನ್ನು ಕಂಡಿದ್ದ. ಮಗನಿಗೆ ಒಂದು ಬದುಕನ್ನು ತೋರಿಸಿಕೊಟ್ಟದ್ದಕ್ಕಾಗಿ ವೆಂಕಮ್ಮನವರು ಸುಂದರರಾಯರಿಗೆ ಋಣಿಗಳಾಗಿದ್ದರು. ಈ ವಿಚಾರಗಳೆಲ್ಲ ಸುಂದರರಾಯರ ಮನಸ್ಸಿನಲ್ಲಿ ಮಥನವಾಗಿದ್ದವು. ಅವರ ಸಿಗರೇಟಿನ ಹೊಗೆ ಉಂಗುರ ಉಂಗುರವಾಗಿ ಸುತ್ತುತ್ತಿದ್ದಂತೆ ಕಮಲಮ್ಮನವರ ಮನಸ್ಸಿನಲ್ಲಿಯೂ ಯೋಚನೆಗಳು ಸುತ್ತತೊಡಗಿದವು.

" ನಾಳೆ ಬೆಳಗಿನ ಗಾಡಿಯಲ್ಲಿ ನಾನು ಸಂಪಿಗೆಗೆ ಹೊರಡುತ್ತೇನೆ " ಎಂದರು ಸುಂದರರಾಯರು.

ರಾತ್ರಿ ತಮ್ಮ ಆಲೋಚನೆಗಳನ್ನೆಲ್ಲ ಸುಂದರರಾಯರು ಕಮಲಮ್ಮನವರಿಗೆ ಹೇಳಿದರು.

" ನಾಣಿಯನ್ನು ಹುಡುಗತನದಿಂದ ನಾವು ಸಾಕಿದ್ದೇವೆ. ಅವನ ಮದುವೆಯನ್ನೂ ನಾವೇ ಮಾಡಿಬಿಡೋಣ."

" ಅದರಿಂದ ವೆಂಕಮ್ಮನ ಆಸೆಯನ್ನೂ ಪೂರ್ತಿ ಮಾಡಿದಂತಾಯಿತು " ಎಂದು ಕಮಲಮ್ಮನವರು ದನಿಗೂಡಿಸಿದರು.

" ಅವರಪ್ಪ ಸಾಯುವ ಸಮಯದಲ್ಲಿ ನುಡಿದ ಮಾತನ್ನೂ ನಾನು ನಡೆಸಿಕೊಟ್ಟಂತೆ ಆಗುವುದು."

" ಅದರಿಂದ ಎಲ್ಲರ ಮನಸ್ಸಿಗೂ ಸಂತೋಷ."

" ಓಹೋ! ನಮ್ಮ ಯೋಚನೆ ಬಹಳ ಮುಂದಾಯಿತು. ವರನನ್ನು ಒಪ್ಪಿಸಿಕೊಳ್ಳುವುದೇ ಇನ್ನೂ ಉಳಿದಿದೆ." ಊಹೆಗೆಲ್ಲ ಸುಂದರರಾಯರು ಕೊಡಲಿಯ ಪೆಟ್ಟನ್ನು ಕೊಟ್ಟರು.

" ನೀವು ಕೈಹಾಕಿದಮೇಲೆ ಕೆಲಸವನ್ನು ಸಾಧಿಸದೇ ಬಿಡುತ್ತೀರಾ! " ಎಂದು ಕಮಲಮ್ಮನವರು ಮಾತಿನಿಂದಲೇ ರಂಗರಾಯರ ಹೆಮ್ಮೆಯನ್ನು ಕೆರಳಿಸಿದರು. ಹೆಂಡತಿಯ ಮೆಚ್ಚಿಗೆಯ ಮಾತಿನಿಂದ ಅವರು ಉಬ್ಬಿಹೋದರು.

ಬೆಳಗ್ಗೆ ಸುಂದರರಾಯರು ಪ್ರಯಾಣಕ್ಕೆ ಸಿದ್ಧರಾದರು. ಕಮಲಮ್ಮನವರು ದೇವರಿಗೆ ತುಪ್ಪದ ದೀಪಗಳನ್ನು ಹಚ್ಚಿಟ್ಟರು.

## ೧೦

ಸುಂದರರಾಯರ ಪತ್ರವನ್ನೋದಿ ರಂಗರಾಯರು ಆನಂದದ ಕಡಲಿನಲ್ಲಿ ತೇಲಾಡಿದರು. ತಮ್ಮ ತ್ಯಾಗವೆಲ್ಲ ಒಂದೇ ಕ್ಷಣದಲ್ಲಿ ಮೊಳೆತು, ಹೂವಾಗಿ, ಕಾಯಾಗಿ, ಹಣ್ಣಾಗಿ ಅವರ ಕಣ್ಣ ಮುಂದೆ ಕಂಗೊಳಿಸಿತು. ತಮ್ಮ ಭಾಗ್ಯನಕ್ಷತ್ರ ಅಷ್ಟು ಅನಿರೀಕ್ಷಿತವಾಗಿ ಬೆಳಗುವುದೆಂದು ಅವರು ಊಹಿಸಿರಲಿಲ್ಲ. ಆ ಸಂತೋಷವೆಲ್ಲ ಇನ್ನೂ ಅದರ ಮೊದಲ ಕುಡಿಕಿರಣಗಳೆಂದು ತಿಳಿದು ಅವರ ಆಸೆ ಮತ್ತೂ ಹಿಗ್ಗಿತು.

ನಾಗಮ್ಮನವರ ಹೆಣ್ಣು ಹೃದಯದಲ್ಲಿ ಬಣ್ಣಬಣ್ಣದ ಕನಸುಗಳು ಹೊಸ ಉತ್ಸಾಹವನ್ನು ತುಂಬಿದವು. ನೆಟ್ಟುಹೋಗಿದ್ದ ನಿರಾಶೆಯ ಬೇರುಗಳು ಸಡಿಲವಾದವು. ರಂಗರಾಯರ ಕಲ್ಪನೆಯಲ್ಲಿ ಶೂನ್ಯವನ್ನೇ ಕಾಣುತ್ತಿದ್ದವರು ಈಗ ತಿರುಳನ್ನು ಕಂಡರು.

ಸುಂದರರಾಯರ ಹೆಸರನ್ನು ರಂಗರಾಯರು ಕೇಳಿದ್ದರು. ನಾಗಮ್ಮನವರಿಗೆ ತಮ್ಮ ಆಸೆಯನ್ನು ಹೊರಪಡಿಸಿದರು.

" ಸುಂದರರಾಯರು ಸಾಮಾನ್ಯರಲ್ಲ. ಬೆಂಗಳೂರು ನಗರದಲ್ಲಿ ದೊಡ್ಡ ಸಿರಿವಂತರು. ಪ್ರಭಾವಶಾಲಿಗಳು. ಸರೋಜ ಅವರ ಏಕಪುತ್ರಿ. ಒಂದೇ ಗಳಿಗೆಯಲ್ಲಿ ನಮ್ಮ ಅದೃಷ್ಟದ ಅಲೆ ನಮ್ಮನ್ನು ಎಷ್ಟು ದೂರ ತೇಲಿಸಿಬಿಟ್ಟಿತು, ನೋಡಿದೆಯಾ ! "

" ಎಲ್ಲ ನಮ್ಮ ಆನಂದನ ಪುಣ್ಯ " ಎಂದರು ನಾಗಮ್ಮನವರು.

" ಅವನ ಪುಣ್ಯ ನಮ್ಮ ಕಷ್ಟಗಳನ್ನು ಪರಿಹರಿಸಬೇಕು."

" ಮುಂಚೆ ಪದ್ಮಳ ಮದುವೆ ಆಗಬೇಕು, ಅನಂತರ ಆನಂದನ ಮದುವೆ ಮಾತು " ಎಂದು ನಾಗಮ್ಮನವರು ಖಂಡಿತವಾಗಿ ನುಡಿದರು.

ಸುಂದರರಾಯರ ಪತ್ರ ರಂಗರಾಯರ ಮನಸ್ಸನ್ನು ಆನಂದಗೊಳಿಸಿತ್ತು. ಆದರೆ ಪದ್ಮಳ ಮದುವೆಯ ಚಿಂತೆ ಅಲ್ಲಿ ಸುಳಿದಿರಲಿಲ್ಲ.

" ಆಗಲೇ ಆನಂದನ ಮದುವೆ ಆಗಿಹೋಯಿತೆ ? ಅವರು ಬಂದು ಮಾತನಾಡಿಕೊಂಡು ಹೋಗಲಿ. ಪದ್ಮಳ ಮದುವೆ ಏನೋ ಮುಂಚೆ ಆಗಲೇಬೇಕು " ಎಂದು ರಂಗರಾಯರು ಸಾವಧಾನವಾಗಿ ನುಡಿದರು.

ರಾತ್ರಿ ಬೇಗ ಜಾರಿಹೋಯಿತು. ರಂಗರಾಯರ ಮನೆಗೆ ಹೊಸ ಕಳೆ

ಬಂದಿತ್ತು. ಸುಂದರರಾಯರಿಗೆ ಆದರದ ಸ್ವಾಗತ ದೊರೆಯಿತು.

ತಿಂಡಿ ಉಪಚಾರಗಳೆಲ್ಲ ಮುಗಿದವು. ಸುಂದರರಾಯರ ಜೊತೆಯಲ್ಲಿ ಬಂದಿದ್ದ ಜೋಯಿಸರು ಶೀವಿಯ ಮಾತುಗಳಿಂದ ಅವರನ್ನು ರಂಗರಾಯರಿಗೆ ಪರಿಚಯ ಮಾಡಿಕೊಟ್ಟರು. ಅನಂತರ ಅವರು ಸಂಪಿಗೆಗೆ ಬಂದಿದ್ದ ಕಾರ್ಯಾರ್ಥವನ್ನು ತಿಳಿಸಿದರು. ಸುಂದರರಾಯರೇ ಮಾತನ್ನು ಮೊದಲುಮಾಡಿದರು.

"ಜೋಯಿಸರು ವಿಚಾರವನ್ನೆಲ್ಲ ಅರಿಕೆಮಾಡಿದ್ದಾರೆ. ತಾವು ದೊಡ್ಡ ಮನಸ್ಸುಮಾಡಿ ನಮ್ಮ ಸಂಬಂಧವನ್ನು ಬೆಳಸಬೇಕು."

"ತಾವು ನಮ್ಮ ಸಂಬಂಧಕ್ಕಾಗಿ ದಯಮಾಡಿಸಿದ್ದು ತುಂಬ ಸಂತೋಷ. ಆದರೆ ಸದ್ಯದಲ್ಲಿ ನಾವು ಆನಂದನ ಮದುವೆ ಮಾಡುವ ಉದ್ದೇಶವನ್ನು ಇಟ್ಟು ಕೊಂಡಿಲ್ಲ. ಮದುವೆಯ ವಯಸ್ಸಿಗೆ ಬಂದ ಮಗಳಿದ್ದಾಳೆ. ಈ ವರ್ಷ ಅವಳ ಮದುವೆ ಆಗಲೇಬೇಕು. ಆಮೇಲೆ ಆನಂದನ ಮದುವೆ ವಿಚಾರ."

ರಂಗರಾಯರು ಸುಂದರರಾಯರ ಮುಖವನ್ನು ನೋಡಿದರು. ಅಲ್ಲಿ ಯಾವ ಪರಿಣಾಮವೂ ಕಾಣಲಿಲ್ಲ. ಅವರು ಮೆಲುದನಿಯಲ್ಲಿ ಮಾತ ನಾಡಿದರು :

"ರಂಗರಾಯರೆ, ನನಗೆ ಮಗನೂ ಸರೋಜ, ಮಗಳೂ ಸರೋಜ, ನನ್ನ ಏಕ ಪುತ್ರಿ. ವರ ವಿದ್ಯಾವಂತನಾಗಿರಬೇಕು, ಸುಸಂಸ್ಕೃತನಾಗಿರಬೇಕು ಎನ್ನುವ ಆಸೆ ನಮಗೆ ತುಂಬ ಇದೆ. ಅದಕ್ಕಾಗಿಯೇ ಈ ಸಂಬಂಧಕ್ಕೆ ನಾವು ಅಷ್ಟೊಂದು ಇಷ್ಟಪಡುವುದು. ಮಗಳ ಮದುವೆಯನ್ನು ಈ ವರ್ಷವೇ ಮಾಡೋಣ ಎಂದು ನಮಗೂ ಆಸೆ. ತಾವು ದಯಮಾಡಿ ಸಂಬಂಧ ಬೆಳೆಸಲು ಒಪ್ಪಿದರೆ ಇತರ ವಿಚಾರಗಳನ್ನು ಆಮೇಲೆ ಮಾತನಾಡೋಣ. ಸಂಬಂಧ ಬೆಳೆದಮೇಲೆ ನಿಮ್ಮ ಕಷ್ಟಸುಖಗಳಲ್ಲೆಲ್ಲ ನಾವೂ ಭಾಗಿಗಳು."

ರಂಗರಾಯರಿಗೆ ಆ ಮಾತು ಆಶಾದಾಯಕವಾಯಿತು. ಆದರೂ ಪದ್ಮಳ ಮದುವೆ ಮುಂಚೆ ನಡೆಯಲೇಬೇಕೆಂಬ ಸಿದ್ಧಾಂತ ಬಿಗಿಯಾಗಿತ್ತು.

"ತಮ್ಮ ಸಂಬಂಧ ಮಾಡಿಕೊಳ್ಳುವುದು ನಮಗೆ ಒಂದು ಹೆಮ್ಮೆ, ಸುಂದರರಾಯರೆ. ಆದರೆ ನಮ್ಮ ಕುಟುಂಬದ ಪರಿಸ್ಥಿತಿಯಲ್ಲಿ ಅದಕ್ಕೆ ಈಗ ಅವಸರವಿಲ್ಲ. ಮಗಳ ಮದುವೆ ಆದ ಹೊರತು ಬೇರೆ ಯಾವ ಯೋಚನೆಗೂ ನಮಗೆ ಮನಸ್ಸಮಾಧಾನ ಇರುವುದಿಲ್ಲ."

“ತಾವು ಮಗನ ಮದುವೆಗೆ ದಯಮಾಡಿ ಮುಂಚೆ ಒಪ್ಪಿಗೆ ಕೊಡಿ. ಅನಂತರ ತಮ್ಮ ಮಗಳ ಮದುವೆಯ ವಿಚಾರವನ್ನೂ ಮಾತನಾಡೋಣ.”

“ಈಗ ತಾವು ಪ್ರಸ್ತಾಪ ಮಾಡಿದ್ದೀರಿ. ಈಗಲೇ ಸುಮ್ಮನೆ ವಿಚಾರ ಮಾಡಿದರೆ ಏನು ಪ್ರಯೋಜನ? ನಮ್ಮ ಪರಿಸ್ಥಿತಿಯನ್ನು ತಿಳಿಸಿದ್ದೇನೆ. ಮಗಳ ಮದುವೆ ಮುಂಚೆ ಆಗಲೇಬೇಕು.”

“ಮಗಳ ಮದುವೆಯೇ ಮುಂಚೆ ಆಗಲಿ, ರಂಗರಾಯರೆ. ಬೇಡ ಎಂದವರಾರು?”

“ಮಗಳ ಮದುವೆ ಅಷ್ಟು ಸುಲಭವೆ? ಇನ್ನೂ ವರ ಸಿಕ್ಕಿಲ್ಲ. ನಮ್ಮ ಆರ್ಥಿಕಪರಿಸ್ಥಿತಿಯೂ ಈಗ ಚೆನ್ನಾಗಿಲ್ಲ. ಆನಂದನ ವಿದ್ಯಾಭ್ಯಾಸಕ್ಕೆ ಕೈಹಚ್ಚಿದ್ದಾಯಿತು. ಅದು ಹೇಗೋ ಮುಕ್ತಾಯವಾಯಿತು....”

ಅವರು ಮುಂದುವರಿಸುತ್ತಿರುವಂತೆಯೇ ಸುಂದರರಾಯರು ಹೇಳಿದರು:

“ರಂಗರಾಯರೆ, ತಾವು ಆರ್ಥಿಕ ವಿಚಾರದಲ್ಲಿ ಯಾವ ಯೋಚನೆಯನ್ನೂ ಮಾಡಬೇಡಿ. ನಿಮ್ಮ ಮಗನ ಮದುವೆಯ ಜೊತೆಯಲ್ಲಿಯೇ ಮಗಳ ಮದುವೆಯೂ ನಡೆದುಹೋಗಲಿ. ಅದಕ್ಕೆ ಒಪ್ಪಿಗೆ ತಾನೆ?”

ರಂಗರಾಯರಿಗೆ ಅವರ ಮಾತು ಒಗೆಹರಿಯಲಿಲ್ಲ. ಅವರು ಆಶ್ಚರ್ಯದಿಂದ ಕೇಳಿದರು:

“ಅದು ಸಾಧ್ಯವಾಗುವುದಾದರೂ ಹೇಗೆ, ಸುಂದರರಾಯರೆ!”

“ಎಲ್ಲ ಜವಾಬ್ದಾರಿಯನ್ನೂ ನಾನು ನಿರ್ವಹಿಸುತ್ತೇನೆ. ತಮ್ಮ ಮಗಳಿಗೆ ನಾನು ವರನನ್ನೂ ಗೊತ್ತುಮಾಡುತ್ತೇನೆ. ತಮ್ಮ ಆರ್ಥಿಕ ತೊಂದರೆಗಳಿಗೆ ಪೂರ್ತಿಯಾಗಿ ನೆರವಾಗುತ್ತೇನೆ. ಎರಡು ಮದುವೆಗಳೂ ಒಟ್ಟಿಗೆ ನಡೆದುಹೋಗಲಿ.”

ಸುಂದರರಾಯರು ತಮ್ಮ ವ್ಯವಸ್ಥೆಗಳನ್ನೆಲ್ಲಾ ರಂಗರಾಯರಿಗೆ ವಿವರಿಸಿದರು. ನಾಣಿಯ ವಿಚಾರವನ್ನೆತ್ತಿ ತಮ್ಮ ಮನಸ್ಸನ್ನು ಬಿಚ್ಚಿಟ್ಟರು.

ಬೆಟ್ಟದಂತಿದ್ದ ರಂಗರಾಯರ ಸಮಸ್ಯೆಗಳು ಕ್ಷಣದಲ್ಲಿ ಮಂಜಿನಂತೆ ಕರಗಿಹೋದವು. ಕತ್ತಲೆ ಹರಿದುಹೋಗಿ ಬೆಳಕು ಬಿದ್ದಂತಾಯಿತು.

“ಮೊದಲೇ ಹೇಳಿಬಿಟ್ಟೆನಲ್ಲ. ತಾವು ನಮ್ಮ ಸಂಬಂಧಕ್ಕಾಗಿ ಬಂದಿರುವುದು ನಮಗೊಂದು ಹೆಮ್ಮೆ. ಆದರೆ ವಿಚಾರಗಳನ್ನೆಲ್ಲ ತಮಗೆ ತಿಳಿಸಿದ್ದೇನೆ.”

"ಆ ವಿಚಾರಗಳನ್ನೆಲ್ಲ ನನಗೆ ಬಿಟ್ಟುಬಿಡಿ. ತಾವು ಸ್ವಲ್ಪವೂ ಚಿಂತೆ ಹಚ್ಚಿಕೊಳ್ಳಬೇಡಿ."

ಅವರ ನಿರ್ಧಾರ ಅಷ್ಟು ಸರಳವಾಗಿ ನಡೆದುಹೋಗುತ್ತದೆಂದು ರಂಗರಾಯರು ಎಣಿಸಿರಲಿಲ್ಲ. ಸುಂದರರಾಯರು ಆಪ್ತವಾಗಿ ತಮ್ಮ ಏರ್ಪಾಡುಗಳನ್ನೆಲ್ಲ ರಂಗರಾಯರಿಗೆ ತಿಳಿಸಿದರು. ಅವುಗಳಿಗೆ ಅವರ ಮತ್ತು ನಾಗಮ್ಮನವರ ವಿಶ್ವಾಸಪೂರ್ಣವಾದ ಒಪ್ಪಿಗೆಯನ್ನು ಗಳಿಸಿದರು.

"ನಾನು ಇನ್ನು ಕೆಲಸಗಳಲ್ಲಿ ತೊಡಗುತ್ತೇನೆ. ಆದಷ್ಟು ಬೇಗ ಲಗ್ನವನ್ನು ನಿಶ್ಚಯಿಸಿಬಿಡೋಣ" ಎಂದು ಸುಂದರರಾಯರು ತೀರ್ಮಾನವನ್ನು ಹೇಳಿದರು.

ರಂಗರಾಯರ ಹೃದಯದಲ್ಲಿ ಗೆಲುವಿನ ಚಿಲುಮೆ ಉಕ್ಕಿತು. ನಿಲ್ದಾಣದ ವರೆಗೆ ಸುಂದರರಾಯರನ್ನು ಬೀಳ್ಕೊಟ್ಟು ಹಿಂತಿರುಗಿದರು.

'ಆನಂದ ಸಿರಿವಂತರ ಮನೆತನಕ್ಕೆ ಸೇರುತ್ತಾನೆ, ಜೋಯಿಸರು ಹೇಳಿದಂತೆ ಸರೋಜ ಚೆಲುವೆ, ಆನಂದನಿಗೆ ಅನುರೂಪಳಾದ ಕನ್ಯೆ, ಪದ್ಮಳ ಮದುವೆಯೂ ನಡೆದುಹೋಗುತ್ತದೆ, ತಮ್ಮ ಅಷ್ಟಿಷ್ಟು ಸಾಲಗಳನ್ನೆಲ್ಲಾ ತೀರಿಸಿಬಿಡಬಹುದು, ಇದನ್ನೆಲ್ಲಾ ಕೇಳಿ ಆನಂದ ಹಿಗ್ಗಿಹೋಗುತ್ತಾನೆ, ಇನ್ನು ಕಳೆದುಳಿದ ತಮ್ಮ ಬದುಕನ್ನಾದರೂ ಶಾಂತಿಯಿಂದ ಕಳೆಯಬಹುದು' ಎಂದು ರಂಗರಾಯರು ತಮ್ಮ ಜೀವಿತದ ರಸಗಳಿಗೆಗಳ ಕನಸನ್ನು ಕಾಣುತ್ತಿದ್ದರು. ಮರುತಿಂಗಳಲ್ಲೇ ಬರಲಿದ್ದ ಮಂಗಳಕಾರ್ಯಗಳ ಚಿತ್ರಗಳು ನಾಗಮ್ಮನವರ ಮನದ ಮುಂದೆ ಮೂಡಿದವು.

## ೧೧

ಇಂಗಿಹೋಗಿದ್ದ ರಂಗರಾಯರ ಹರ್ಷದ ಹೊನಲು ತುಂಬಿ ಬಂದಿತು. ಮೂರು ವರ್ಷಗಳಲ್ಲಿ ಅವರ ಬಾಳು ಹಲವು ದಾರಿಗಳನ್ನು ಹಿಡಿದು ಗುರಿ ಕಾಣದಿತ್ತು. ಕಷ್ಟಕಾರ್ಪಣ್ಯಗಳಲ್ಲಿ ತೊಳಲಿ ಅವರ ಜೀವ ಸೋತಿತ್ತು. ಆನಂದನ ಅದೃಷ್ಟ, ನಂದಿಹೋಗುತ್ತಿದ್ದ ತಮ್ಮ ಅದೃಷ್ಟದೀಪಕ್ಕೆ ಎಣ್ಣೆಯನ್ನೆರೆಯಿತೆಂದು ಅವರು ಭಾವಿಸಿದರು. ಅವನ ಮದುವೆ ತಮ್ಮ ಕುಟುಂಬದ ಎಲ್ಲ ಸಮಸ್ಯೆಗಳನ್ನೂ ಬಿಡಿಸುವುದೆಂದು ನಂಬಿದರು. ಸುಂದರರಾಯರಂತಹ ಸಿರಿವಂತರೊಡನೆ

ಸಂಬಂಧ ಬೆಳೆಸಿದರೆ ಸಮಾಜದಲ್ಲಿ ತಮ್ಮ ಸ್ಥಾನ ಏರುವುದರಲ್ಲಿ ಅವರಿಗೆ ಸಂದೇಹವಿರಲಿಲ್ಲ. ಅದೃಷ್ಟ ತಾನಾಗಿ ಬಾಗಿಲನ್ನು ತಟ್ಟಿದಾಗ ಅದಕ್ಕೆ ಓಕೊಡುವುದು ಬುದ್ಧಿವಂತಿಕೆಯೆಂದು ದೃಢಪಡಿಸಿಕೊಂಡರು. ಲಗ್ನವನ್ನು ಶೀಘ್ರವಾಗಿ ನಿಶ್ಚಯಿಸಲು ಸುಂದರರಾಯರು ಇಷ್ಟಪಟ್ಟಿದ್ದರು. ರಂಗರಾಯರ ಉತ್ಸಾಹಕ್ಕೆ ಮಿಗಿಲಿಲ್ಲ. ಆನಂದನ ಕಿವಿಯನ್ನು ಶುಭವಾರ್ತೆಯಿಂದ ತುಂಬಲು ಅವರು ತವಕಪಡುತ್ತಿದ್ದರು. ಪರೀಕ್ಷೆ ಮುಗಿಯಲು, ಕೂಡಲೆ ಸಂಪಿಗೆಗೆ ಬರಲು ಅವನಿಗೆ ಕಾಗದ ಬರೆದರು.

ರೈಲುಗಾಡಿ ಆ ದಿನ ಎಂದಿಗಿಂತಲೂ ಮುಂಚಿತವಾಗಿ ಸಂಪಿಗೆಯನ್ನು ಸೇರಿತು. ದೂರದಿಂದಲೇ ಆನಂದ ಊರನ್ನು ದೃಷ್ಟಿಸಿ ನೋಡುತ್ತಿದ್ದ. ಅವನ ಕಣ್ಣಿನಲ್ಲಿ ಹೊಸ ಬೆಳಕಿತ್ತು. ತಾನು ಕಷ್ಟದಿಂದ ನಡೆದು ಮುಗಿಸಿದ ಉದ್ದವಾದ ಬಾಳ ಜಾಡು ಮನಸ್ಸಿನೆದುರು ಜೀರ್ಣವಾಗಿ ಕಂಡಿತು. ಅದನ್ನು ಹೇಗೆ ನಡೆದು ಮುಗಿಸಿದೆನೆಂದು ಅವನಿಗೆ ಅಚ್ಚರಿಯಾಯಿತು. ಜಟಿಲವಾದ ಎಷ್ಟೋ ಪರಿಸ್ಥಿತಿಗಳನ್ನು ಇದಿರಿಸಿ ತನ್ನ ಆದರ್ಶದ ಕಡೆಗೆ ಕೆಚ್ಚಿನಿಂದ ಮುನ್ನಡೆದ ಮನುಷ್ಯನಿಗಾಗುವ ಸಂತೋಷವಾಯಿತು, ಅವನಿಗೆ. ಮನಸ್ಸಿನಲ್ಲಿ ಹೊರಸೂಸಿದ ಹೊಸ ಭಾವನೆಗಳು ಅವನು ಕಂಡ ಒಂದೊಂದು ದೃಶ್ಯದ ಮೇಲೂ ಪ್ರತಿಬಿಂಬಿಸಿದವು. ನಿಲ್ದಾಣದಿಂದ ಮನೆಯ ಕಡೆಗೆ ಹೆಜ್ಜೆ ಹಾಕಿದ.

ಆನಂದನ ದೃಷ್ಟಿಗೆ ಸಂಪಿಗೆ ಹೊಸ ಕಳೆಯಲ್ಲಿ ಮೆರೆಯಿತು. ದೂರದ ತೋಟಗಳಲ್ಲಿ ತರಗೆಲೆಗಳೆಲ್ಲವೂ ಉದುರಿ ಚಿಗುರೆಲೆಗಳು ಕಾಣಿಸಿದವು. ಆಗ ತಾನೆ ಮಳೆಯನ್ನು ಸುರಿಸಿ ಕಪ್ಪು ಮೋಡಗಳು ತಮ್ಮ ಭಾರವನ್ನು ಕಳೆದು ಕೊಂಡು ಆಕಾಶದಲ್ಲಿ ತಿಳಿಯಾಗಿ ಹಾರಾಡುತ್ತಿದ್ದವು. ಮೈದಾನದ ಮೇಲೆ ಹಸುರು ನರ್ತಿಸುತ್ತಿತ್ತು. ಕಾಣದ ಹಸ್ತವೊಂದು ಸಾವಿರ ತಂತಿಗಳ ನಿಸರ್ಗ ವೀಣೆಯಿಂದ ತರಂಗತರಂಗವಾಗಿ ಭಾವಪರಂಪರೆಗಳನ್ನೆಬ್ಬಿಸಿತು. ಆನಂದನ ಹೃದಯ ಅದರೊಡನೆ ಮೇಳಗೊಂಡಿತು. ಹಾದಿಯಲ್ಲಿ ಸುಳಿದಾಡುತ್ತಿದ್ದ ಜನರು ಅವನನ್ನು ಅರಳಿಸಿದ ಕಣ್ಣಿನಿಂದ ನೋಡಿದರು. ಅವರ ದೃಷ್ಟಿಯಲ್ಲಿ ಅವನು ಪ್ರೌಢವಿದ್ಯಾಪಾರಂಗತನಾದ ಒಬ್ಬ ಹಿರಿಯ ವ್ಯಕ್ತಿಯಂತೆ.

ಆನಂದ ಮನೆಯನ್ನು ಸೇರಿದ. ಮನೆಗೆ ಹೊಸ ಜೀವಕಳೆ ಬಂದಿದೆ. ಮಸಕಾಗಿದ್ದ ಗೋಡೆಗಳಿಗೆ ಸುಣ್ಣಬಣ್ಣ ಬಳಿದಿದ್ದು, ಮನೆಯಲ್ಲಿ ಬೆಳಕು

ಬೀರಿದೆ. ಬಿಳಿ ಗೋಡೆಗಳ ಮೇಲೆ ಹೊಸ ಚಿತ್ರಪಟಗಳು ಓಲಾಡುತ್ತಿವೆ. ಮೇಲ್ಛಾವಣಿಯಲ್ಲಿ ಕಾಣಬಹುದಾಗಿದ್ದ ಒಂದು ಜೇಡನ ಜಾಲವೂ ಕಾಣುತ್ತಿಲ್ಲ. ಸುತ್ತಲೂ ರಂಗವಲ್ಲಿಯ ಕಲೆಯನ್ನು ಪದ್ಮ ರಂಗುರಂಗಾಗಿ ಪ್ರದರ್ಶಿಸಿದ್ದಾಳೆ. ಅವಳ ಕಣ್ಣಿನಲ್ಲಿ ನಲಿವಿದೆ. ರಂಗರಾಯರ ಗೃಹಜೀವನದಲ್ಲಿ ಒಂದು ಹೊಸ ಪ್ರಕರಣ ಆರಂಭವಾಗಿದೆ. ಅಷ್ಟೊಂದು ಅಪರೀಕ್ಷಿತವಾದ ಬದಲಾವಣೆಗಳಿಂದ ಆನಂದನ ಚಿತ್ತ ಹರ್ಷದಿಂದ ತುಂಬಿತು.

ನಾಗಮ್ಮನವರ ಕಣ್ಣಿನಲ್ಲಿ ಆನಂದಬಾಷ್ಪ ಊರಿತು.

"ಮಾತಿಗೆ ಕುಳಿತರೆ ಏನೂ ಬೇಕಾಗುವುದಿಲ್ಲ. ಹೊತ್ತು ಮೀರಿದೆ, ಊಟಕ್ಕೆ ಏಳಿ. ಆಮೇಲೆ ಎಷ್ಟು ಬೇಕಾದರೂ ಮಾತನಾಡೋಣ" ಎಂದು ಅವರು ಅವಸರ ಮಾಡಿದರು.

ಊಟ ಮಾಡುತ್ತ ಆನಂದ ಬೆಂಗಳೂರು ವೃತ್ತಾಂತವನ್ನೆಲ್ಲ ಹೇಳಿದ. ಅವನ ಮಾತಿನಲ್ಲಿ ಅಡಗಿದ್ದ ತನ್ನ ಮತ್ತು ಇಂದಿರೆಯ ಸ್ನೇಹಭಾವನೆಗಳು ಯಾರ ಮನಸ್ಸಿಗೂ ಗೋಚರವಾಗಲಿಲ್ಲ. ಆ ಬಾರಿಯೂ ಅವನು ಮೊದಲನೆಯ ತರಗತಿಯಲ್ಲಿಯೇ ಉತ್ತೀರ್ಣನಾಗುವನೆಂದು ತಿಳಿದು ರಂಗರಾಯರ ಚಿತ್ತ ಹೆಮ್ಮೆಯಿಂದ ತುಂಬಿತು.

೧೨

"ನನ್ನ ಆಸೆಯೆಲ್ಲ ಫಲಿಸಿದೆ, ಆನಂದ. ಅದೆಲ್ಲ ಫಲಿಸುವಂತೆ ನೀನು ಮಾಡಿದೆ." ರಂಗರಾಯರ ಮಾತು ಅವರ ಅಂತರಾಳದಿಂದ ಹೊರಬಿದ್ದಿತು. ತಮ್ಮ ಸಂದೇಶ ಆನಂದನ ಹೃದಯವನ್ನು ಉಬ್ಬಿಸುವುದೆಂದು ಅವರು ಭಾವಿಸಿದರು.

"ನನ್ನ ವ್ಯಾಸಂಗಕ್ಕಾಗಿ ನೀವೆಲ್ಲ ಬಹಳ ಕಷ್ಟಪಡಬೇಕಾಯಿತು."

"ಆನಂದ, ದುರದೃಷ್ಟದ ಬಹಳ ಪೆಟ್ಟುಗಳನ್ನು ನಾನು ತಿಂದಿದ್ದೇನೆ. ಅವೆಲ್ಲವನ್ನೂ ಸಹಿಸಿಕೊಳ್ಳಲು ನನಗೆ ಶಕ್ತಿಯನ್ನು ಕೊಟ್ಟಿದ್ದು ಜೀವನದಲ್ಲಿ ನಾನು ಈ ಗಳಿಗೆಯನ್ನು ಕಾಣಬೇಕೆಂಬ ಆಸೆಯೇ."

"ಆ ಹೊರೆಯನ್ನು ಇನ್ನು ನಾನು ವಹಿಸಿಕೊಳ್ಳುತ್ತೇನೆ."

"ಇನ್ನುಮುಂದೆ ನಮ್ಮದು ಹೊಸ ಬಾಳು, ಆನಂದ."

"ಇನ್ನು ಹೊಸ ಜಾಡಿನಲ್ಲಿ ಹೆಜ್ಜೆ ಹಾಕೋಣ."

"ಆ ಜಾಡಿನಲ್ಲಿ ನಾನು ಆಗಲೆ ಹೆಜ್ಜೆಹಾಕಿ ಕೆಲವು ಮೈಲಿಗಲ್ಲುಗಳನ್ನು ದಾಟಿದ್ದೇನೆ."

"ನಿನ್ನ ಪ್ರಯತ್ನ ಹೆಚ್ಚಿಸದು."

"ಆ ಪ್ರಯತ್ನ ಪೂರ್ತಿಯಾಗಿ ಫಲಿಸಿದೆ."

"ಇನ್ನೂ ಪೂರ್ತಿಯಾಗಿ ಫಲಿಸಿಲ್ಲ."

"ಏಕೆ ?"

"ನಾನು ಫಲವನ್ನು ದೊರಕಿಸಿ ಕೊಡಬೇಕು. ಅದಕ್ಕಾಗಿ ಸಿದ್ಧನಾಗಿದ್ದೇನೆ, ಅಷ್ಟೆ."

"ನಾನು ಆಸೆಪಟ್ಟ ಫಲವನ್ನು ನೀನು ಆಗಲೆ ದೊರಕಿಸಿಕೊಟ್ಟಿದ್ದೀ."

"ವ್ಯಾಸಂಗವೇ ಫಲವಲ್ಲ. ಫಲವನ್ನು ಸಾಧಿಸಿಕೊಳ್ಳುವುದಕ್ಕೆ ಅದು ಒಂದು ಸಾಧನ ಮಾತ್ರ."

"ಆ ಸಾಧನವೇ ನನ್ನ ಆಸೆಯನ್ನೆಲ್ಲ ಸಾಧಿಸಿಕೊಟ್ಟಿದೆ. ನನಗೆ ಇನ್ನು ಯಾವ ಆಸೆಯೂ ಇಲ್ಲ."

ರಂಗರಾಯರ ಕಣ್ಣು ಒದ್ದೆಯಾಯಿತು. ಆನಂದನಿಗೆ ಅವರ ಮಾತು ಅರ್ಥವಾಗಲಿಲ್ಲ. ಅವರು ಮುಂದುವರಿಸಿದರು :

"ಈಗ ಜಮೀನೆಲ್ಲ ನಮ್ಮ ಕೈಯಲ್ಲಿದೆ, ಫಸಲು ಸಹಿತ."

"ಅದು ಹೇಗೆ ಸಾಧ್ಯವಾಯಿತು !" ಎಂದು ಆನಂದ ಆಶ್ಚರ್ಯದಿಂದ ಕೇಳಿದ.

"ನಾವು ಪೂರ್ತಿಯಾಗಿ ಋಣಮುಕ್ತರಾಗಿದ್ದೇವೆ. ಮೂರು ಸಾವಿರ ರೂಪಾಯಿ ಸಾಲವೂ ತೀರಿಹೋಯಿತು."

"ಅಷ್ಟೊಂದು ಅದೃಷ್ಟ ನಮ್ಮದು ಹೇಗಾಯಿತು !"

"ಆ ಅದೃಷ್ಟವನ್ನು ಪೂರ್ತಿಯಾಗಿ ತಿಳಿದರೆ ನಿನ್ನ ಸಂತೋಷದ ಕಟ್ಟೆ ಒಡೆದುಹೋಗುತ್ತೆ."

"ಏನದು, ಹೇಳು."

"ಪದ್ಮಳ ಮದುವೆಯೂ ನಿಶ್ಚಯವಾಗಿದೆ. ವ್ಯವಸ್ಥೆಗಳೆಲ್ಲ ಆಗಿವೆ !"

"ಅಂದರೆ ?"

" ನಿನ್ನ ಮದುವೆ ನಿಶ್ಚಯವಾಯಿತು. ಅದರಿಂದ ಈ ಎಲ್ಲ ವಿಚಾರಗಳೂ ನಿಶ್ಚಯವಾದವು. ಮದುವೆಗೆ ಒಪ್ಪಿಗೆ ಕೊಟ್ಟಾಗಿದೆ. ನಾಳೆ ಲಗ್ನಪತ್ರಿಕೆ ! "

ರಂಗರಾಯರು ಎಲ್ಲ ವಿಷಯಗಳನ್ನೂ ಆನಂದನಿಗೆ ತಿಳಿಸಿದರು. ಅವನಿಗೆ ಸಿಡಿಲೆರಗಿದಂತಾಯಿತು. ಹೃದಯದ ಮಿಡಿತವೇ ಕೆಲವು ಕ್ಷಣ ಕಾಲ ನಿಂತು ಹೋದಂತೆ ಮುಖ ವಿವರ್ಣವಾಯಿತು. ನಾಲಗೆಯಿಂದ ಮಾತು ಹೊರಡಲಿಲ್ಲ. ಶಿಲೆಯಂತೆ ಸುಮ್ಮನೆ ಕುಳಿತುಬಿಟ್ಟ. ರಂಗರಾಯರಿಗೆ ಅವನ ಮುಖಭಾವ ಅನಿರೀಕ್ಷಿತವಾಗಿ ಕಂಡಿತು. ಆದರೆ ಅವನ ಹೃದಯದಲ್ಲಿ ಉಂಟಾದ ಜ್ವಾಲಾಮುಖಿಯನ್ನು ಅವರು ತಿಳಿಯಲಾಗಲಿಲ್ಲ. ಆನಂದ ಆ ಸ್ಥಳವನ್ನು ಬಿಟ್ಟು ಎದ್ದು ಹೋದ. ಸಂಜೆಯಾಗಿದ್ದುದರಿಂದ ತಿರುಗಾಡಿ ಬರಲು ಹೊರಟಿರಬಹುದೆಂದು ಅವರು ಭಾವಿಸಿದರು.

ಒಪ್ಪಿಗೆಯಂತೆ ಸುಂದರರಾಯರು ಹಣವನ್ನು ಪಾವತಿಮಾಡಿದ್ದರು. ಅವರು ತಮ್ಮ ಸೂಚನೆಗಿಂತ ಎಲ್ಲ ವಿಷಯಗಳಲ್ಲಿಯೂ ಹೆಚ್ಚು ಔದಾರ್ಯದಿಂದ ವರ್ತಿಸಿದ್ದರು. ರಂಗರಾಯರು ಸಾಲಗಳನ್ನೆಲ್ಲ ತೀರಿಸಿಬಿಟ್ಟಿದ್ದರು. ಪದ್ಮಳ ಮದುವೆಯ ಸಿದ್ಧತೆ ಸಂಭ್ರಮದಿಂದ ನಡೆಯುತ್ತಿತ್ತು. ಮದುವೆಯ ಬಟ್ಟೆ, ಚಿನ್ನ ಬೆಳ್ಳಿ ಮನೆಗೆ ಬಂದಿತ್ತು.

## ೧೩

ತನ್ನ ಕನಸಿನ ನೌಕೆ ಅಷ್ಟು ಬೇಗ ಪುಡಿ ಪುಡಿಯಾಗುವುದೆಂದು ಆನಂದ ಭಾವಿಸಿರಲಿಲ್ಲ. ಅವನ ಊಹೆಯ ಗೋಪುರ ಸಿಡಿದು ಅದರ ಭಗ್ನಾವಶೇಷಗಳೂ ಕಾಣದಂತೆ ಮಣ್ಣುಗೂಡಿತು. ತನ್ನ ಮುಂದೆ ನಿಂತಿದ್ದ ಆದರ್ಶ ಹಿಂದೆ ಸರಿದು ಎಂದಿಗೂ ತನ್ನದಾಗದಂತೆ ಮಾಯವಾಯಿತು. ಭವಿಷ್ಯದ ಹೊಂಬೆಳಕೆಲ್ಲ ಶೂನ್ಯವಾಗಿ ಅವನಿಗೆ ಕಂಡಿತು. ತನ್ನ ಹಂಬಲದ ಭವಿಷ್ಯ ಎಂದಿಗೂ ತನ್ನ ಜೀವನದ ವರ್ತಮಾನಕಾಲವಾಗದೆಂದು ಸ್ಪಷ್ಟವಾಯಿತು. ಆಶಾದೀಪ ಒಂದೇ ಕ್ಷಣದಲ್ಲಿ ಆರಿ, ಹೊಗೆ ಮಾತ್ರ ಕಾಣಿಸಿತು.

ಆ ದಿವಸ ಹೇಗೆ ಕಳೆದುಹೋಯಿತೋ ಆನಂದನಿಗೆ ಅರಿವಾಗಲಿಲ್ಲ. ಊಟ ಅವನ ನಾಲಗೆಗೆ ಬೇವಿನ ಕಾಯಾಗಿತ್ತು. ಹಾಸಿಗೆಯ ಮೇಲೆ ನಿಶ್ಚೇಷ್ಟಿತನಾಗಿ ಬಿದ್ದುಕೊಂಡ. ಆವೇಗದಿಂದ ಮೆದುಳು ಸಿಡಿದುಹೋಗುತ್ತಿತ್ತು. ಜೀವ ತಳ

ಮಳಿಸಿತು. ಸ್ವಲ್ಪ ಹೊತ್ತಿನಲ್ಲಿಯೇ ದಿಂಬು ಕಣ್ಣೀರಿನಿಂದ ತೊಯ್ದು ಹೋಯಿತು.

ಆನಂದನ ಹೃದಯದಲ್ಲಿ ಒಂದು ಮೂರ್ತಿ ನೆಟ್ಟುಹೋಗಿತ್ತು. ಈಗ ಆ ಮೂರ್ತಿಗೆ ಜೀವ ಬಂದಂತೆ ಅವನಿಗೆ ಭ್ರಾಂತಿಯಾಯಿತು. ಅದು ಗಟ್ಟಿಯಾಗಿ ರೋದಿಸಿತು. ಕೆಂಪೇರಿದ ಕಣ್ಣು ಆನಂದನನ್ನು ದೃಷ್ಟಿಸಿತು. ತುಟಿ ಅಲುಗಿತು. ಕೆದರಿದ ಕೂದಲು ಆನಂದನ ಶರೀರವನ್ನು ನಡುಗಿಸಿತು. ಒಂದೇ ಕ್ಷಣದಲ್ಲಿ ಆ ಮೂರ್ತಿಯಲ್ಲಿ ರೌದ್ರ ಕಾಣದಾಗಿ ದೈನ್ಯ ಆವರಿಸಿತು. ಅದರ ನೋಟದಲ್ಲಿ ಅಸಹಾಯತೆ, ಮುಗ್ಧತೆಯಿತ್ತು, ಅಸಹನೀಯವಾದ ನೋವಿತ್ತು.

'ಎಂತಹ ಸುಂದರವಾದ ಹೂವಿಗೆ ಅಗ್ನಿಸ್ಪರ್ಶವಾಯಿತು!' ಆನಂದ ನಿಟ್ಟುಸಿರನ್ನು ಬಿಟ್ಟ.

'ಬಾಳ ಕೊನೆಯ ಗಳಿಗೆಯ ವರೆಗೂ ನಿನ್ನ ಹೃದಯದಲ್ಲಿ ನನಗೆ ಸ್ಥಳ ವಿರುತ್ತದೆ ಎಂದು ನಂಬಿದ್ದೆ, ಆನಂದ. ಇಷ್ಟು ಬೇಗ ನನ್ನನ್ನು ಅಲ್ಲಿಂದ ಕಿತ್ತೆಸೆಯ ಬಹುದೆಂದು ನಾನು ಊಹಿಸಿರಲಿಲ್ಲ' ಎಂದಿತು ಆ ಮೂರ್ತಿ.

'ನನ್ನ ಹೃದಯವನ್ನಾದರೂ ಕಿತ್ತೆಸೆಯಬಲ್ಲೆ. ನಿನ್ನ ಮೂರ್ತಿಯನ್ನು ಅಲ್ಲಿಂದ ಅಲುಗಿಸಲಾರೆ' ಎಂದಿತು ಆನಂದನ ಭಾವನೆ.

ರಾತ್ರಿ ಹೇಗೋ ಕಳೆದುಹೋಯಿತು. ಆನಂದ ಬಹಳ ಹೊತ್ತಾದರೂ ಹಾಸಿಗೆ ಬಿಟ್ಟು ಏಳಲಿಲ್ಲ.

"ಪಾಪ, ಮಲಗಲಿ ಮಗು. ಇಷ್ಟು ದಿನವೂ ನಿದ್ದೆಯಿಲ್ಲದ ವ್ಯಾಸಂಗ—" ನಾಗಮ್ಮನವರ ಮಾತೃವಾತ್ಸಲ್ಯದ ಮಾತು ಆನಂದನ ಕಿವಿಯ ಮೇಲೆ ಬಿದ್ದು ಅವನ ಮನ ಮುಟ್ಟಿತು.

'ಅಮ್ಮನಿಗೆ ನಾನು ಇನ್ನೂ ಮಗು' ಎಂದುಕೊಂಡ ಆನಂದ. ಕ್ಷಣ ದಲ್ಲಿಯೇ ಆ ಭಾವ ದುಃಖದ ಪ್ರವಾಹದಲ್ಲಿ ಎಲ್ಲಿಯೋ ಕೊಚ್ಚಿಕೊಂಡು ಹೋಯಿತು.

ತನ್ನೆದೆಯಲ್ಲಿಯ ನೋವನ್ನೆಲ್ಲ ಆನಂದ ಅಲ್ಲಿಯೆ ಒತ್ತಿಟ್ಟುಕೊಂಡ. ಯಾರಿಗೂ ಅದನ್ನು ತೋಡಿಕೊಳ್ಳಲಿಲ್ಲ. ಮುಖದಲ್ಲಿ ನಿರುತ್ಸಾಹ ತಲೆಹಾಕಿತು. ವ್ಯಾಸಂಗದಿಂದ ಆಲಸ್ಯವಾಗಿರಬಹುದೆಂದು ಎಲ್ಲರೂ ಭಾವಿಸಿದರು. ಯಾರೂ ಅದನ್ನು ಮನಸ್ಸಿಗೆ ಹೆಚ್ಚಾಗಿ ಹಚ್ಚಿಕೊಳ್ಳಲಿಲ್ಲ.

“ ಏಕೆ, ಮೈಯಲ್ಲಿ ಸ್ವಸ್ಥ ಇಲ್ಲವೇ ? ಸ್ವಲ್ಪ ಮದ್ದನ್ನಾದರೂ ತೆಗೆದುಕೊ ” ಎಂದು ರಂಗರಾಯರು ಸೂಚಿಸಿದರು.

“ ಏನಿಲ್ಲ ” ಎಂದು ಆನಂದ ಮಾತನ್ನು ಮರೆಸಿದ.

ಮನೆಯಲ್ಲಿ ಸಡಗರ ಸಂಭ್ರಮಗಳು. ಹೆಚ್ಚು ಜನಸಂದಣಿ. ಆ ಗಲಿಬಿಲಿ ಆನಂದನಿಗೆ ಸುಖವನ್ನುಂಟುಮಾಡಲಿಲ್ಲ. ನಂಟರು ಬಂದಿದ್ದಾರೆ. ಅವರಲ್ಲಿ ಶಾಮರಾಯರೂ ಹಾಜರು. ಹಿಂದೆ ರಂಗರಾಯರಿಗೂ ಅವರಿಗೂ ಕುಟುಂಬದ ವಿಚಾರಗಳಲ್ಲಿ ಮನಸ್ತಾಪ ಬಂದಿತ್ತು. ಪುನಃ ಹೊಸಿಲನ್ನು ತುಳಿಯುವುದಿಲ್ಲ ವೆಂದು ಆಗ ಶಾಮರಾಯರು ಪ್ರತಿಜ್ಞೆಮಾಡಿದ್ದರು. ಆದರೆ ಈಗ ತಾವಾಗಿ ಆಹ್ವಾನವನ್ನು ಮನ್ನಿಸಿ ಬಂದಿದ್ದಾರೆ.

“ ಏನೋ ನಂಟರಿಷ್ಟರಲ್ಲಿ ಮಾತು ಬರುತ್ತೆ. ಅದನ್ನು ದೊಡ್ಡದನ್ನೇಕೆ ಮಾಡಬೇಕು ? ಅದನ್ನೆಲ್ಲ ನಾನು ಮನಸ್ಸಿಗೆ ಹಚ್ಚಿಕೊಳ್ಳುವುದೇ ಇಲ್ಲ ” ಎಂದು ಕಡಿದಿದ್ದ ಬಾಂಧವ್ಯವನ್ನು ಎರಡೇ ಮಾತಿನಲ್ಲಿ ಅಂಟಿಸಿದರು. ಮಂಗಳಕಾರ್ಯದ ಸಮಯದಲ್ಲಿ ಅವರ ಸದ್ಭಾವನೆಯ ಮಾತು ರಂಗರಾಯರಿಗೆ ಹಿತವಾಗಿತ್ತು.

ಶಾಮರಾಯರು ಆನಂದನ ಹಿಂದುಮುಂದು ಓಡಾಡಿದರು.

“ ನಿನ್ನ ಜಾತಕದಲ್ಲಿ ವಿಶೇಷವಿದೆ, ಆನಂದ. ನೀನು ವೈಭವದಲ್ಲಿ ಮೆರೆಯ ಬೇಕು. ಈಗ ನಿನಗೆ ಶುಕ್ರಮಹರ್ದೆಶೆ.” ಅಂತಹ ಮಾತುಗಳು ಆನಂದ ನನ್ನು ಮೆಚ್ಚಿಸುವುದೆಂದು ಅವರು ತಿಳಿದಿದ್ದರು. ಆದರೆ ಆ ಮಾತುಗಳು ಅವನ ಗಾಯಕ್ಕೆ ಉಪ್ಪನ್ನೆರಚಿದವು.

ಲಗ್ನಪತ್ರಿಕೆಯ ಗಳಿಗೆ ಬಂತು. ಒದ್ದೆಯಾದ ಕಣ್ಣನ್ನು ಯಾರೂ ಕಾಣ ದಂತೆ ಆನಂದ ಕರವಸ್ತ್ರದಿಂದ ಒರಸಿಕೊಂಡ. ಲಗ್ನಪತ್ರಿಕೆ ಬರೆದದ್ದೂ ಆಯಿತು. ಎರಡು ವರ್ಷಗಳ ಹಿಂದೆ ಅಂಕುರಿಸಿದ ಆನಂದನ ಪ್ರೇಮದ ಬಳ್ಳಿ ಪುನಃ ಚಿಗುರದಂತೆ ಮುದುಡಿತು.

## ೧೪

ಇಂದಿರೆಯ ಅಂತರಂಗದಲ್ಲಿ ಆನಂದನ ಮಾತುಗಳು ಊರಿ ಅವಳ ಆಸೆ ಗಳನ್ನು ಪದೇ ಪದೇ ಕೆದರುತ್ತಿದ್ದವು.

‘ ದೂರ ಹೋದ ಮಾತ್ರಕ್ಕೆ ಮನಸ್ಸು ಹೃದಯಗಳ ಸಂಗ ಹೇಗೆ ಬಿಟ್ಟು

ಹೋದೀತು ? ’ ಅವನಾಡಿದ ಮಾತು ಅವಳ ಹೃದಯದಲ್ಲಿ ಪ್ರತಿಧ್ವನಿಯನ್ನು ಮೊಳಗಿಸುತ್ತಿತ್ತು.

ಆನಂದನಂತಹ ಪ್ರೇಮಿಯನ್ನು ತನಗೆ ಒಲಿಸಿಕೊಟ್ಟದ್ದಕ್ಕಾಗಿ ತನ್ನ ಅದೃಷ್ಟವನ್ನು ಅವಳು ಅನೇಕ ಬಾರಿ ವಂದಿಸಿದಳು. ಅವನೊಡನೆ ತನ್ನ ಪ್ರೇಮ ಹೇಗೆ ಮೊಳೆತು, ಬೆಳೆದು, ಬಲಿಯಿತೆಂಬುದನ್ನು ಮನಸ್ಸಿನಲ್ಲಿ ಮೆಲುಕುಹಾಕು ತ್ತಿದ್ದಳು. ಆಗ ತನ್ನ ಬಾಳು ಆನಂದನ ಬಾಳಿನೊಡನೆ ಹೆಣೆದುಕೊಂಡಿದ್ದುದನ್ನು ಚಿತ್ರಿಸಿಕೊಳ್ಳುತ್ತಿದ್ದಳು.

ಇಂದಿರೆಗೆ ಈಗ ಕಾದಂಬರಿಗಳಲ್ಲಿ ಅಷ್ಟೊಂದು ಮನಸ್ಸು ಹರಿಯುತ್ತಿಲ್ಲ. ಹಿಂದಿನ ಬೇಸಿಗೆಯಲ್ಲಿ ಅವುಗಳಲ್ಲಿ ತನ್ನ ಕನಸಿನ ಪ್ರಪಂಚವನ್ನು ಕಾಣುತ್ತಿ ದ್ದಳು. ಈಗ ಕನಸಿನ ಬದುಕು ಒಂದೊಂದು ವೇಳೆ ಬೇಸರವಾಗುತ್ತಿದೆ. ಭಾವನೆ ಗಳು ಬಲಿತು ಆ ಕನಸಿನ ಬದುಕು ತಿರುಳಿಲ್ಲದ್ದೆನಿಸಿದೆ. ತನ್ನ ಪ್ರಣಯದ ಮೊಗ್ಗು ಬೇಗ ಅರಳಿ ಫಲಿಸಲೆಂದು ಆಸೆಪಡುತ್ತಿದ್ದಾಳೆ.

ಗೋಪಾಲರಾಯರು ಇಂದಿರೆಗೆ ವಯಸ್ಸು ಬಂದಿತೆಂದು ತಿಳಿದರು. ಆ ವಿಷಯ ಅವರ ಮನಸ್ಸಿಗೆ ಹತ್ತಿತು. ಮುಂದೆ ಕಾದಿದ್ದ ಮಗಳ ಅಗಲಿಕೆಯಿಂದ ಲಕ್ಷ್ಮಮ್ಮನವರು ಕಣ್ಣೀರಿಡುತ್ತಿದ್ದರು. ಮುಂದೆ ಅವಳಿಲ್ಲದೆ ಬರಿದಾಗುವ ಮನೆ ಯಲ್ಲಿ ಬದುಕನ್ನು ಹೇಗೆ ನಡೆಸಬೇಕೆಂದು ಬಗೆಗಾಣದವರಾಗಿದ್ದರು. ಆದರೆ ಮಗಳ ಮದುವೆಯನ್ನು ನೋಡಬೇಕೆಂಬ ಆಸೆ ಆ ಎಲ್ಲ ಯೋಚನೆಗಳನ್ನೂ ಒತ್ತಟ್ಟಿಗಿಟ್ಟಿತ್ತು. ಗೋಪಾಲರಾಯರನ್ನು ಅದೇ ವಿಚಾರವಾಗಿ ಅವರು ನಿತ್ಯವೂ ಕಾಡುತ್ತಿದ್ದರು. ಗೋಪಾಲರಾಯರು ಸ್ವಲ್ಪ ನಿಧಾನಪ್ರವೃತ್ತಿಯುಳ್ಳವರು. ಆ ವಿಚಾರವಾಗಿಯೂ ಅವರು ನಿಧಾನಮನಸ್ಕರಾಗಿಯೇ ಇದ್ದರು.

ಗೋಪಾಲರಾಯರು ಇಂದಿರೆಯ ಮದುವೆಯ ವಿಷಯವಾಗಿ ವಿಚಾರಿಸಿ ದ್ದರು. ಅವರ ದೃಷ್ಟಿಪಥದಲ್ಲಿ ಹಲವು ವ್ಯಕ್ತಿಗಳಿದ್ದರೂ ಅವರ ಮನ ಮೆಚ್ಚಿದ್ದುದು ಆನಂದನೊಬ್ಬನನ್ನೇ. ಅವನೇ ಇಂದಿರೆಗೆ ಅನುರೂಪನಾದ ಬಾಳಜೋಡಿ ಎಂದು ಅವರು ಆಸೆಯಿಂದ ನಂಬಿದ್ದರು. ಲಕ್ಷ್ಮಮ್ಮನವರು ವರ್ಷದ ಹಿಂದೆಯೇ ಆ ಆಸೆಯನ್ನು ಸೂಚಿಸಿದ್ದರು. ಇಬ್ಬರೂ ಅದು ಫಲಿಸುವ ಕಾಲ ಬರುವುದೆಂದು ತುಂಬುಹೃದಯದಿಂದ ಹಂಬಲಿಸಿದ್ದರು. ಆನಂದ ಇಂದಿರೆಯರ ಜೋಡಿ ಬದುಕಿನ ಸವಿಗನಸನ್ನು ಕಂಡು ಹರ್ಷದ ಉಯ್ಯಾಲೆಯಲ್ಲಿ ತೂಗಾಡುತ್ತಿದ್ದರು.

ಗೋಪಾಲರಾಯರು ಊಟ ಮಾಡುತ್ತಿದ್ದರು. ಲಕ್ಷ್ಮಮ್ಮನವರು,

“ ಆಲೋಚನೆಯಲ್ಲೇ ನಮ್ಮ ಆಸೆ ಉಳಿದಿದೆ. ಆನಂದನ ಪರೀಕ್ಷೆ ಮುಗಿಯಿತು. ಮದುವೆ ವಿಚಾರವನ್ನು ಇನ್ನು ಪ್ರಸ್ತಾಪಿಸುವುದು ತಾನೆ ? ” ಎಂದರು.

“ ಪ್ರಸ್ತಾಪಿಸುವುದೇನು ? ನಿಶ್ಚಯಮಾಡಿಕೊಂಡು ಬರಬೇಕು, ಅಷ್ಟೆ ” ಎಂದು ಗೋಪಾಲರಾಯರು ಉತ್ತರಿಸಿದರು.

“ ಮನೆಯ ಮಂದಿ ಒಪ್ಪಿಗೆಯಾಗಬೇಡವೆ ? ”

“ ಆನಂದ ಒಪ್ಪಿದಮೇಲೆ ಅವರು ಒಪ್ಪಿಯೇ ಒಪ್ಪುತ್ತಾರೆ.”

“ ವಿಚಾರವನ್ನು ಅಷ್ಟು ನಿರ್ಲಕ್ಷ್ಯ ಮಾಡಬೇಡಿ. ಸಂಪಿಗೆಗೆ ಹೋಗಿ ನಿಶ್ಚಯ ಮಾಡಿಕೊಂಡು ಬನ್ನಿ.”

“ ಎಲ್ಲ ನಿಶ್ಚಯವಾಗಿಯೇ ಇದೆ. ಆನಂದನ ಒಪ್ಪಿಗೆ ತಾನೆ ಮುಖ್ಯ ? ತಂದೆತಾಯಿಗಳು ಎಂದಿಗೂ ಅದನ್ನು ತಿರಸ್ಕರಿಸುವುದಿಲ್ಲ.”

“ ಹಿರಿಯರ ಮನಸ್ಸು ಹೇಗೋ. ಈ ಮಾತೇ ಅವರ ಮುಂದೆ ಬಂದಿರಲಾರದು. ಇಲ್ಲೇ ಕುಳಿತು ನಾವು ಎಲ್ಲ ಮಾತನ್ನೂ ಆಡಿದರೆ ಕೆಲಸವಾಗುತ್ತದೆಯೆ ? ”

ಗೋಪಾಲರಾಯರು ಆ ಜಾಡಿನಲ್ಲಿ ಯೋಚನೆಯನ್ನು ಹರಿಸಿರಲಿಲ್ಲ.

“ ನಿನ್ನ ಮಾತು ನಿಜ. ನಾಡಿದ್ದು ಸಂಪಿಗೆಗೆ ಹೋಗಿ ಎಲ್ಲ ನಿಶ್ಚಯ ಮಾಡಿಕೊಂಡು ಬರುತ್ತೇನೆ ” ಎಂದು ಗೋಪಾಲರಾಯರು ನಿಶ್ಚಯಿಸಿದರು.

## ೧೫

ಆನಂದ ಸಂಜೆ ತೋಟಗಳಾಚೆ ಸಂಚರಿಸುತ್ತಿದ್ದ. ಅವನ ಮನಸ್ಸು ಆಲೋಚನೆಗಳ ಕುಲುಮೆಯಾಗಿತ್ತು. ಅಲ್ಲಿ ವಸ್ತು ತನ್ನ ರೂಪವನ್ನು ಕಳೆದುಕೊಂಡು ರಸಗತಿಯಲ್ಲಿರುವಂತೆ ಆನಂದನ ಬಯಕೆಗಳೆಲ್ಲ ನಿರಾಕಾರವಾಗಿದ್ದವು.

ಪಕ್ಕದ ಮರದಡಿಯಲ್ಲಿ ಒಬ್ಬ ಭಿಕಾರಿ ಹಿಟ್ಟನ್ನು ಬೇಯಿಸುತ್ತಿದ್ದ. ಹಸಿ ಸೌದೆ ಉರಿಯಲಾರದೆ ಹೊಗೆಯನ್ನು ಹರಡುತ್ತಿತ್ತು. ಆ ಹೊಗೆ ಸುಳಿಸುಳಿಯಾಗಿ ಸುತ್ತಿ ನಿರಾಕಾರವಾಗಿ ವಿಶಾಲವಾದ ವಾಯುಮಂಡಲದಲ್ಲಿ ಸೇರುತ್ತಿತ್ತು. ಆ ದೃಶ್ಯ ಆನಂದನ ಮನಸ್ಸಿನಲ್ಲಿ ಕಲಕಿಹೋಗಿದ್ದ ಯೋಚನೆಗಳನ್ನು

ಮತ್ತೂ ಕದಡಿಸಿತು. ಅವನು ಭಿಕ್ಷುಕನ ಮುಖವನ್ನು ನೋಡಿದ. ಭಿಕ್ಷುಕನ ಮುಖದಲ್ಲಿ ಶಾಂತಿಯಿತ್ತು. ಚಿಂತೆಯ ನೇದನೆ ಇರಲಿಲ್ಲ. ಅವನು ಪ್ರಕೃತಿ ಮಾತೆಯ ಮಡಿಲಲ್ಲಿ ಬದುಕನ್ನು ಸಾಗಿಸುತ್ತಿದ್ದ. ಅವನ ಬದುಕಿನಲ್ಲಿ ಸಿರಿತನದ ಏರಿಳಿತಗಳ ಲೀಲೆಯಿರಲಿಲ್ಲ. ಆದರ್ಶಗಳ ಘರ್ಷಣೆಯಿರಲಿಲ್ಲ. ಪ್ರಣಯದ ಆಸೆ–ನಿರಾಶೆಗಳಿರಲಿಲ್ಲ.

'ನಿನಗಿಂತ ಅವನು ಪುಣ್ಯವಂತ' ಎಂದಿತು ಆನಂದನ ಮನಸ್ಸು. ಕಣ್ಣಿನಲ್ಲಿ ನೀರೂರಿ ಅವನ ಮುಂದಿನ ಹಾದಿ ಮಸಕುಮಸಕಾಯಿತು.

ಆನಂದ ಕೆಲವು ಹೆಜ್ಜೆಗಳನ್ನು ಹಾಕಿದ. ಗೋವಿಂದಯ್ಯನ ಕೈತಪ್ಪಿ ಈಗ ಪುನಃ ತಮ್ಮದಾಗಿರುವ ಗದ್ದೆ ಕಾಣಿಸಿತು. ಬೀಸುತ್ತಿದ್ದ ಗಾಳಿಯಲ್ಲಿ ಪೈರು ಕೆದರಿದಂತಿತ್ತು.

'ನಿನ್ನ ದುಡಿಮೆಯಿಂದ ನಮ್ಮನ್ನು ಸೆರೆಬಿಡಿಸಿಕೊಳ್ಳುವಿಯೆಂದು ಭಾವಿಸಿದ್ದೆವು. ಆ ಸಾಮರ್ಥ್ಯ ನಿನಗಿಲ್ಲದೆ ಹೋಯಿತು' ಎನ್ನುವಂತಿತ್ತು, ಆ ಅಲುಗಾಡುತ್ತಿದ್ದ ಸಸಿಗಳ ಭಾವ.

ಆನಂದನ ಭಾವನೆ ಬೃಹದಾಕಾರವನ್ನು ತಾಳಿತು. ತನ್ನ ಬದುಕನ್ನು ಕಾಣದ ದಾರಿಗಳಿಗೆಳೆದ ಪ್ರಸಂಗಗಳನ್ನೆಲ್ಲ ನಿರುಪಾಯನಾಗಿ ಚಿಂತಿಸಿದ. ಮನೆಯ ಆರ್ಥಿಕ ದುಃಸ್ಥಿತಿಯನ್ನು ಇದಿರಿಸಲು ತಾನು ಸಿದ್ಧನಿದ್ದ. ಕಷ್ಟಪಟ್ಟು ದುಡಿದು ಅದನ್ನು ಬಗೆಹರಿಸುವುದರಲ್ಲಿ ಅವನಿಗೆ ದೃಢತೆಯಿತ್ತು. ಅದರಲ್ಲೂ ಅವನು ಸ್ವಾಭಿಮಾನವನ್ನು ಕಂಡುಕೊಂಡಿದ್ದ. ಸ್ವಾಭಾವಿಕವಾಗಿಯೇ ಅವನಲ್ಲಿದ್ದ ಕರ್ತವ್ಯಮನೋಭಾವ ಅವನ ಮನಸ್ಸಿಗೆ ಸಾಕಷ್ಟು ಶಕ್ತಿ ಕೊಟ್ಟಿತ್ತು. ಅದೊಂದೇ ಚಿಂತೆ ತನ್ನ ಜೀವನದ ಗಾಲಿಯನ್ನು ಅನಿಷ್ಟವಾದ ಹಾದಿಗೆ ತಿರುಗಿಸಿದ್ದರೆ ರಂಗರಾಯರ ತೀರ್ಮಾನವನ್ನು ತಿದ್ದಲು ಅವನು ಸಿದ್ಧನಿದ್ದ. ಅವರನ್ನು ತನ್ನ ವಿಚಾರಮಾರ್ಗಕ್ಕೆ ಒಪ್ಪಿಸಿಕೊಳ್ಳುತ್ತಿದ್ದ. ಮನೆಯ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಸಾಮರ್ಥ್ಯ ಅವನಲ್ಲಿತ್ತು.

ಆನಂದನ ಯೋಚನೆಗಳಿಗೆ ಪ್ರಧಾನವಾಗಿ ಕಂಡ ಸಮಸ್ಯೆ ಪದ್ಮಳ ಮದುವೆ. ರಂಗರಾಯರು ಆ ಚಿಂತೆಯನ್ನು ಆಳವಾಗಿ ಹಚ್ಚಿಕೊಂಡು ದಾರಿ ಕಾಣದವರಾಗಿದ್ದರು.

ನಾಗಮ್ಮನವರ ಆರೋಗ್ಯ ಮತ್ತೂ ಕೆಟ್ಟಿತ್ತು. ಪ್ರಬಲವಾದ ಚಿಂತೆಯಿಂದ

ಅವರ ಹೃದಯ ಕುಗ್ಗುತ್ತಿದೆಯೆಂದು ವೈದ್ಯರು ಸೂಚಿಸಿದರು ದಿನೇ ದಿನೇ ಕ್ಷೀಣಿಸುತ್ತಿದ್ದ ಅವರ ಆರೋಗ್ಯ ಚಿಂತಾಜನಕವಾಗಿತ್ತು. ಮಕ್ಕಳ ಮದುವೆಯನ್ನು ನೋಡಿಬಿಟ್ಟರೆ ತಮಗೆ ಇನ್ನು ಯಾವ ಆಸೆಯೂ ಉಳಿದಿರುವುದಿಲ್ಲವೆಂದು ದಿನಕ್ಕೊಮ್ಮೆಯಾದರೂ ಅವರು ತಪಿಸುತ್ತಿದ್ದರು. ಆ ಸಮಸ್ಯೆಯನ್ನು ಆನಂದ ಬಿಡಿಸಲಾರದೆ ಹೋಗಿದ್ದ.

ಪದ್ಮಳ ವಯಸ್ಸು ಮೀರುತ್ತ ಬಂದಿತ್ತು. ಅವಳ ಮದುವೆಗಾಗಿ ರಂಗರಾಯರು ಮಾಡಿದ ಪ್ರಯತ್ನಗಳೆಲ್ಲ ನಿಷ್ಪ್ರಯೋಜಕವಾಗಿದ್ದವು. ಅವರ ಆರ್ಥಿಕ ಮತ್ತು ಗೃಹಪರಿಸ್ಥಿತಿಗಳಲ್ಲಿ ತಂಗಿಯ ಮದುವೆ ನಡೆಯುವುದು ಎಷ್ಟು ಕಠಿಣವೆಂಬುದು ಸಮಾಜದ ನಾಡಿಯನ್ನು ತಿಳಿದಿದ್ದ ಆನಂದನ ಮನಸ್ಸಿಗೆ ತಿಳಿದಿತ್ತು. ಅದು ನಡೆದುಹೋಗುವ ಅವಕಾಶ ಈಗ ತಾನಾಗಿ ಮುಂದೆ ನಿಂತಿತ್ತು. ಅದನ್ನು ಈಗ ತಾನು ತಳ್ಳಿಹಾಕಿದರೆ ತಮ್ಮ ಮನೆ ಮತ್ತೆ ಗೋಳಿನಲ್ಲಿ ತೇಲುವುದೆಂದು ಆಲೋಚಿಸಿದ.

ಆ ಭಾವನೆಗೆ ಮಧ್ಯೆ ಮತ್ತೊಂದು ಭಾವನೆ ತಲೆಹಾಕಿತು. ಅದು ನೀತಿಯ ಹಿನ್ನೆಲೆಯಲ್ಲಿ ಬೇರನ್ನು ಬಿಟ್ಟಿತ್ತು. ಪದ್ಮ ತನ್ನ ತಂಗಿ. ಅವಳಿಗಾಗಿ ತನ್ನದೊಂದು ಕರ್ತವ್ಯವಿದೆ. ಅದು ಇಡೀ ಕುಟುಂಬದ ಕರ್ತವ್ಯ. ತಾನೇ ಕುಟುಂಬದ ಆಧಾರಸ್ತಂಭ. ತಾನು ತನ್ನ ಕರ್ತವ್ಯವನ್ನು ಪಾಲಿಸಬೇಕು. ಅಗತ್ಯವಾದರೆ ತ್ಯಾಗಕ್ಕೂ ಸಿದ್ಧನಿರಬೇಕು. ಅವಳನ್ನು ಸಮಾಜಭ್ರಷ್ಟೆಯೆಂದರೆ ಅದು ತನ್ನ ಮನೆತನಕ್ಕೇ ಪೆಟ್ಟು. ಹಾಗಾದರೆ ತಾನೂ ತನ್ನ ಮಟ್ಟಿಗೆ ನೀತಿಭ್ರಷ್ಟನೇ.

ಅಲ್ಲದೆ ತನ್ನ ತಿಳಿವಳಿಕೆಯೇ ಇಲ್ಲದೆ ರಂಗರಾಯರು ಮದುವೆಯ ವಿಷಯದಲ್ಲಿ ಬಹಳ ಮುಂದೆ ಹೋಗಿದ್ದರು. ಅದು ಇಡೀ ಕುಟುಂಬದ ಮಂಗಳವೆಂದು ಅವರು ಭಾವಿಸಿದ್ದರು. ವ್ಯವಸ್ಥೆಗಳೆಲ್ಲ ನಡೆದುಹೋಗಿದ್ದವು. ಆ ಹೆಜ್ಜೆಯನ್ನು ಹಿಂದಕ್ಕೆ ಹಾಕುವಂತಿರಲಿಲ್ಲ. ಈ ಎಲ್ಲ ಆಲೋಚನೆಗಳಲ್ಲಿ ಆನಂದ ಅಸಹಾಯನಾಗಿದ್ದ.

ಇಂದಿರೆಯ ಗತಿ ನೆನಪಾಗಿ ಆನಂದನ ಮನಸ್ಸು ಬೇರೆ ದಾರಿಯಲ್ಲಿ ಓಡಿತು. ತಾನೇ ಇಂದಿರೆಯಲ್ಲಿ ಅನುರಾಗವನ್ನು ಹುಟ್ಟಿಸಿದ್ದ. ಆ ಅನುರಾಗದ ಬಳ್ಳಿಗೆ ತನ್ನ ಪ್ರೀತಿಯ ನೀರೆರೆದು ಅದನ್ನು ಒಲಿಸಿದ್ದ. ಅವಳ ಹೃದಯದಲ್ಲಿ ವ್ಯರ್ಥವಾದ ಆಸೆಯನ್ನು ನೆಟ್ಟ. ಆ ಮುಗ್ಧೆಯ ಪ್ರೇಮದ ಬಳ್ಳಿಯನ್ನು

ಈಗ ಸ್ವಹಸ್ತದಿಂದ ಕತ್ತರಿಸಿಹಾಕಬೇಕು. ಅವನ ಎದೆ ನಡುಗಿತು.

ಈ ಎಲ್ಲ ಆಲೋಚನೆಗಳೂ ಆನಂದನೆದುರು ಎರಡು ದಾರಿಗಳನ್ನು ತೆರೆದವು. ಪ್ರೇಮ ಒಂದು ದಾರಿಗೆಳೆದರೆ ನೀತಿ ಮತ್ತೊಂದು ದಾರಿಗೆಳೆಯಿತು. ಯಾವ ದಾರಿಯನ್ನೂ ಮೆಟ್ಟಲಾರದೆ ಅವನ ಮನಸ್ಸು ತೂಗಾಡಿತು. ಪ್ರೇಮ ನೀತಿಗಳೆರಡನ್ನೂ ಮೀರಿದ ಯಾವುದೋ ಶಕ್ತಿ ಅವನ ಕಾಲನ್ನು ಎಳೆದು ಕೊಂಡುಹೋಯಿತು.

೧೬

ಸಂಜೆಯ ಯೋಚನೆಗಳು ಆನಂದನ ಮನಸ್ಸಿನಿಂದ ಹೋಗಿರಲಿಲ್ಲ. ರಾತ್ರಿ ಅವನಿಗೆ ನಿದ್ದೆ ಹತ್ತಲಿಲ್ಲ. ಅರೆ ಎಚ್ಚರದಲ್ಲಿ ಮನಸ್ಸು ತೊಳಲಾಡಿತು.

'ಇಂದಿರೆ ಎಂತಹ ಸೌಂದರ್ಯದ ಕನಿ.'

'ಅವಳೊಬ್ಬ ಮೋಹಿನಿ.'

'ಆ ಮೋಹಿನಿ ನನ್ನ ಹೃದಯವನ್ನು ಸೆರೆಹಿಡಿದಿದ್ದಾಳೆ.'

'ಅವಳ ಹೃದಯವನ್ನರ್ಪಿಸಿ ನಿನ್ನ ಹೃದಯವನ್ನು ವಶಪಡಿಸಿಕೊಂಡಿದ್ದಾಳೆ.'

'ಇಬ್ಬರ ಹೃದಯಗಳನ್ನೂ ನೀನು ತಿಳಿದಿದ್ದೀ.'

'ನಿಮ್ಮ ಪ್ರೇಮ ನಿರಾಶೆಯಲ್ಲಿ ಕೊನೆಗಾಣಬಾರದು.'

'ನಿರಾಶೆಯ ಮಾತೇಕೆ ಇಲ್ಲಿ?'

'ನೀನು ಈಗ ಬಹಳ ನೊಂದಿದ್ದೀ. ನಾನು ಏನೂ ಹೇಳುವುದಿಲ್ಲ.'

'ನೀನು ಹೇಳುವುದೇನು?'

'ಶುದ್ಧವಾದ ಪ್ರೇಮ ಯಾವಾಗಲೂ ಫಲಿಸುತ್ತದೆ ಎಂದು ನಾನು ಹೇಳಲಾರೆ.'

'ಇಂದಿರೆಯ–ನನ್ನ ವಿಷಯ ಹೇಳು.'

'ಆ ವಿಷಯವೂ ಅಷ್ಟೆ.'

'ಇಂದಿರೆಯ, ನನ್ನ ಪ್ರೇಮದ ವಿಷಯವಾಗಿ ಕೆಟ್ಟದ್ದನ್ನಾಡಿದರೆ ನಿನ್ನ ನಾಲಗೆಯನ್ನು ಸೀಳುತ್ತೇನೆ, ಜೋಕೆ.'

'ನಿಮ್ಮ ಪರಸ್ಪರ ಪ್ರೇಮ ಭದ್ರವಾದದ್ದು.'

‘ ಆ ಅರಿವಿಗಾಗಿ ನಿನ್ನನ್ನು ಅಭಿನಂದಿಸುತ್ತೇನೆ.’

‘ ಆದರೆ ಭದ್ರವಾದ ಪ್ರೇಮವನ್ನೂ ಬದುಕಿನ ಪ್ರಸಂಗಗಳು ಒಡೆಯಬಹುದು.’

‘ ಪ್ರಸಂಗಗಳಿಂದ ಒಡೆದುಹೋಗುವ ಪ್ರೇಮ ಭದ್ರವಾದದ್ದೇ ಅಲ್ಲ.’

‘ ಒಡೆದುಹೋಗದಿದ್ದರೂ ಅದು ಫಲಿಸದೇ ಹೋಗಬಹುದಲ್ಲ.’

‘ ಆದರ್ಶಪ್ರೇಮ ಫಲಿಸದಿರಬಹುವೆ ? ’

‘ ಆಳವಾಗಿ ಯೋಚಿಸು.’

‘ ಯೋಚಿಸಿದ್ದೇನೆ.’

‘ ಇಲ್ಲ.’

‘ ಏಕೆ ? ’

‘ ಇಬ್ಬರು ಆದರ್ಶಪ್ರೇಮಿಗಳು ಧರ್ಮದ ಸುಳಿಗೆ ಸಿಕ್ಕಿದರೆ ? ’

‘ ಧರ್ಮದ ಸುಳಿಯಲ್ಲಿ ಪ್ರೇಮಕ್ಕೇಕೆ ನಿರಾಶೆ ? ’

‘ ಧರ್ಮದ ಬಂಧನಕ್ಕೆ ಪ್ರೇಮ ಸಿಗುವುದಿಲ್ಲವೆ ? ’

‘ ಹೇಗೆ ? ’

‘ ಧರ್ಮ, ಪ್ರೇಮಗಳು ವ್ಯಕ್ತಿಯನ್ನು ವಿರೋಧವಾದ ದಾರಿಗಳಿಗೆ ಎಳೆಯಬಹುದು.’

‘ ಧರ್ಮ, ಪ್ರೇಮಗಳು ಪರಸ್ಪರ ವಿರೋಧವಲ್ಲ ’

‘ ಧರ್ಮ, ಪ್ರೇಮಗಳೆರಡನ್ನೂ ಮೀರಿದ ಬೇರೆಯೊಂದು ಶಕ್ತಿಯಿದೆ, ಅಲ್ಲವೆ ? ’

‘ ಯಾವುದದು ? ’

‘ ವಿಧಿ.’

‘ ವಿಧಿಯ ಮಾತೇಕೆ ಇಲ್ಲಿ ? ’

‘ ಧರ್ಮ, ಪ್ರೇಮಗಳಿಗೆ ಘರ್ಷಣೆಯುಂಟಾಗುವಂತೆ ಪ್ರಸಂಗಗಳನ್ನು ತಂದೊಡ್ಡಬಹುದಲ್ಲವೆ ಅದು ? ’

‘ ವಿಧಿ ಎಂದರೇನು ? ’

‘ ಬಾಳನ್ನು ಹೆಣೆದುಕೊಂಡು ಹೋಗುವ ಅದೃಶ್ಯ ಶಕ್ತಿ.’

‘ ಆದರೇನು ? ’

‘ ತನ್ನ ಬಾಳನ್ನು ಹೆಣೆಯುವ ಶಕ್ತಿಯ ಮೇಲೆ ವ್ಯಕ್ತಿಗೆ ಹತೋಟಿ ಇದೆಯೆ ? ’

‘ ಇಲ್ಲ.’

‘ ಮತ್ತೇಕೆ ಮಾತನಾಡುತ್ತಿ ? ವ್ಯಕ್ತಿಯ ಬಾಳನ್ನು ವಿಧಿ ಹೇಗೆ ಬೇಕಾದರೂ ತಿರುಗಿಸಬಹುದು.’

‘ ಪ್ರೇಮದಿಂದ ವ್ಯಕ್ತಿ ಬಾಳನ್ನೇ ಮೀರಬಹುದು. ಬಾಳನ್ನು ಮೀರಿದವನನ್ನು ವಿಧಿಯೇನು ಮಾಡೀತು ? ’

‘ ಅವನ ಪ್ರೇಮ ಬದುಕಿನಲ್ಲಿ ಫಲಿಸಲಾರದು.’

ಆನಂದನ ಮನಸ್ಸು ಇನ್ನೂ ಭೂತಕಾಲದಲ್ಲಿಯೇ ಸುಳಿದಾಡುತ್ತಿತ್ತು. ಅಲ್ಲಿಯೂ ಅವನ ತಳಮಳಗೊಂಡ ಜೀವಕ್ಕೆ ಶಾಂತಿ ಸಿಕ್ಕಲಿಲ್ಲ. ಅವನಿಗೆ ಎಚ್ಚರವಾಯಿತು.

## ೧೭

ಬೆಳಗ್ಗೆ ಸ್ನಾನವನ್ನು ಮುಗಿಸಿಕೊಂಡು ಆನಂದ ತನ್ನ ಕೊಟಡಿಗೆ ಕಾಲಿಡುತ್ತಿದ್ದ. ಆಗ ಕೈಸಾಲೆಯಲ್ಲಿ ತಾಯಿಯೊಡನೆ ಮಾತನಾಡುತ್ತಿದ್ದ ಒಬ್ಬ ಹೆಂಗಸನ್ನು ನೋಡಿದ. ಆಕೆಯ ದೃಷ್ಟಿಯೂ ಅವನ ಮೇಲೆ ಬಿದ್ದಿತು. ಅವನು ತಕ್ಷಣ ಆಕೆಯನ್ನು ಗುರ್ತಿಸಿದ. ಮೊದಲು ಸುಶೀಲಾಬಾಯಿಯನ್ನು ಆನಂದನಿಗೆ ಪರಿಚಯಮಾಡಿಕೊಟ್ಟಿದ್ದವಳು ಇಂದಿರೆ, ಗೋಪಾಲರಾಯರ ಮನೆಯಲ್ಲಿ. ಸುಶೀಲಾಬಾಯಿ ಗೋಪಾಲರಾಯರ ಮನೆಗೆ ಪದೇ ಪದೇ ಬರುತ್ತಿದ್ದರು. ಆಕೆಯನ್ನು ಸಂಪಿಗೆಯಲ್ಲಿಯೂ ಆನಂದ ಒಂದೆರಡು ಬಾರಿ ನೋಡಿದ್ದ. ಆಕೆ ‘ ಭಾರತ ಶಿಶುವಿಹಾರ ’ದ ಕಾರ್ಯದರ್ಶಿನಿಯೆಂದು ಅವನಿಗೆ ಗೊತ್ತಿತ್ತು. ಈಗ ಆಕೆಗೆ ತನ್ನ ಮುಖವನ್ನು ತೋರಿಸುವ ಧೈರ್ಯವೂ ಆನಂದನಿಗಿರಲಿಲ್ಲ.

ತರುಣದಲ್ಲಿಯೇ ಸುಶೀಲಾಬಾಯಿಯ ಕುಂಕುಮ ಅಳಿಸಿಹೋಯಿತು. ಯಾರ ನೆಲೆಯೂ ಸಿಕ್ಕದೆ ಆಕೆ ಸ್ವಾವಲಂಬಿಯಾಗಿ ಜೀವನವನ್ನು ನಡೆಸಬೇಕಾಯಿತು. ಕೊನೆಗೆ ‘ ಭಾರತ ಶಿಶುವಿಹಾರ ’ದಲ್ಲಿ ಆಕೆಗೆ ಒಂದು ಕೆಲಸ ದೊರೆಯಿತು.

'ಭಾರತ ಶಿಶುವಿಹಾರ'ದ ಸ್ಥಾಪನಾಕಾರ್ಯದಲ್ಲಿ ಗೋಪಾಲರಾಯರೂ ಒಬ್ಬ ಪ್ರಮುಖರಾಗಿದ್ದರು. ಸಂಸ್ಥೆಗೆ ನಿಧಿಯನ್ನು ಸೇರಿಸಲು ಅವರು ವಿಶೇಷ ಆಸಕ್ತಿಯಿಂದ ಸೇವೆಯನ್ನು ಸಲ್ಲಿಸಿದ್ದರು. ಸಂಸ್ಥೆಯಲ್ಲಿ ಅವರಿಗೆ ಹೆಚ್ಚಿನ ಮರ್ಯಾದೆಯಿತ್ತು.

ಶಿಶುವಿಹಾರದ ಕಾರ್ಯದರ್ಶಿನಿಯ ಸ್ಥಾನ ಖಾಲಿ ಬಿದ್ದಾಗ ಸುಶೀಲಾಬಾಯಿ ಅದಕ್ಕಾಗಿ ಪ್ರಯತ್ನಿಸಿದರು. ಆ ಸಮಯದಲ್ಲಿ ಆಕೆ ಗೋಪಾಲರಾಯರನ್ನು ಕಂಡು ಅವರೆದುರು ತಮ್ಮ ನಿರ್ಭಾಗ್ಯ ಜೀವನದ ಕಷ್ಟಗಳನ್ನೆಲ್ಲ ತೋಡಿಕೊಂಡರು. ಗೋಪಾಲರಾಯರು ಆಕೆಯ ಗತಿಗಾಗಿ ಅನುಕಂಪ ತೋರಿಸಿದರು. ಆಕೆಯ ಕೆಲಸಕ್ಕಾಗಿ ಸಮಿತಿಯ ಕೆಲವು ಸದಸ್ಯರನ್ನು ಕಂಡು ಮಾತನಾಡಿದರು. ಅದರ ಪರಿಣಾಮವಾಗಿ ಸುಶೀಲಾಬಾಯಿಗೆ ಶಿಶುವಿಹಾರದ ಕಾರ್ಯದರ್ಶಿನಿಯ ಕೆಲಸ ದೊರೆಯಿತು ಆದುದರಿಂದ ಆಕೆಗೆ ಗೋಪಾಲರಾಯರಲ್ಲಿ ವಿಶೇಷ ಕೃತಜ್ಞತೆಯಿತ್ತು. ಆಗಾಗ್ಗೆ ಅವರ ಮನೆಗೆ ಹೋಗಿ ತಮ್ಮ ಕಷ್ಟಸುಖಗಳನ್ನೆಲ್ಲ ಅವರಿಗೆ ಹೇಳಿಕೊಳ್ಳುತ್ತಿದ್ದರು.

ಸುಶೀಲಾಬಾಯಿಗೆ ಸಂಪಿಗೆಯಲ್ಲಿ ಸ್ವಲ್ಪ ಜಮೀನಿತ್ತು. ಜಮೀನಿನ ಕೆಲಸಗಳಿಗಾಗಿ ಆಕೆ ವರ್ಷಕ್ಕೆ ಒಂದೆರಡು ಬಾರಿ ಸಂಪಿಗೆಗೆ ಬಂದು ಹೋಗುತ್ತಿದ್ದರು. ಬಂದಾಗಲೆಲ್ಲ ಆಕೆ ಉಳಿಯುತ್ತಿದ್ದುದು ತಮ್ಮ ದೂರದ ಸಂಬಂಧಿಗಳಾದ ಶಾಮರಾಯರ ಮನೆಯಲ್ಲಿ. ಜಮೀನಿನ ಮೇಲ್ವಿಚಾರಣೆಯೆಲ್ಲ ಶಾಮರಾಯರದೇ ಆಗಿತ್ತು. ಆ ಮೇಲ್ವಿಚಾರಣೆಯಲ್ಲಿ ಅವರು ಅಷ್ಟಿಷ್ಟು ಸ್ವಪ್ರಯೋಜನವನ್ನೂ ಕಂಡುಕೊಂಡು ಅದನ್ನು ನಿರ್ವಹಿಸುತ್ತಿದ್ದರೂ ಸುಶೀಲಾಬಾಯಿಗೆ ಅವರಿಂದ ಉಪಕಾರವಾಗಿತ್ತು.

ಈ ಬಾರಿ ಸಂಪಿಗೆಗೆ ಬಂದಾಗ ಸುಶೀಲಾಬಾಯಿಗೆ ಆನಂದನ ಮದುವೆಯ ವಿಷಯವನ್ನೆಲ್ಲ ಶಾಮರಾಯರು ಕೂಲಂಕಷವಾಗಿ ತಿಳಿಸಿದರು. ಎಂತಹ ರಹಸ್ಯವಾದ ವಿಷಯಗಳನ್ನೂ ಪತ್ತೆಹಚ್ಚುವ ಶಕ್ತಿಯನ್ನು ದೇವರು ಶಾಮರಾಯರಿಗೆ ಕೊಟ್ಟಿದ್ದ. ಯಾವಾಗಲೂ ಅವರು ಆ ಶಕ್ತಿಯನ್ನು ಪೂರ್ತಿಯಾಗಿ ಉಪಯೋಗಿಸಿಕೊಂಡು ಇತರರಿಗೂ ತಮ್ಮ ತಿಳಿವಳಿಕೆಯನ್ನು ನಿಸ್ವಾರ್ಥವಾಗಿ ಹಂಚುತ್ತಿದ್ದರು. ರಂಗರಾಯರ ಹಣಕಾಸಿನ ದುಃಸ್ಥಿತಿ, ಪದ್ಮಳ ಮದುವೆಯ ಪ್ರಯತ್ನ, ಅನಿರೀಕ್ಷಿತವಾಗಿ ಒದಗಿಬಂದ ಸುಂದರರಾಯರ ಸಂಬಂಧ, ತ್ವರಿತ

ದಲ್ಲಿ ಮಾಡಿದ ನಿಶ್ಚಯ—ಎಲ್ಲವನ್ನೂ ಅವರು ಸುಶೀಲಾಬಾಯಿಗೆ ವಿವರಿಸಿದರು. ಆನಂದ ಬೆಂಗಳೂರಿನಿಂದ ಸಂಪಿಗೆಗೆ ಬರುವ ಸಮಯಕ್ಕೆ ಲಗ್ನಪತ್ರಿಕೆ ನಿಶ್ಚಯವಾಗಿತ್ತೆಂದು ಸುಶೀಲಾಬಾಯಿ ತಿಳಿದುಕೊಂಡರು.

ಯಾವಾಗ ಸಂಪಿಗೆಗೆ ಬಂದರೂ ಸುಶೀಲಾಬಾಯಿ ನಾಗಮ್ಮನವರನ್ನು ಮಾತನಾಡಿಸಿಕೊಂಡು ಹೋಗುತ್ತಿದ್ದರು. ಈ ಬಾರಿಯೂ ಆಕೆ ಅಂತೆಯೇ ಅವರ ಮನೆಗೆ ಬಂದಿದ್ದರು. ಆನಂದನನ್ನು ಕಂಡಾಗ ಆಕೆಗೆ ಅವನೊಡನೆ ಎರಡು ಮಾತನಾಡಬೇಕೆನಿಸಿತು. ಆದರೆ ಆಕೆಯನ್ನು ಕಂಡೂ ಕಾಣದವನಂತೆ ಆನಂದ ತನ್ನ ಕೊಟಡಿಗೆ ಹೊರಟುಹೋದ.

೧೮

ಗೋಪಾಲರಾಯರು ಇಂದಿರೆಯ ಮದುವೆಯನ್ನು ಬಹಳ ಸಂಭ್ರಮದಿಂದ ನಡೆಸಬೇಕೆಂದು ಮಾಡಬೇಕಾದ ವ್ಯವಸ್ಥೆಗಳನ್ನೆಲ್ಲ ಯೋಚಿಸುತ್ತಿದ್ದರು. ಆ ಮದುವೆಯೇ ಅವರ ಜೀವಿತದಲ್ಲಿ ನಡೆಯಬೇಕಾಗಿದ್ದ ದೊಡ್ಡ ಮಂಗಳಕಾರ್ಯ. ಅವರಿಗೆ ಹಣಕಾಸಿನ ಮುಗ್ಗಟ್ಟಿರಲಿಲ್ಲ. ಬ್ಯಾಂಕಿನಲ್ಲಿ ಸಾಕಷ್ಟು ಹಣವನ್ನು ಇಟ್ಟಿದ್ದರು. ಇಂದಿರೆಯೊಡನೆ ತಮ್ಮ ಸರ್ವಸ್ವವನ್ನೂ ಅಳಿಯನಿಗೆ ಧಾರೆಯೆರೆಯಲು ಅವರು ಆಸೆಪಟ್ಟಿದ್ದರು.

ವಿಧಿಯ ಅಣಕ ಬಹಳ ನಿರ್ದಯವಾದದ್ದು. ಅದರ ವಿಕಟ ನಗೆಯ ಹಿಂದೆ ಕಣ್ಣೀರಿನ ಹೊನಲಿರಬಹುದು. ಅದನ್ನೇ ಆನಂದಬಾಷ್ಪವೆಂದು ಅದು ನಂಬಿ ನೋಯಿಸಬಹುದು. ಆಗ ನೋವು ಮತ್ತೂ ಹರಿತವಾಗುವುದು. ಅದು ಪ್ರಸಂಗಗಳನ್ನು ಮೋಸದಿಂದ ಹೆಣೆದು ದುರಂತವು ಬೆನ್ನ ಹಿಂದೆ ಹೆಡೆಯಾಡುತ್ತಿರುವಾಗಲೂ ತುಟಿಯ ಮೇಲೆ ಮುಗುಳ್ನಗೆ ನರ್ತಿಸುವಂತೆ ಮಾಡಬಹುದು. ಮುಗ್ಧನೊಬ್ಬನನ್ನು ಆಕಾಂಕ್ಷೆಯ ಶಿಖರಕ್ಕೆ ಹತ್ತಿಸಿ ಅಲ್ಲಿ ಹಬ್ಬಿರುವ ಆಸೆಯ ಕಾಮನಬಿಲ್ಲನ್ನು ತೋರಿಸಿ ಅದಕ್ಕಾಗಿ ಕೈಚಾಚುತ್ತಿರುವಾಗ ಅವನನ್ನು ಪಾತಾಳಕ್ಕೆ ತಳ್ಳಿ ಕೇಕೆ ಹಾಕಬಹುದು. ಅದು ಗೋಪಾಲರಾಯರ ಕುಟುಂಬವನ್ನೂ ತನ್ನ ತೆಕ್ಕೆಯೊಳಗೆ ಬಿಗಿಯಲು ಹವಣಿಸುತ್ತಿತ್ತು.

ಆ ದಿನ ಬೆಳಗ್ಗೆ ಗೋಪಾಲರಾಯರು ತಮ್ಮ ಕೊಟಡಿಯಲ್ಲಿ ಮುಂದಿನ ದಿನದ ಕಾರ್ಯಕ್ರಮದ ವಿಷಯವಾಗಿ ಲಕ್ಷ್ಮಮ್ಮನವರೊಡನೆ ಸಮಾಲೋಚನೆ

ನಡೆಸುತ್ತಿದ್ದರು. ಉತ್ಸಾಹದ ನಗೆ ಹೊರಗಡೆ ಕೇಳುತ್ತಿತ್ತು. ಮರುದಿನ ಪ್ರಾತಃಕಾಲದ ಗಾಡಿಗೆ ಗೋಪಾಲರಾಯರು ಮದುವೆಯ ನಿಶ್ಚಯಕ್ಕಾಗಿ ಸಂಪಿಗೆಗೆ ಹೊರಡುವವರಿದ್ದರು.

ಆಗ ಅಂಚೆಯವನು ಒಳಗೆ ಬಂದು ಎರಡು ವರ್ಣರಂಜಿತ ಕವರುಗಳನ್ನು ಗೋಪಾಲರಾಯರ ಕೈಲಿರಿಸಿದ. ಗೋಪಾಲರಾಯರು ತಮ್ಮ ನಗುವಿಗೆ ಮತ್ತಷ್ಟು ಧ್ವನಿಗೂಡಿಸಿದರು.

"ನಮ್ಮ ಇಂದಿರೆಯ ಮದುವೆಯ ಮಾತನ್ನಾಡುತ್ತಿರುವಾಗಲೇ ಎರಡು ಮದುವೆ ಕರೆಯೋಲೆಗಳು ಬಂದಿವೆ. ಎಲ್ಲ ಶುಭಸೂಚಕ" ಎಂದು ಒಂದನ್ನು ಒಡೆದು ಓದಿದರು. ಆ ಲಗ್ನಪತ್ರಿಕೆ ರಂಗರಾಯರಿಂದ ಬಂದಿತ್ತು. ಅದು ಆನಂದನ ತಂಗಿ ಪದ್ಮಳ ಮದುವೆಯ ಆಹ್ವಾನಪತ್ರಿಕೆಯೆಂದು ತಿಳಿದು ಎಲ್ಲರೂ ಸಂತೋಷಪಟ್ಟರು.

ಮತ್ತೊಂದು ಕರೆಯೋಲೆಯನ್ನು ಗೋಪಾಲರಾಯರು ಓದಿಕೊಂಡರು. ಪತ್ರ ಅವರ ಕೈಜಾರಿ ಕೆಳಗೆ ಬಿದ್ದಿತು. ಅವರ ಮುಖದಲ್ಲಿದ್ದ ನಗೆ ಒಂದೇ ಕ್ಷಣದಲ್ಲಿ ಬತ್ತಿ ನಾಲಗೆಯಿಂದ ಮಾತು ಹೊರಡಲಿಲ್ಲ.

"ಆನಂದನ ಮದುವೆಯ ಕರೆಯೋಲೆ" ಎಂದು ತೊದಲಿನಲ್ಲಿ ಹೇಳಿದರು. ಲಕ್ಷ್ಮಮ್ಮನವರ ಮುಖವೂ ವಿವರ್ಣವಾಯಿತು.

ಇಂದಿರೆಯ ಹೃದಯದಲ್ಲಿ ವಿದ್ಯುತ್ ಸಂಚಾರವಾದಂತೆ ಆಯಿತು. ಸಿಡಿಲ ಏಟಿಗೆ ತಡೆಯಲಾರದೆ ಕುಸಿದುಹೋಗುವ ಬಳ್ಳಿಯಂತೆ ಕುಸಿದಳು. ಕೆಲವು ಗಳಿಗೆಗಳ ಹಿಂದೆ ನಲಿವಿನ ಬೀಡಾಗಿದ್ದ ಮನೆ ಕ್ಷಣದಲ್ಲಿ ಸೂತಕದ ಮನೆಯಂತೆ ಗೋಳಿನಲ್ಲಿ ಮುಳುಗಿತು.

ಗೋಪಾಲರಾಯರಿಗೆ ತಮ್ಮನ್ನೇ ತಾವು ಸಮಾಧಾನಪಡಿಸಿಕೊಳ್ಳುವುದು ಕಷ್ಟವಾಯಿತು.

ಇಂದಿರೆಯನ್ನು ಯಾರೂ ಸಮಾಧಾನ ಮಾಡುವಂತಿರಲಿಲ್ಲ. ಅವಳ ಎದೆ ತತ್ತರಿಸಿತು. ಆಲೋಚನೆ ಮಾಡುವುದಕ್ಕೂ ಅವಳ ಮನಸ್ಸಿಗೆ ಚೇತನವಿರಲಿಲ್ಲ.

ಇಂದಿರೆ ಆನಂದನನ್ನು ಪೂರ್ತಿಯಾಗಿ ಅರ್ಥಮಾಡಿಕೊಂಡಿದ್ದಳು. ಅವಳಿಗೆ ಅವನಲ್ಲಿ ಪೂರ್ಣ ನಂಬಿಕೆಯಿತ್ತು. ಅವನ ಪ್ರೇಮದಲ್ಲಿ ಅವಳು ಯಾವ ಕಳಂಕವನ್ನೂ ಎಂದೂ ಕಂಡಿರಲಿಲ್ಲ, ಭಾವಿಸಿರಲಿಲ್ಲ. ಆನಂದ ಅವಳ

ಕೂಡ ಕಳೆದ ಒಂದೊಂದು ಗಳಿಗೆಯೂ ಅದಕ್ಕೆ ಸಾಕ್ಷಿಯಾಗಿತ್ತು. ಯಾವ ಘಟನೆಯೂ ಅವರ ಪ್ರೇಮವನ್ನು ಅಲುಗಿಸಲಾರದೆಂದು ಇಂದಿರೆ ಹೃತ್ಪೂರ್ವಕವಾಗಿ ನಂಬಿದ್ದಳು. ಅಂತಹ ಭದ್ರವಾದ ನಂಬಿಕೆ ಕುಸಿದುಹೋಯಿತು. ಆನಂದ ಸರೋಜಳೊಡನೆ ಮದುವೆಗೆ ಹೇಗೆ ಒಪ್ಪಿದನೆಂಬುದು ಇಂದಿರೆಗೆ ಅರ್ಥವಾಗಲಿಲ್ಲ. ಅವಳ ಕನಸಿನ ಮನೆ ಚೂರ್ಣಿತವಾಗಿ ಅವಳ ಕಣ್ಣೆದುರು ರಾಶಿಯಾಗಿ, ಅವಳ ಮುಂದೆ ಕಾಣುತ್ತಿದ್ದ ಬದುಕು ವಿಶಾಲವಾದ ಬಂಜೆ ಭೂಮಿಯಂತಿತ್ತು. ಅಲ್ಲಿ ಆಸೆಯ ಯಾವ ಬೀಜವೂ ಮೊಳೆಯುವಂತಿರಲಿಲ್ಲ.

ಇಂದಿರೆ ಎರಡು ದಿನಗಳಿಂದ ಶೋಕಸಂವಿಗ್ನಳಾದಳು. ಹೃದಯ ತಲ್ಲಣಿಸುತ್ತಿತ್ತು. ಒಂದೊಂದು ವೇಳೆ ರೋಷ ಉಕ್ಕಿ ಮೈ ಉರಿದುಹೋಗುತ್ತಿತ್ತು.

'ಆನಂದನ ಪ್ರೇಮ ಕಪಟವಿರಬಹುದೆ? ಅವನು ತನ್ನನ್ನು ವಂಚಿಸಿರಬಹುದೆ?' ಎಂದು ಆಗ ಅವಳಿಗೆ ಅನ್ನಿಸಿತು.

ಆದರೆ ಅವಳ ಹೃದಯ ಆ ಭಾವನೆಯನ್ನು ಒಪ್ಪಿಕೊಳ್ಳುತ್ತಿರಲಿಲ್ಲ.

## ೧೯

ಸುಶೀಲಾಬಾಯಿ ಬೆಂಗಳೂರಿಗೆ ಹಿಂತಿರುಗಿದರು. ಅದೇ ಸಂಜೆ ಅವರು ಗೋಪಾಲರಾಯರ ಮನೆಗೆ ಹೋದರು. ಗೋಪಾಲರಾಯರ ಮಾತೆಲ್ಲೋ, ಮನವೆಲ್ಲೋ! ಆ ದಿನದ ಮಾತು ಬೇರೆ ಕಡೆ ಹೆಚ್ಚು ಸುತ್ತದೆ ಆನಂದನ ವಿಷಯವನ್ನು ಮುಟ್ಟಿತು.

"ನಾನು ಈ ದಿನ ಸಂಪಿಗೆಯಿಂದ ಬಂದೆ" ಎಂದರು ಸುಶೀಲಾಬಾಯಿ.

'ಸಂಪಿಗೆ' ಶಬ್ದ ಕಿವಿಯ ಮೇಲೆ ಬೀಳುತ್ತಲೆ ಗೋಪಾಲರಾಯರ ಕುತೂಹಲ ಉಕ್ಕಿತು.

"ಏನು ಸುದ್ದಿ?" ಎಂದು ಗೋಪಾಲರಾಯರು ಕೇಳಿದರು.

"ಆನಂದನ ಮದುವೆಯದೇ ದೊಡ್ಡ ಸುದ್ದಿ."

"ನಮಗೆಲ್ಲ ಅದೊಂದು ದೊಡ್ಡ ಒಗಟಾಗಿದೆ"

"ರಂಗರಾಯರು ಶ್ರೀಮಂತರ ಸಂಟಿಪ್ತನ ಬೆಳಸಿದಾರ್ರೆ."

"ಒಂದೇ ವಾರದಲ್ಲಿ ಆನಂದನ ಮನಸ್ಸು ಅಷ್ಟೊಂದು ಬದಲಾಯಿಸಬಹುದೆಂದು ನಾವು ಊಹಿಸಿರಲಿಲ್ಲ."

" ಅದೊಂದು ದೊಡ್ಡ ಕತೆ! "

" ಅದೇನು ? "

" ರಂಗರಾಯರ ಆರ್ಥಿಕ ಸ್ಥಿತಿ ಕೆಟ್ಟಿತ್ತು. ಸಾಲಗಾರರ ಕಾಟ, ಹಣ ಕಾಸಿನ ಜಗಳಗಳಲ್ಲಿ ಕೋರ್ಟಿನ ಖರ್ಚು, ಪದ್ಮಳ ಮದುವೆ ಚಿಂತೆ—ಇವೆಲ್ಲ ಅವರನ್ನು ದಿಕ್ಕುಗಾಣದಂತೆ ಮಾಡಿದ್ದವು. ಸುಂದರರಾಯರು ಎಲ್ಲ ಸಿಕ್ಕು ಗಳನ್ನೂ ಬಿಡಿಸುವುದಾಗಿ ಒಪ್ಪಿಕೊಂಡಿದ್ದಾರೆ. ಇಕ್ಕಟ್ಟಿನಿಂದ ದಾರಿ ಕಾಣ ದಾಗಲು ರಂಗರಾಯರು ಆನಂದನ ಮದುವೆಯನ್ನು ಆತುರವಾಗಿ ನಿಶ್ಚಯ ಮಾಡಿದರು."

ಆ ಮಾತುಗಳನ್ನು ಕೇಳಿ ಗೋಪಾಲರಾಯರ ಮುಖದಲ್ಲಿ ಮುಸುಕಿದ್ದ ಯೋಚನೆಗಳು ಚೆದುರಿದವು.

" ಆ ಸಂಬಂಧಕ್ಕೆ ಆನಂದನ ಒಪ್ಪಿಗೆ ಇತ್ತೆ ? "

" ಆನಂದ ಸಂಪಿಗೆಗೆ ಹೋಗುವ ಹೊತ್ತಿಗಾಗಲೆ ರಂಗರಾಯರು ಮದುವೆ ಯನ್ನು ನಿಶ್ಚಯಿಸಿಬಿಟ್ಟಿದ್ದರು. ಸುಂದರರಾಯರಿಂದ ಹಣ ಪಡೆದು ಸಾಲಗಳ ನ್ನೆಲ್ಲ ತೀರಿಸಿಬಿಟ್ಟಿದ್ದರು. ಪದ್ಮಳ ಮದುವೆ ಸಿದ್ಧತೆಗಳನ್ನೆಲ್ಲಾ ಮಾಡಿದ್ದರು. ವರನನ್ನು ಗೊತ್ತುಮಾಡಿಕೊಂಡೇ ಸುಂದರರಾಯರು ಸಂಪಿಗೆಗೆ ಹೋಗಿದ್ದರಂತೆ. ಲಗ್ನಪತ್ರಿಕೆಯ ದಿವಸವೂ ನಿಶ್ಚಯವಾಗಿತ್ತು. ಆನಂದ ಧರ್ಮಸಂಕಟದಲ್ಲಿ ಸಿಕ್ಕಿ ಕೊಂಡು ಸುಮ್ಮನಿದ್ದುಬಿಟ್ಟಿರಬೇಕು ಎಂದು ನನ್ನ ಊಹೆ. ಬಹುಶಃ ಅವನು ಮದುವೆಯ ವಿಚಾರದಲ್ಲಿ ನೊಂದುಕೊಂಡಿರಬೇಕು. ನನಗೆ ಮುಖವನ್ನು ತೋರಿಸಲಿಲ್ಲ. ಅವನಿಗೆ ಉತ್ಸಾಹವೇ ಇಲ್ಲ."

ಸುಶೀಲಾಬಾಯಿ ಗೋಪಾಲರಾಯರಿಗೆ ಆನಂದನ ಸನ್ನಿವೇಶಗಳನ್ನೆಲ್ಲ ಸೂಚಿಸಿದರು. ಅವರು ಅವನ ಮೇಲೆ ತಾಳಿದ್ದ ಕೋಪ ಯೋಚನೆಗೆ ಎಡೆ ಕೊಟ್ಟಿತು. ಆ ಕತೆಯನ್ನೆಲ್ಲ ಕೇಳಿದಾಗ ಇಂದಿರೆಯ ದುಃಖ ಮರುಕಳಿಸಿತು. ಆನಂದ ದುರ್ದೈವದ ಲೀಲೆಗೆ ಸಿಕ್ಕಿದ ಒಬ್ಬ ನಿರಪರಾಧಿಯೆನಿಸಿತು ಅವಳಿಗೆ. ಆನಂದ ಅಪರಾಧಿಯಾಗಲಿ ನಿರಪರಾಧಿಯಾಗಲಿ, ತನ್ನವನಾಗುವುದಿಲ್ಲವೆಂದು ತಿಳಿದು ಅವಳ ಎದೆ ಸಂಕಟದಿಂದ ಕುಗ್ಗಿತು. ಅದಕ್ಕೆ ಯಾವ ಪರಿಹಾರವೂ ಇರಲಿಲ್ಲ.

೨೦

ಮಧ್ಯಾಹ್ನ ಇಂದಿರೆ ಆನಂದನ ಕೊಟಡಿಯಲ್ಲಿ ಸುಮ್ಮನೆ ಅಲೆದಾಡಿದಳು. ಅವಳ ಅಂತರಂಗ ಕಲಕಿಹೋಗಿತ್ತು. ಅಲ್ಲಿ ಚಿತ್ರಗಳು ಒಂದರ ಮೇಲೊಂದೊತ್ತಿ ಅಸ್ಪಷ್ಟವಾದವು. ಆ ಅಸ್ಪಷ್ಟ ಚಿತ್ರಗಳಲ್ಲಿ ಆನಂದನ ಚಿತ್ರ ಮಾತ್ರ ಅಲ್ಲಿ ಸ್ಪಷ್ಟವಾಗಿ ಉಳಿಯಿತು. ಅದು ಅಲ್ಲಿಂದ ಅಲುಗಾಡಲಿಲ್ಲ. ಅದು ತನ್ನ ಕನಸೆಂದು ತಿಳಿದು ಇಂದಿರೆ ಎಚ್ಚರವನ್ನು ಶಪಿಸಿದಳು. ಒಂದು ಆರಾಮಾಸನದ ಮೇಲೆ ಮೈಚಾಚಿ ಸುಮ್ಮನೆ ಹೊರಳಾಡಿದಳು.

ಇಂದಿರೆಯೂ ಆನಂದನೂ ಒಂದು ಕಲ್ಪನೆಯ ಕುದುರೆಯನ್ನೇರಿ ಬಹಳ ದೂರ ಓಡಿದರು. ಆ ಕುದುರೆ ಕ್ಷಣಕ್ಷಣಕ್ಕೂ ವೇಗವನ್ನು ವೃದ್ಧಿಸಿಗೊಳ್ಳು ತ್ತಿತ್ತು. ಅದರ ವೇಗ ಆನಂದ ಹಿಡಿದಿದ್ದ ಲಗಾಮನ್ನು ಮೀರಿತು. ಪ್ರಪಂಚ ವೆಲ್ಲ ಅಷ್ಟೇ ವೇಗವಾಗಿ ಹಿಂದಕ್ಕೋಡಿತು. ಕುದುರೆಯ ಕಣ್ಣುಗಳು ದಿಗಂತದ ಮೇಲೆ ನೆಟ್ಟಿದ್ದವು. ಅಲ್ಲಿ ಪ್ರಕಾಶಮಾನವಾದ ಬೆಳಕೊಂದು ವಿರಾಜಿಸುತ್ತಿತ್ತು.

' ಆನಂದ, ಅದೇ ನಿನ್ನ ಆದರ್ಶ ' ಎಂದಿತು ಸುತ್ತಲಿನ ಆವರಣ.

ಅದು ಹತ್ತಿರದಲ್ಲಿರುವಂತೆ ಕಂಡರೂ ಕುದುರೆ ಎಷ್ಟು ಓಡಿದರೂ ಅದೂ ಅಷ್ಟೇ ದೂರ ದೂರ ಮುಂದಕ್ಕೆ ಸರಿಯಿತು.

' ಆನಂದ, ಇಂದಿರೆಯೊಡನೆ ನಿನ್ನನ್ನು ಸೃಷ್ಟಿಯ ಅಂತ್ಯಕ್ಕೆ ಮುಟ್ಟಿಸಿ ಬಿಡುತ್ತೇನೆ ' ಎನ್ನುವಂತಿತ್ತು ಆ ಕುದುರೆಯ ನಾಗಾಲೋಟ.

" ಆನಂದನ ಎದೆ ಝಲ್ಲೆಂದಿತು. ಇಂದಿರೆ ಅವನ ಕೈಗಳನ್ನು ಬಿಗಿಯಾಗಿ ಹಿಡಿದಳು.

' ಈ ಕುದುರೆಯನ್ನು ನಾನು ಯಾತಕ್ಕಾದರೂ ಹತ್ತಿದೆ ? ' ಎನ್ನಿಸಿತು ಆನಂದನಿಗೆ.

' ಆನಂದ ಕುದುರೆಯನ್ನು ನಡೆಸುತ್ತಿದ್ದಾನೆ, ನನಗೇಕೆ ಭಯ ? ' ಎನ್ನಿಸಿತು ಇಂದಿರೆಗೆ.

ಆನಂದನ ಕೈಗಳನ್ನು ಅವಳು ಮತ್ತೂ ಬಿಗಿಯಾಗಿ ಹಿಡಿದಳು.

' ನಿನ್ನದು ಭ್ರಾಂತಿ, ಆನಂದ. ನಿನ್ನ ಆಸೆಯೆಲ್ಲ ಮಣ್ಣೇ. ನಿನ್ನ ಕುದುರೆ ಅಲ್ಲಿ ಕಾಣುತ್ತಿರುವ ಆದರ್ಶವನ್ನು ಮುಟ್ಟಲಾರದು. ನೋಡು, ಆ ಬೆಳಕು ನಿನ್ನ ಕುದುರೆಯನ್ನು ಇನ್ನೂ ಅಷ್ಟೇ ದೂರದಲ್ಲಿ ಅಣಕಿಸುತ್ತಿದೆ ' ಎಂದಿತು

ಒಂದು ಧ್ವನಿ.

‘ ಇನ್ನೂ ಪ್ರಯತ್ನಿಸು ಆನಂದ. ಇಷ್ಟು ದೂರ ಬಂದು ನಿನ್ನ ಪ್ರಯತ್ನ ವ್ಯರ್ಥವಾಗುವುದು ಬೇಡ ’ ಎಂದಿತು ಮತ್ತೊಂದು ಧ್ವನಿ.

‘ ನೀನು ಇನ್ನೂ ಬಹಳ ಬೆಟ್ಟಗಳನ್ನು ಹಾರಬೇಕು. ನಿನ್ನ ಆಸೆಯನ್ನು ಮರೆತುಬಿಡು. ನಿನ್ನ ವ್ಯರ್ಥವಾದ ಪ್ರಯತ್ನದಲ್ಲಿ ಇಂದಿರೆಯನ್ನೇಕೆ ಈ ನಿರಾಶೆಯ ಬೀಡಿಗೆ ಕರೆದುತಂದೆ ? ನಾನು ಅವಳನ್ನು ಪುನಃ ಬದುಕಿನ ಬೀಡಿಗೆ ತಲಪಿಸುವುದೂ ಕಷ್ಟ.’

‘ ನಿನ್ನ ಕುದುರೆ ಸಾಯುತ್ತಿದೆ,, ಆನಂದ. ನನಗೂ ಏಕೋ ನಿರಾಶೆ ಹುಟ್ಟುತ್ತಿದೆ.’

‘ ಸೂರ್ಯನು ಮುಳುಗುತ್ತಿದ್ದಾನೆ. ವ್ಯರ್ಥವಾದ ಆಸೆಯನ್ನು ತುಂಬಿ ನೀನು ಇಂದಿರೆಯ ಬದುಕನ್ನು ಹಾಳುಮಾಡಿದೆ. ಅವಳು ಈಗ ಬದುಕಿನಿಂದ ದೂರವಾದಳು.’

ಇಂದಿರೆಯ ಹೃದಯ ವೇಗವಾಗಿ ಬಡಿಯುತ್ತಿತ್ತು. ಅವಳು ಸುತ್ತಲೂ ನೋಡಿದಳು. ಕತ್ತಲು ಮುಸುಗಿಬಂತು. ಆಕಾಶವು ಒಂದು ಕಪ್ಪು ಬಟ್ಟಲಿನಂತಿತ್ತು. ಅಲ್ಲಿ ಒಂದು ತಾರೆಯೂ ಕಾಣುತ್ತಿರಲಿಲ್ಲ. ಇಂದಿರೆಯ ಮುಷ್ಟಿಯಲ್ಲಿದ್ದ ಆನಂದನ ಕೈಗಳು ನಡುಗುತ್ತಿದ್ದವು. ಆನಂದನೇ ಮೊದಲು ಮಾತನಾಡಿದ.

‘ ನಮ್ಮ ಆದರ್ಶ ಮಣ್ಣುಪಾಲಾಯಿತು, ಇಂದಿರಾ. ನಾನು ಸೋತು ಹೋದೆ.’

‘ ನೀನು ನಿಜವಾಗಿ ನನ್ನನ್ನು ಬೆಳಕುಮುಟ್ಟಿಸುತ್ತೀಯೆಂದು ನಂಬಿದ್ದೆ, ಆನಂದ.’

‘ ನಿನ್ನ ಬದುಕಿನ ಬೀಡನ್ನು ಹುಡುಕಿಕೋ, ಇಂದಿರೆ. ನನ್ನ ಬದುಕಿನ ದಾರಿ ಬೇರೆಯಾಯಿತು.’

‘ ಬದುಕು ಬಹಳ ದೂರ ಹಿಂದೆ ಉಳಿದುಹೋಯಿತು, ಆನಂದ. ಇನ್ನು ನನಗೆ ಕತ್ತಲೇ ಬದುಕು.’

‘ ನಾನು ಪಾಪಿ, ಇಂದಿರೆ. ವ್ಯರ್ಥವಾದ ಆದರ್ಶದಲ್ಲಿ ನಿನ್ನನ್ನು ನಂಬಿಸಿ ನಿನ್ನ ಬದುಕನ್ನು ಹಾಳುಮಾಡಿದೆ.’

‘ ನಿನ್ನ ಅಸಹಾಯತೆ ನನಗೆ ಗೊತ್ತು. ಆದರೇನು ? ನನಗೆ ಇನ್ನು

ಬದುಕೆಲ್ಲಿದೆ ? '

ಆನಂದ ನಾಲ್ಕು ಹೆಜ್ಜೆ ಮುಂದೆ ನಡೆದುಹೋದ. ಕತ್ತಲೆ ಮತ್ತೂ ನಿಬಿಡ ವಾಯಿತು.

' ಆನಂದ, ಎಲ್ಲಿ ಹೋದೆ? ಅಯ್ಯೋ ! ನನ್ನ ಕೈಬಿಟ್ಟೆಯಾ ? '

' ಅಳುತ್ತಿರುವೆಯಾ, ಇಂದಿರೆ ? '

' ಆ....ನಂ....ದ....'

' ಇಂ....ದಿ....ರೆ....'

ಆನಂದನ ಕೂಗು ದೂರವಾಯಿತು. ಇಂದಿರೆ ಕೂಗಲು ಪ್ರಯತ್ನ ಪಟ್ಟಳು ; ಆಗಲಿಲ್ಲ.

" ಇಂದಿರಾ....ಇಂದಿರಾ....ಇಂದಿರಾ—" ಯಾರೋ ನಾಲ್ಕಾರು ಬಾರಿ ಗಟ್ಟಿಯಾಗಿ ಕೂಗಿದಂತಾಯಿತು. ಇಂದಿರೆ ಕಣ್ಣು ತೆರೆದಳು. ಲಕ್ಷ್ಮಮ್ಮನವರು ಅವಳ ಮೈ ಹಿಡಿದು ಅಲುಗಿಸುತ್ತಿದ್ದರು. ಇಂದಿರೆ ಕಣ್ಣು ತಿಕ್ಕಿಕೊಂಡೆದ್ದಳು.

" ಆಗಲೆ ನಾಲ್ಕು ಗಂಟೆ, ಇಂದಿರಾ. ಕಾಫಿಯಾಗಿದೆ, ಏಳು. ಎಷ್ಟೊಂದು ನಿದ್ದೆಯಮ್ಮ ನಿನಗೆ ? " ಎಂದರು ಲಕ್ಷ್ಮಮ್ಮನವರು.

## ೨೧

ರಂಗರಾಯರ ಮನೆಯಲ್ಲಿ ಮಂಗಳವಾದ್ಯಗಳು ಮೊಳಗುತ್ತಿದ್ದವು. ಆ ದಿನ ಪದ್ಮಳ ಮದುವೆ. ನೆಂಟರಿಷ್ಟರು ನೆರೆದಿದ್ದರು. ಅವರಲ್ಲಿ ಶಾಮರಾಯರ ಪಾತ್ರ ಪ್ರಧಾನವಾಗಿತ್ತು. ಅವರ ಠೀವಿ ಸಂದರ್ಭಕ್ಕೆ ಹೆಚ್ಚು ಕಳೆಕಟ್ಟಿತ್ತು. ಅವರ ವ್ಯಕ್ತಿ ವೈಶಿಷ್ಟ್ಯ ಎಲ್ಲರಿಗೂ ಎದ್ದು ಕಾಣುವಂತಹುದು. ಸಂಪಿಗೆಯಲ್ಲಿ ಶುಭಾಶುಭಗಳು ಎಲ್ಲಿ ನಡೆಯಬೇಕಾದರೂ ಶಾಮರಾಯರ ನೆರವು ಕೇಳದೆ ಇರುತ್ತಿರಲಿಲ್ಲ. ಇಂಥ ವಿಚಾರಗಳಲ್ಲಿ ನುರಿತ ಅವರ ಅನುಭವ, ಸಮಯದಲ್ಲಿ ಎಲ್ಲರಿಗೂ ಬೇಕಾಗುತ್ತಿತ್ತು. ಅದಕ್ಕಾಗಿ ಸರಿಯಾದ ರುಸುಮನ್ನು ಒಂದಲ್ಲ ಒಂದು ರೀತಿಯಲ್ಲಿ ಗಿಟ್ಟಿಸಿಕೊಳ್ಳುವ ಚತುರತೆ ಅವರಿಗಿತ್ತು. ಅವರು ವೈದಿಕ ಮತ್ತು ಲೌಕಿಕ ವಿಷಯಗಳನ್ನು ಯುಕ್ತವಾಗಿ ಬೆರಸಿಕೊಂಡು ಸಂದರ್ಭವಲ್ಲಿ ನಾಲ್ಕು ಮಂದಿಗೆ ಹಿತವಾಗುವಂತೆ ನಡೆಯುತ್ತಿದ್ದರು.

ಸುಂದರರಾಯರು ಸಭೆಯಲ್ಲಿ ಹಾಜರಿದ್ದರು. ತಾವು ಎಳೆತನದಿಂದ ಸಾಕಿ

ಬೆಳೆಸಿದ ನಾಣಿ ಮದುವೆಯ ಮಂಟಪವನ್ನಲಂಕರಿಸಿದ್ದ. ಅದನ್ನು ಕಂಡು ಅವರ ಮನಸ್ಸಿನಲ್ಲಿ ತೃಪ್ತಿ ತುಂಬಿತು. ಪದ್ಮ ಅವನಿಗೆ ಅನುರೂಪವಾದ ಕನ್ಯೆಯೆಂದು ಅವರ ಕಣ್ಣು ಅಳತೆ ಮಾಡಿಕೊಂಡಿತು. ಆ ಸಂತೋಷಸಮಾರಂಭ ಸರೋಜಳ ಮದುವೆಗೆ ನಾಂದಿಯೆಂದು ಅವರ ಭಾವನೆಯಾಗಿ ಮನಸ್ಸು ಸಂತೋಷಿಸಿತು. ಇನ್ನೂ ಹೆಚ್ಚು ಶೋಭಾಯಮಾನವಾದ ಮಂಟಪದಲ್ಲಿ ಸರೋಜಳೂ ಆನಂದನೂ ಕುಳಿತು ಮೆರುಗುತ್ತಿರುವ ಚಿತ್ರ ಅವರ ಕಣ್ಣಮುಂದೆ ಸುಳಿಯಿತು. ಅದು ಇನ್ನು ಮೂರೇ ಮೂರು ದಿನ ಉಳಿದಿತ್ತು.

ಶಾಮರಾಯರ ಪತ್ನಿ ಭಾಗೀರಥಮ್ಮನವರ ಓಡಾಟ ಕಡಿಮೆಯಾಗಿರಲಿಲ್ಲ. ಅವರ ಚಟುವಟಿಕೆ ಪಾದರಸದಂತೆ. ನಾಗಮ್ಮನವರು ನಿಶ್ಶಕ್ತರಾದುದರಿಂದ ಯಾಜಮಾನ್ಯ ಭಾಗೀರಥಮ್ಮನವರದಾಗಿತ್ತು.

" ರಂಗೂ, ನೀನೇನೂ ತೊಂದರೆ ಹಚ್ಚಿಕೊಳ್ಳಬೇಡ, ನಾನೆಲ್ಲ ನೋಡಿ ಕೊಳ್ಳುತ್ತೇನೆ " ಎಂದು ಶಾಮರಾಯರು ಹೇಳುತ್ತಿದ್ದರು.

ಸುಂದರರಾಯರು ಅವರ ಯೋಜನ್ನು ಕಂಡು ಮೆಚ್ಚಿಕೊಂಡರು.

" ರಂಗೂಗೆ ಈ ಮದುವೆ ದೊಡ್ಡ ಯೋಚನೆಯಾಗಿತ್ತು. ನಾನೇನೋ ಹೇಳುತ್ತಲೇ ಇದ್ದೆ. ಪದ್ಮಳ ಜಾತಕದಲ್ಲಿ ಈ ವರ್ಷ ಕಂಕಣಬಲವಿದೆ ಅಂತ. ಅವಳಿಗೆ ಲಗ್ನ ಈ ವರ್ಷ ತಪ್ಪುವ ಹಾಗೇ ಇರಲಿಲ್ಲ. ಜ್ಯೋತಿಷ್ಯ ಸುಳ್ಳಾ ದೀತೆ ! " ಎಂದು ಜ್ಯೋತಿಷ್ಯಶಾಸ್ತ್ರದ ತಮ್ಮ ಜ್ಞಾನವನ್ನು ಸುಂದರರಾಯರ ಮುಂದೆ ಪ್ರದರ್ಶಿಸಿಕೊಂಡರು.

ಮಂಗಳವಾದ್ಯವಾಗುತ್ತಿತ್ತು. ನಾಣಿ ಮಾಂಗಲ್ಯವನ್ನು ಕೈಲಿ ಹಿಡಿದಿದ್ದ. ಸಭೆಯ ಕಣ್ಣು ಆ ಕಡೆಗೆ ತಿರುಗಿತ್ತು. ಪುರೋಹಿತರು ಮಂತ್ರಘೋಷಣೆ ಯನ್ನು ಮಾಡಿದರು. ಮಾಂಗಲ್ಯವನ್ನು ಪದ್ಮಳ ಕೊರಳಿಗೆ ನಾಣಿ ಕಟ್ಟಿದ. ನಾಗಮ್ಮನವರ ಕಣ್ಣು ಪದ್ಮಳ ಕಣ್ಣನ್ನು ಸಂಧಿಸಿತು. ಅಲ್ಲಿ ಊರಿ ನಿಂತಿದ್ದ ಕಣ್ಣೀರು ಕಟ್ಟೆಯೊಡೆದು ಹನಿಹನಿಯಾಗಿ ಕೆಳಗಿಳಿಯಿತು. ರಂಗರಾಯರು ಆ ದೃಶ್ಯವನ್ನು ಕಂಡು ಕೃತಾರ್ಥರಾದರು. ಆ ಕೃತಕೃತ್ಯತೆ ಕರಗಿ ನೀರಾಗಿ ಅವರ ನಯನಗಳನ್ನು ಒದ್ದೆಮಾಡಿತು.

ಆನಂದನ ಮನಸ್ಸಿನಲ್ಲಿಯ ಭಾವನೆಗಳು ವಿಶ್ಲೇಷಣಕ್ಕೆ ಸಿಗುವಂತಿರಲಿಲ್ಲ. ಅಲ್ಲಿ ಗೊಂದಲವೆದ್ದಿತ್ತು. ಪದ್ಮಳ ಆ ಶುಭಗಳಿಗೆಗಾಗಿ ಅವನು ಇಂದಿರೆಯ

ಪ್ರೇಮವನ್ನು ಅಲ್ಲಿ ಸಾಕ್ಷಿಯಾಗಿದ್ದ ಅಗ್ನಿಯಲ್ಲಿ ಹೋಮ ಮಾಡಿದ್ದ. ತನ್ನ ತ್ಯಾಗದಿಂದ ನಿರೀಕ್ಷಿತವಾದ ಫಲ ಪೂರ್ತಿಯಾಗಿ ಆಗ ಹಣ್ಣಾಗಿತ್ತು. ಆದರೆ ಆ ತ್ಯಾಗವನ್ನು ತನ್ನ ಜೀವ ಸಹಿಸಿಕೊಳ್ಳುವುದೇ ಎಂದು ಹೃದಯ ತತ್ತರಿಸಿತು. ಉತ್ತರವನ್ನರಿಯದೆ ಅವನ ನೋಟ ಎಲ್ಲಿಯೋ ನೆಟ್ಟಿತ್ತು. ಸಭೆಯೆಲ್ಲ ತನ್ನ ಮುಖವನ್ನೇ ನೋಡುತ್ತಿರುವಂತೆ ಅವನಿಗೆ ಭ್ರಾಂತಿಯಾಯಿತು. ಆಗ ಇಷ್ಟ ವಿಲ್ಲದೆ ಒಂದು ಕುಡಿ ನಗು ಮಿಂಚಿಹೋಯಿತು.

ಪದ್ಮಳ ಮದುವೆ ನಡೆದುಹೋಯಿತು. ಮುಂದೆ ನಡೆಯಲಿದ್ದ ಮುಖ್ಯ ವಾದ ಕಾರ್ಯಕ್ಕೆ ವಿಜೃಂಭಣೆಯಿಂದ ಸಿದ್ಧತೆಗಳಾದವು. ಆನಂದನ ಮದುವೆ ಗಾಗಿ ನೆಂಟರಿಷ್ಟರೆಲ್ಲ ಬೆಂಗಳೂರಿಗೆ ಹೊರಟರು. ಅದಕ್ಕಾಗಿ ವಿಶೇಷವಾದ ವಾಹನಗಳನ್ನು ಏರ್ಪಡಿಸಲಾಗಿತ್ತು. ಆನಂದನನ್ನು ಕರೆತರಲು ಸುಂದರ ರಾಯರು ತಮ್ಮ ಸ್ವಂತ ಕಾರನ್ನೇ ಸಂಪಿಗೆಗೆ ಕಳುಹಿಸಿದ್ದರು. ಕಾರು ಬೆಂಗಳೂರಿನ ಕಡೆಗೆ ಬಂದಂತೆಲ್ಲ ಆನಂದನ ಅಂತರಂಗದಲ್ಲಿ ಸುಟ್ಟುಹೋದ ಆಸೆ ಹೊಗೆಯಾಡಿತು.

೨೨

ಸರೋಜಳ ಮದುವೆಯಲ್ಲಿ ರಾಜು ಹೆಚ್ಚು ಉತ್ಸಾಹವನ್ನು ತಾಳಿದ್ದ. ಕಲಾವಿದ ರಾಜುವನ್ನು ಬಲ್ಲ ಸುಂದರರಾಯರು ಎಲ್ಲ ಸಂತೋಷಕೂಟಗಳ ಲ್ಲಿಯೂ ಬರಮಾಡಿಕೊಳ್ಳುತ್ತಿದ್ದರು. ಆ ದಿನ ಅವನು ಅನೇಕ ಕಾರ್ಯಗಳನ್ನು ಚತುರತೆಯಿಂದ ನಿರ್ವಹಿಸಿದ್ದ. ಲಗ್ನದ ಸಮಯದಲ್ಲಿ ಹಾಜರಿರಲು ಸುಂದರ ರಾಯರು ತಮ್ಮ ಆಪ್ತರಿಗೆಲ್ಲ ಒಂದು ವಿಶೇಷ ಕರೆಯನ್ನು ಕಳುಹಿಸಿದರು. ಅದಕ್ಕಾಗಿ ರಾಜು ಮತ್ತು ಶಾಮರಾಯರು ಕಾರಿನಲ್ಲಿ ಹೊರಟರು. ಹೋಗು ವಾಗ ಗೋಪಾಲರಾಯರಿಗೂ ಆಹ್ವಾನವನ್ನು ಕೊಟ್ಟರು.

"ಲಗ್ನಕ್ಕೆ ದಯಮಾಡಿಸಿ ವಧೂವರರನ್ನು ಆಶೀರ್ವದಿಸಬೇಕು" ಎಂದು ಶಾಮರಾಯರು ಅವರ ಕೈಲಿ ಮಂತ್ರಾಕ್ಷತೆಯನ್ನಿಟ್ಟರು. ಅವರು ಮೌನವಾಗಿದ್ದರು.

ರಾಜುವಿನ ದೃಷ್ಟಿ ಮನೆಯಲ್ಲೆಲ್ಲ ತೂರಾಡಿತು. ಒಳಗಿಂದ ಬರುತ್ತಿರು ವಂತೆ ಇಂದಿರೆ ಅವನನ್ನು ನೋಡಿದಳು. ತಕ್ಷಣವೆ ಅವಳು ಕೊಟಡಿಗೆ ಹೊರಳಿಹೋದಳು.

ಸುಂದರರಾಯರ ಮನೆ ವೈಭವದಿಂದ ಕಂಗೊಳಿಸಿತು. ಬಣ್ಣ ಬಣ್ಣದ ತೋರಣಗಳು ಮೆರೆಯುತ್ತಿದ್ದವು. ಮೇಳಗಾರರನ್ನು ತಂಜಾವೂರಿನಿಂದ ಕರೆಸಿದ್ದರು.

ಮದುವೆಯ ಸಭಾಂಗಣ ಸುಂದರರಾಯರ ಬಂಧುಮಿತ್ರರಿಂದ ಕಿಕ್ಕಿರಿದಿತ್ತು. ಶ್ರೀಕಂಠಶಾಸ್ತ್ರಿಗಳ ಮಧುರವಾದ ಮಂತ್ರಘೋಷಣೆ ಸಭಿಕರ ಕಿವಿಗಳನ್ನು ಸೆಳೆಯಿತು. ಶಾಮರಾಯರೂ ಅವರ ಮಂತ್ರಸ್ಫುಟತೆಗೆ ತಲೆತೂಗಿದರು. ರಂಗರಾಯರಿಗೂ ನಾಗಮ್ಮನವರಿಗೂ ಆ ನೋಟ ಕನಸಿನ ಒಂದು ದೃಶ್ಯದಂತಿತ್ತು.

ಲಗ್ನದ ವೇಳೆ ಸಮೀಪಿಸಿತು. ಹೋಮಾಗ್ನಿ ಹೊಗೆ ಹರಡುತ್ತಿತ್ತು. ಅಗ್ನಿಸಾಕ್ಷಿಯಾಗಿ ಆನಂದ ಸರೋಜಳಿಗೆ ಮಾಂಗಲ್ಯವನ್ನು ಕಟ್ಟುವ ಸಮಯ ಬಂದಿತು. ಆ ಕಾರ್ಯ ಒಂದು ಕ್ಷಣದಲ್ಲಿ ಮುಗಿದುಹೋಯಿತು. ಕಮಲಮ್ಮನವರು ಕಣ್ಣೀರಿಟ್ಟರು.

ಸಂಜೆಯ ಕಾರ್ಯಕ್ರಮ ಮನೋರಂಜಕವಾಗಿತ್ತು. ಮಧುರವಾದ ಸಂಗೀತ ಕಛೇರಿ ನಡೆಯಿತು. ವಧೂವರರು ಅಲಂಕಾರದ ಬೆಡಗಿನಲ್ಲಿ ಓಲಾಡಿದರು.

ಆಹ್ವಾನಿತರಿಗೆ ಸುಸ್ವಾಗತ ದೊರೆಯಿತು. ಎಲ್ಲರೂ ಆನಂದನೊಡನೆ ಕೈಕುಲುಕಿ ತಮ್ಮ ಧನ್ಯವಾದಗಳನ್ನು ಹೇಳಿ ಹೊರಟರು. ಆಗ ಬಂದ ಒಬ್ಬ ವ್ಯಕ್ತಿಯ ಮೇಲೆ ಆನಂದನ ನೋಟ ಹೊರಳಿತು. ಆಕೆಯನ್ನು ರಾಜು ಸ್ವಾಗತಿಸಿದ. ನಾಗಮ್ಮನವರು ಒಳಗೆ ಕರೆದುಕೊಂಡುಹೋಗಿ ಆಕೆಗೆ ಆಸನವನ್ನು ಕೊಟ್ಟರು. ಆಕೆ ಸುಶೀಲಾಬಾಯಿ.

ಆನಂದನ ಮದುವೆ ಮುಗಿಯಿತು. ಸ್ವಾಗತ ಸಮಾರಂಭವೂ ಮುಗಿಯಿತು. ಆನಂದ ವಿರಾಮವಾಗಿ ಕೊಟಡಿಯಲ್ಲಿ ಕುಳಿತು ಲಗ್ನಕಾಲದಲ್ಲಿ ಬಂದಿದ್ದ ಅನೇಕ ಅಭಿನಂದನಪತ್ರಗಳನ್ನು ನೋಡುತ್ತಿದ್ದ. ಅವುಗಳಲ್ಲಿ ಒಂದು ಪತ್ರ ಗೋಪಾಲರಾಯರಿಂದ ಬಂದಿತ್ತು. ಅವರು ವಧೂವರರಿಗೆ ತಮ್ಮ ಶುಭಾಶಯಗಳನ್ನು ತಿಳಿಸಿದ್ದರು. ಆ ಪತ್ರವನ್ನು ಓದಿ ಮುಗಿಸುವ ವೇಳೆಗೆ ಆನಂದನ ಕಣ್ಣಿನಲ್ಲಿ ಕೂಡಿದ್ದ ಎರಡು ದಪ್ಪ ಹನಿಗಳು ಕೆಳಗುರುಳಿದವು.

ಮದುವೆ ವೈಭವದಿಂದ ನಡೆದುಹೋಯಿತು. ಇನ್ನು ನೆಂಟರಿಷ್ಟರು ಊರಿಗೆ ಹೊರಡುವ ವಿಜೃಂಭಣೆ. ಮೋಟಾರು ಬಂದು ಮನೆಯ ಮುಂದೆ ನಿಂತಿತು. ಅದು ಮುಂದೆ ಹೊರಡುವಾಗ ಆನಂದನ ನೋಟ ಸರೋಜಳ ನೋಟವನ್ನು ತಾಕಿತು. ಸರೋಜಳ ಮುಖದಲ್ಲಿ ಉಕ್ಕಿಬಂದ ಮುಗಳ್ನಗೆ ಆನಂದನ ಮುಖದಲ್ಲಿಯೂ ಮುಗುಳ್ನಗೆಯನ್ನುಕ್ಕಿಸಿತು.

೨೩

ಒಂದು ತಿಂಗಳು ಕಳೆದುಹೋಯಿತು. ಗೋಪಾಲರಾಯರು ಘಾತಿಗೊಂಡ ಇಂದಿರೆಯ ಮನಸ್ಸಿಗೆ ಸಮಾಧಾನ ತರಲು ಅನೇಕ ವಿಧಗಳಲ್ಲಿ ಯತ್ನಿಸಿದರು. ತಮ್ಮ ವಿರಾಮಕಾಲವನ್ನೆಲ್ಲ ಇಂದಿರೆಯೊಡನೆ ವಿನೋದವಾಗಿ ಮಾತನಾಡುವುದರಲ್ಲಿ ಕಳೆಯುತ್ತಿದ್ದರು. ಇಂದಿರೆಯ ಮನಸ್ಸು ಮಾತ್ರ ಆನಂದನಿಂದ ವಿಮುಖವಾಗಲಿಲ್ಲ.

ಇಂದಿರೆಯ ಮುಖದ ಮೇಲೆ ನಗೆ ಬತ್ತಿಹೋಯಿತು. ಪುಸ್ತಕಗಳನ್ನೋದುವುದರಲ್ಲಿ ಅವಳಿಗೆ ಈಗ ಆಸಕ್ತಿಯಿರಲಿಲ್ಲ. ಪುಸ್ತಕದಲ್ಲಿನ ಕೆಲವು ಪುಟಗಳನ್ನೋದಿ ಏನೋ ಯೋಚನೆಯ ಜೊಯ್ಯಾಟದಲ್ಲಿ ಸಿಕ್ಕಿಕೊಂಡು ಅದನ್ನು ಮುಚ್ಚಿಟ್ಟು ಸುಮ್ಮನೆ ಕುಳಿತುಬಿಡುತ್ತಿದ್ದಳು. ಹೆಣ್ಣಿನ ಜೀವನದಲ್ಲಿ ಆಗಿಹೋಗಬಹುದಾದ ಭಗ್ನಪ್ರೇಮ ಅವಳ ಯೋಚನೆಗಳನ್ನು ಆವರಿಸುತ್ತಿತ್ತು. ಆಗ ಪ್ರೇಮದ ವಿಷಯವಾಗಿ ಅವಳಿಗೆ ನಾನಾ ಭಾವನೆಗಳು ಉಂಟಾಗುತ್ತಿದ್ದವು. ತನ್ನ ಮತ್ತು ಆನಂದನ ಪರಸ್ಪರ ಪ್ರೇಮದಲ್ಲಿ ಕಳಂಕವಿರಲಿಲ್ಲ. ಅಂತಹ ನಿಷ್ಕಳಂಕ ಪ್ರೇಮ ಫಲಿಸಬೇಕಾಗಿತ್ತೆಂದು ಅವಳು ಎಷ್ಟು ಸಿದ್ಧಾಂತ ಮಾಡಿದರೂ ತನ್ನ ನಿಜವಾದ ಬದುಕಿನಲ್ಲಿ ಅದಕ್ಕೆ ಸೋಲಾಗಿತ್ತು. ಅವಳ ಯೋಚನೆಗಳು ಮುಂದಕ್ಕೆ ಹರಿಯುತ್ತಿರಲಿಲ್ಲ.

ಒಂದು ಸಂಜೆ ಸುಶೀಲಾಬಾಯಿ ಗೋಪಾಲರಾಯರೊಡನೆ ಶಿಶುವಿಹಾರದ ವಿಷಯವಾಗಿ ಮಾತನಾಡುತ್ತಿದ್ದರು. ಶಿಶುವಿಹಾರದ ಆಶ್ರಯದಲ್ಲಿ ಆ ವಾರ ತಾವು ನಡೆಸಿದ ಕಾರ್ಯಕ್ರಮಗಳನ್ನೆಲ್ಲ ಅವರಿಗೆ ತಿಳಿಸಿದರು. ವೃತ್ತಾಂತ ಪತ್ರಿಕೆಯ ಒಂದು ತುಂಡನ್ನು ಅವರ ಮುಂದಿರಿಸಿದರು. ಅದನ್ನು ಓದಿಕೊಂಡು ಗೋಪಾಲರಾಯರು ಸಂತೋಷವನ್ನು ವ್ಯಕ್ತಪಡಿಸಿದರು.

ಆ ಪತ್ರಿಕೆಯಲ್ಲಿ ಶಿಶುವಿಹಾರದ ಚಟುವಟಿಕೆಗಳಿಗಾಗಿ ಸಾರ್ವಜನಿಕ ಮೆಚ್ಚಿಗೆಯನ್ನು ತಿಳಿಯಪಡಿಸಿತ್ತು. ಸುಶೀಲಾಬಾಯಿಯ ಸಾಮರ್ಥ್ಯ, ಸೇವಾ ಸಕ್ತಿ, ಮಕ್ಕಳ ಮನೋವಿಜ್ಞಾನದಲ್ಲಿ ಅವರ ತಿಳಿವಳಿಕೆ—ಇವುಗಳನ್ನು ಪತ್ರಿಕೆ ಪ್ರಶಂಸಿಸಿತ್ತು. ಸಂಸ್ಥೆಯ ಕಾರ್ಯದರ್ಶಿನಿಯಾಗಿ ಆಕೆ ಮಾಡಿದ್ದ ಉತ್ತಮ ಶಿಶುಸೇವೆಗಾಗಿ ಧನ್ಯವಾದಗಳನ್ನರ್ಪಿಸಿತ್ತು. ಅದೇ ಪುಟದಲ್ಲಿ ಆಕೆಯ ಚಿತ್ರವೂ ಮುದ್ರಿತವಾಗಿತ್ತು.

ಗೋಪಾಲರಾಯರು ಇಂದಿರೆಯನ್ನು ಕರೆದು ಆ ಪತ್ರಿಕೆಯನ್ನು ನೋಡಲು ಕೊಟ್ಟರು.

"ಶಿಶುವಿಹಾರಕ್ಕೆ ಒಬ್ಬ ಉಪಾಧ್ಯಾಯಿನಿ ಬೇಕಾಗಿದ್ದಾಳೆ" ಎಂದು ಸುಶೀಲಾಬಾಯಿ ಮಾತನ್ನು ಮುಂದುವರಿಸಿದರು.

ಆ ಮಾತನ್ನಾಡಿದಾಗ ಆಕೆಗೆ ತಕ್ಷಣ ಒಂದು ಯೋಚನೆ ಹೊಳೆಯಿತು. ಇಂದಿರೆಗಾದ ಆಶಾಭಂಗ ಆಕೆಗೆ ನೆನಪಾಯಿತು. ಅದು ಅವಳ ಮನಸ್ಸಿನ ಮೇಲೆ ಎಷ್ಟು ತೀವ್ರವಾದ ಪರಿಣಾಮವನ್ನುಂಟುಮಾಡಿತ್ತು ಎಂಬುದೂ ಅರಿತ ವಿಷಯವಾಗಿತ್ತು. ಇಂದಿರೆಯ ಜೀವಕ್ಕೆ ಸಂತೋಷದ ಒಂದು ಆವರಣ ಬೇಕಾಗಿತ್ತು. ಅಂತಹ ಆವರಣದಲ್ಲಿ ಅವಳು ತನ್ನ ದುಃಖವನ್ನು ಮರೆಯಬಹುದೆಂದು ಸುಶೀಲಾಬಾಯಿ ಊಹಿಸಿದರು. ಅವರು ತಮ್ಮ ಸಲಹೆಯನ್ನು ಸೂಚಿಸಿದರು.

"ಇಂದಿರೆ ಕಾಲೇಜಿಗೂ ಸೇರಲಿಲ್ಲ. ಮನೆಯಲ್ಲಿ ತುಂಬ ಬೇಸರ ಆಗಬಹುದು. ಅವಳನ್ನು ಶಿಶುವಿಹಾರಕ್ಕಾದರೂ ಸೇರಿಸಬಹುದಲ್ಲಾ. ಮಕ್ಕಳ ಜೊತೆಯಲ್ಲಿ ಬೆರೆತು ಆಟ ಆಡಿಕೊಂಡಿರಬಹುದು. ಆ ವಾತಾವರಣದಲ್ಲಿ ನಿತ್ಯ ಸ್ವಲ್ಪ ಹೊತ್ತನ್ನು ಕಳೆದರೆ ಮನಸ್ಸಿಗೆ ಉಲ್ಲಾಸವಾಗಿರುತ್ತೆ. ಈಗ ಒಂದು ಕೆಲಸವೂ ಖಾಲಿ ಇದೆ."

ಗೋಪಾಲರಾಯರಿಗೆ ಸುಶೀಲಾಬಾಯಿಯ ಸಲಹೆ ಸರಿಯಾಗಿ ಕಂಡಿತು. ಇಂದಿರೆಯ ಮನಸ್ಸನ್ನು ಬೇರೆ ಕಡೆಗೆ ತಿರುಗಿಸುವುದು ಆವಶ್ಯಕವೆಂದು ಅವರು ಅರಿತಿದ್ದರು. ಅದನ್ನು ಕಾರ್ಯಗೊಳಿಸುವುದು ಹೇಗೆಂದು ಅವರು ಬಹಳ ಯೋಚನೆಯನ್ನು ಮಾಡಿದ್ದರು. ಸುಶೀಲಾಬಾಯಿಯ ಸಲಹೆಯಂತೆ ಇಂದಿರೆಗೆ ಆವರಣದ ಬದಲಾವಣೆ ಆವಶ್ಯಕವೆಂದು ಅವರು ನಿಶ್ಚಯಿಸಿದರು. ಮಕ್ಕಳ ಆವರಣಕ್ಕಿಂತ ಹಿತವಾದ ಬೇರೆ ಆವರಣ ಅವರ ಮನಸ್ಸಿಗೂ ಗೋಚರವಾಗಲಿಲ್ಲ.

ಮಕ್ಕಳ ನಗು, ನಲಿವು, ಆಟ, ಹಾಡು, ವಿನೋದ ಕಾರ್ಯಕ್ರಮಗಳು ಇಂದಿರೆಯ ಮನಸ್ಸನ್ನು ಉತ್ಸಾಹ, ಉಲ್ಲಾಸಗಳಿಂದ ತುಂಬುವುವೆಂದು ಅವರು ಆಶಿಸಿದರು.

" ನಿಮ್ಮ ಸಲಹೆ ಸರಿಯಾಗಿದೆ. ಮನೆಯಲ್ಲೇ ಕೂತಿರುವುದು ಅವಳಿಗೆ ಬೇಸರ. ಮಕ್ಕಳ ಜೊತೆಯಲ್ಲಿ ಅವಳು ವಿನೋದವಾಗಿ ಸ್ವಲ್ಪ ಕಾಲ ಕಳೆದರೆ ಮನಸ್ಸು ಎಷ್ಟೋ ಹಗುರವಾಗುತ್ತದೆ. ನಾಳೆ ಅವಳನ್ನು ಶಿಶುವಿಹಾರಕ್ಕೆ ಕರೆದುಕೊಂಡುಹೋಗಿ " ಎಂದು ಗೋಪಾಲರಾಯರು ತಮ್ಮ ಅನುಮತಿಯನ್ನು ಕೊಟ್ಟರು.

ಮರುದಿವಸ ಮಧ್ಯಾಹ್ನ ಇಂದಿರೆಯನ್ನು ಕರೆದುಕೊಂಡುಹೋಗಿ ಶಿಶುವಿಹಾರದ ಸಹೋದ್ಯೋಗಿಗಳಿಗೆಲ್ಲ ಪರಿಚಯ ಮಾಡಿಸಿ ಕೊಡುವುದಾಗಿ ಸುಶೀಲಾಬಾಯಿ ಹೇಳಿದರು.

## ೨೪

ಆನಂದನ ಜೀವನದಲ್ಲಿ ಹೊಸ ಅಧ್ಯಾಯ ಆರಂಭವಾಯಿತು. ಸುಂದರ ರಾಯರು ಅವನಿಗಾಗಿ ಮಲ್ಲೇಶ್ವರದಲ್ಲಿಯೇ ಒಂದು ಹೊಸ ಮನೆಯನ್ನು ಗೊತ್ತುಮಾಡಿದ್ದರು. ಮನೆಗೆ ಬೇಕಾದ ಎಲ್ಲ ಉಪಕರಣಗಳನ್ನೂ ಸಿದ್ಧಮಾಡಿ ಕೊಟ್ಟರು. ಭೋಗಸಾಮಗ್ರಿಗಳಿಂದ ಮನೆ ಕಳೆಗೊಂಡಿತ್ತು. ಬಾಡದ ಹೂವಿನಂತೆ ಸರೋಜ ತಮ್ಮ ಕಣ್ಣಮುಂದೆ ಸಂಸಾರ ನಡೆಸಿಕೊಂಡಿರಬೇಕೆಂಬುದೇ ಅವರ ಹೆಬ್ಬಯಕೆಯಾಗಿತ್ತು. ವಾರಕ್ಕೊಮ್ಮೆಯಾದರೂ ಮಗಳನ್ನು ನೋಡದಿದ್ದರೆ ಕಮಲಮ್ಮನವರ ಜೀವ ತಡೆಯುತ್ತಿರಲಿಲ್ಲ.

ಆನಂದ ಕಾಲೇಜಿನಲ್ಲಿ ವಿಜ್ಞಾನಶಾಸ್ತ್ರದ ಅಧ್ಯಾಪಕನಾಗಿದ್ದ. ಆ ವೃತ್ತಿ ಅವನ ಮನಸ್ಸಿಗೆ ಒಪ್ಪಿಗೆಯಾಗಿತ್ತು. ಎರಡೇ ತಿಂಗಳಲ್ಲಿ ಅವನು ವಿದ್ಯಾರ್ಥಿಗಳ ಮೆಚ್ಚಿಗೆಯನ್ನು ಗಳಿಸಿದ್ದ. ಅವನ ಹಾಸ್ಯ ಪ್ರಹಸನಗಳ ಕಿಡಿಗಳು ವಿದ್ಯಾರ್ಥಿಗಳ ಚಿತ್ತವನ್ನು ಅರಳಿಸುತ್ತಿದ್ದವು. ಆದರೆ ಅವನ ಮುಖದ ಮೇಲೆ ಮಾತ್ರ ಎಂದೂ ನಗು ಮೂಡಿರಲಿಲ್ಲ. ಭೌತಶಾಸ್ತ್ರದಲ್ಲಿ ಅವನ ಮೇಧಾಶಕ್ತಿಯನ್ನು ಪ್ರೊಫೆಸರುಗಳೆಲ್ಲ ಪ್ರಶಂಸಿಸುತ್ತಿದ್ದರು.

ಸಂಜೆಯಾಗಿತ್ತು. ಆನಂದ ಕಬ್ಬನ್ ಪಾರ್ಕಿನಿಂದ ಮಲ್ಲೇಶ್ವರದ ಕಡೆಗೆ

ಸೈಕಲ್ಲನ್ನು ತುಳಿಯುತ್ತಿದ್ದ. ಮೋಡಗಳು ತೇಲಾಡುತ್ತಿದ್ದವು. ಬೇಗ ಮನೆ ಸೇರಿಕೊಳ್ಳಲು ಆನಂದ ಆತುರನಾಗಿದ್ದ. ಗಾಂಧೀನಗರದ ರಸ್ತೆಯಿಂದ ವಾಹನವನ್ನು ತಿರುಗಿಸಿದ. ಎಚ್ಚರಿಕೆಯಿಲ್ಲದೆ ನಡುರಸ್ತೆಯಲ್ಲಿ ಓಡಾಡುತ್ತಿದ್ದ ಕೆಲವು ಮಂದಿ ಮಕ್ಕಳು ತಕ್ಷಣ ಅವನಿಗೆ ಎದುರಾದರು. ಅವನು ವಾಹನ ವನ್ನು ನಿಧಾನ ಮಾಡಿದ. ಅವನ ಕಣ್ಣು ಸುತ್ತ ತಿರುಗಿತು. ರಸ್ತೆಯ ಪಕ್ಕ ದಲ್ಲಿ ಒಂದು ಸುಂದರವಾದ ಕಟ್ಟಡ ನಿಂತಿತ್ತು. 'ಭಾರತ ಶಿಶುವಿಹಾರ' ಎಂದು ವರ್ಣರಂಜಿತವಾದ ಅಕ್ಷರಗಳಿಂದ ಕೆತ್ತಿದ ಹೆಸರು ಹೆಬ್ಬಾಗಿಲಿನ ಮೇಲೆ ಕಾಣಿಸಿತು. ಅಲ್ಲಿ ಯಾವುದೋ ಕಾರ್ಯಕ್ರಮ ನಡೆಯುತ್ತಿತ್ತು. ಮೈದಾನ ದಲ್ಲಿ ಮಕ್ಕಳೊಡನೆ ಆಟವಾಡುತ್ತಿದ್ದ ಒಬ್ಬ ವ್ಯಕ್ತಿಯ ಮೇಲೆ ಅವನ ದೃಷ್ಟಿ ನೆಟ್ಟಿತು. ಮಕ್ಕಳು ಆ ವ್ಯಕ್ತಿಯ ಸುತ್ತಲೂ ನಲಿದಾಡುತ್ತಿದ್ದರು. ಆ ವ್ಯಕ್ತಿ ಇಂದಿರೆಯೆಂದು ಗುರ್ತಿಸುತ್ತಿರುವಂತೆಯೇ ಅವನ ಮುಖ ಮಾರ್ಪಟ್ಟಿತು. ಅವಳು ಮಕ್ಕಳಿಗೆ ಕಿತ್ತಳೆಯ ತೊಳೆಗಳನ್ನು ಹಂಚುತ್ತಿದ್ದಳು. ಅವಳೂ ಒಂದು ತೊಳೆಯನ್ನು ತಿಂದುದನ್ನು ಕಂಡು ಆನಂದನ ಮನಸ್ಸಿನಲ್ಲಿ ವಿಚಿತ್ರವಾದ ತೃಪ್ತಿ ಹುಟ್ಟಿತು. ಆನಂದ ಅಲ್ಲಿಂದ ಕಾಲು ಕೀಳಲು ಪ್ರಯತ್ನಪಟ್ಟರೂ ಕಾಲು ನೆಲಕ್ಕೆ ಅಂಟಿತ್ತು. ಅವನ ಗಂಟಲು ಬಿಗಿಯಿತು. ಮೇಲೆ ತೂಗಾಡುತ್ತಿದ್ದ ಕರಿ ಮೋಡ ಮತ್ತು ಗುಡುಗಿನ ಆರ್ಭಟ ಅವನನ್ನು ಮನೆಯ ಕಡೆಗೆ ಹೊರ ಡಿಸಿದವು. ಇಂದಿರೆ ಶಿಶುವಿಹಾರಕ್ಕೆ ಸೇರಿದುದು ಆನಂದನಿಗೆ ಸ್ಪಷ್ಟವಾಯಿತು.

ಆನಂದನಿಗಾಗಿ ಕಾಯುತ್ತ ಸರೋಜ ವರಾಂಡದಲ್ಲಿ ಆರಾಮಾಸನದ ಮೇಲೆ ಕುಳಿತಿದ್ದಳು. ಬಹುಶಃ ಅವನಿಗೆ ಕಾಲೇಜಿನಲ್ಲಿ ಏನೋ ಅನಿರೀಕ್ಷಿತ ಕೆಲಸ ತೊಡಗಿರಬಹುದೆಂದು ಊಹಿಸಿದಳು. ಸಂಜೆಯ ಬೆಳಕು ನಿಧಾನವಾಗಿ ಮಸಕಾಯಿತು. ಸರೋಜ ದೀಪವನ್ನು ಹಚ್ಚಿ ಮತ್ತೆ ಅಲ್ಲಿಯೇ ಕುಳಿತಳು. ಆನಂದ ಮನೆಯನ್ನು ತಲಪುವ ವೇಳೆಗೆ ಗಡಿಯಾರ ಏಳು ಗಂಟೆ ಹೊಡೆದಿತ್ತು.

" ಈ ಹೊತ್ತು ನಾಲ್ಕು ಗಂಟೆಗೇ ಬರುವುದಾಗಿ ಹೇಳಿದ್ದಿರಿ. ಈಗ ಗಂಟೆ ಏಳು ಮೀರಿದೆ " ಎಂದಳು ಸರೋಜ. ಅವಳ ಮುಖದ ಮೇಲೆ ಬೇಸರವಿತ್ತು.

ಆನಂದನಿಗೆ ಸರೋಜಳ ಮನಸ್ಸು ಅರ್ಥವಾಯಿತು. ಆದರೂ ಅವನು ನೇರವಾಗಿ ನಿಜವನ್ನು ನುಡಿದ.

" ಸಂಜೆ ಬೇಸರವಾಯಿತು, ಸರೋಜ. ಕಬ್ಬನ್ ಪಾರ್ಕಿನಲ್ಲಿ ಕುಳಿತಿದ್ದೆ. ರಾಜು ಸಿಕ್ಕಿದ. ಸ್ವಲ್ಪ ಹೊತ್ತು ಸುತ್ತಾಡಿದೆವು. ಹೊತ್ತಾಗಿ ಹೋಯಿತು."

ಹಿಂದೆ ಕೆಲವು ಬಾರಿ ಮಿಾಟಿದ್ದ ಸರೋಜಳ ಮನಸ್ಸಿನ ಯಾವುದೋ ತಂತಿಯನ್ನು ಆನಂದ ಮತ್ತೆ ಮಿಾಟಿದ. ಆನಂದನ ಅರಿವಿಲ್ಲದೆ ಅದು ಹಲವು ಬಾರಿ ಸರೋಜಳ ಮನಸ್ಸಿನಲ್ಲಿ ಮಿಡಿದಿತ್ತು. ಆನಂದನ ಮನಸ್ಸು ತಾನು ಆಸೆ ಪಡುತ್ತಿದ್ದಷ್ಟು ನಲಿವು ಉತ್ಸಾಹಗಳಿಂದ ತುಂಬಿಲ್ಲದಿದ್ದುದನ್ನು ಅವಳು ಅರಿತಿದ್ದಳು. ಆ ದಿನ ಅವಳು ತನ್ನ ಭಾವನೆಯನ್ನು ಹೊರಪಡಿಸಿದಳು.

" ನಾನು ಬೇಸರ ಕಳೆದುಕೊಳ್ಳಲು ನಿಮಗಾಗಿ ಎಷ್ಟು ಹೊತ್ತು ದಾರಿ ಕಾದಿದ್ದೇನೆ! ಈ ಸಂಜೆ ತಿರುಗಾಡಲು ಹೋಗೋಣ ಎಂದು ಇಷ್ಟ ಇತ್ತು. ನೀವು ಬೇಸರ ಕಳೆದುಕೊಳ್ಳಲು ಕಬ್ಬನ್ ಪಾರ್ಕಿನ ಏಕಾಂತತೆ ಹುಡುಕಿಕೊಂಡು ಹೋದಿರಿ " ಎಂದು ಸರೋಜ ಗಟ್ಟಿಯಾಗಿ ಮಾತನಾಡಿದಳು.

ಆನಂದನಿಗೆ ಅವಳ ಮಾತು ನಿಜವೆನಿಸಿತು. ಹಿಂದೆ ಕೆಲವು ಪ್ರಸಂಗಗಳಲ್ಲಿ ಅವಳ ಸೂಕ್ಷ್ಮವಾದ ಮನಸ್ಸಿಗೆ ನೋವಾಗಿದ್ದುದೂ ಅವನ ನೆನಪಿಗೆ ಬಂದಿತು. ಆ ಸಮಯಗಳಲ್ಲಿಯೂ ಅಸಂತೋಷಕ್ಕೆ ತಾನೇ ಕಾರಣನೆಂದು ತಿಳಿದಿದ್ದ. ಈ ವಿಚಾರಗಳು ಅವನನ್ನು ಎಚ್ಚರಗೊಳಿಸಿದವು.

೨೫

ಮಕ್ಕಳ ಆಸಕ್ತಿ ಒಂದೊಂದು ಕ್ಷಣ ಒಂದೊಂದು ಹಾದಿಯಲ್ಲಿ ಹರಿಯುತ್ತದೆ. ಅದನ್ನು ಕತ್ತರಿಸಿ ಆ ಹಾದಿಯಿಂದ ಶಿಕ್ಷಕನ ಹಾದಿಗೆ ಬಲಾತ್ಕಾರದಿಂದ ತಿರುಗಿಸಬಾರದು. ಅದರಿಂದ ಮಗುವಿನ ಆಸಕ್ತಿಯನ್ನು ತರುಣದಲ್ಲಿಯೇ ಭಂಗಪಡಿಸಿದಂತಾಗುತ್ತದೆ. ಸ್ವಾಭಾವಿಕವಾಗಿ ಅದರ ಮನಸ್ಸು ಹರಿಯುತ್ತಿರುವ ಹಾದಿಯಲ್ಲಿಯೇ ಕುತೂಹಲವನ್ನು ಹುಟ್ಟಿಸಬೇಕು. ಆಸಕ್ತಿಯನ್ನು ಬಲಿಸಿ ವಿಷಯವನ್ನು ಪ್ರಾಸಂಗಿಕವಾಗಿ ಸೂಚಿಸಿದರೆ ಮಗು ಅದನ್ನು ಗ್ರಹಿಸುತ್ತದೆ. ಸತ್ಯಸಂಧತೆ, ಮರುಕ, ಕ್ಷಮಾಗುಣ, ದೈವಭಕ್ತಿ ಮುಂತಾದ ನಿರಾಕಾರ ಭಾವಗಳನ್ನು ನೇರವಾಗಿ ತಿಳಿಸಿಬಿಟ್ಟರೆ ಅವು ಮಕ್ಕಳ ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ಮಾಡಲಾರವು. ಆದರೆ ಆ ಭಾವಗಳನ್ನು ಕತೆಗಳು, ನಾಟಕಗಳು, ಬೊಂಬೆಗಳು, ಚಿತ್ರಗಳು ಮುಂತಾದ ಸಾಧನಗಳಿಂದ ಬೋಧಿಸಿದರೆ ಅವರ

ಎಳೆಯ ಮನಸ್ಸು ಅವುಗಳನ್ನು ಗ್ರಹಿಸುತ್ತದೆ. ಭಾರತ ಶಿಶುವಿಹಾರ ಈ ವಿಜ್ಞಾನದೃಷ್ಟಿಯಿಂದಲೇ ಸ್ಥಾಪಿತವಾಗಿತ್ತು. ಪ್ರಸಿದ್ಧವಾದ ಆ ಸಂಸ್ಥೆಗೆ ನಗರದ ಅನೇಕ ಮಂದಿ ಗಣ್ಯವ್ಯಕ್ತಿಗಳು ತಮ್ಮ ಮಕ್ಕಳನ್ನು ಸೇರಿಸಿದ್ದರು.

'ಭಾರತ ಶಿಶುವಿಹಾರ'ದಲ್ಲಿ ನೂತನ ಶಿಕ್ಷಣಸಾಮಗ್ರಿಗಳು ಬೇಕಾದಷ್ಟಿದ್ದವು. ಅವುಗಳ ರಚನೆಯಲ್ಲಿದ್ದ ಮನೋವಿಜ್ಞಾನಿಯ ಬುದ್ಧಿಯನ್ನು ಸರಿಯಾಗಿ ಅರ್ಥಮಾಡಿಕೊಂಡು, ಮಕ್ಕಳಿಗೆ ಅವುಗಳ ಉಪಯೋಗವನ್ನು ಪೂರ್ತಿಯಾಗಿ ಇಂದಿರೆ ದೊರಕಿಸಿಕೊಡುತ್ತಿದ್ದಳು.

ಅಲ್ಲಿ ಮಕ್ಕಳಿಗಾಗಿ ಸಂಗ್ರಹಿಸಿದ್ದ ಕಲಾಕೃತಿಗಳು ಇಂದಿರೆಯ ಮನಸ್ಸನ್ನು ಸೆಳೆದಿದ್ದವು. ಅವುಗಳಲ್ಲಿ ಕಲಾವಿದನ ಸಿದ್ಧಿ ಕಾಣುತ್ತಿತ್ತು. ಹೊಸದಾಗಿ ಅಲ್ಲಿ ಪ್ರದರ್ಶನವಾಗುತ್ತಿದ್ದ ಮಕ್ಕಳ ಚಿತ್ರಪಟಗಳು ಶಿಶುವಿಹಾರಕ್ಕೆ ಖ್ಯಾತಿಯನ್ನು ತಂದಿದ್ದವು. ಅವುಗಳನ್ನೆಲ್ಲ ಸೃಷ್ಟಿಸುತ್ತಿದ್ದವನು ರಾಜು. ಅವನು ಕಲೆಯ ಬಹುಮುಖಗಳಲ್ಲಿ ನೂತನ ದೃಷ್ಟಿಯನ್ನು ಕಂಡುಕೊಂಡಿದ್ದ. ಅವನ ಪ್ರತಿಭೆ ಹೊಸ ದಾರಿಗಳಲ್ಲಿ ಹರಿಯುತ್ತಿತ್ತು. ಕಲೆಯಲ್ಲಿ ಪರಿಪೂರ್ಣತೆಯನ್ನು ಮುಟ್ಟಬೇಕೆಂಬ ಹಂಬಲ ತನ್ನನ್ನು ಕಲಾವಿದೆಯ ಗರ್ಭಗುಡಿಯೊಳಕ್ಕೆ ಕರೆದುಕೊಂಡು ಹೋಗುವುದೆಂದು ರಾಜು ನಂಬಿದ್ದ. ಆ ಶಕ್ತಿಯ ಪ್ರಭೆಯನ್ನು ಅವನು ರಚಿಸುತ್ತಿದ್ದ ಮಕ್ಕಳ ಬೋಧನಚಿತ್ರಗಳಲ್ಲಿ ಇಂದಿರೆ ಗುರುತಿಸಿದ್ದಳು.

ಒಂದು ದಿವಸ ತಾನೇ ರಚನೆಮಾಡಿದ ಒಬ್ಬ ಬೇಟೆಗಾರನ ಕತೆಯನ್ನು ಇಂದಿರೆ ಮಕ್ಕಳಿಗೆ ಹೇಳಿದಳು. ಆ ಕತೆಯನ್ನು ಅವರು ಬಹಳ ಆಸಕ್ತಿಯಿಂದ ಕೇಳಿದರು. ಕತೆ ಮುಗಿಯುತ್ತಲೇ ಅದರ ನೀತಿ ಅವರ ಮುಖದಲ್ಲಿ ನೆಟ್ಟಂತೆ ಕಾಣುತ್ತಿತ್ತು. ಕನಿಕರ ಅವರ ಹೃದಯವನ್ನು ತುಂಬಿತು.

ಮತ್ತೊಂದು ದಿವಸ ಸುಶೀಲಾಬಾಯಿ ಅದೇ ತರಗತಿಯಲ್ಲಿ ಒಂದು ಕತೆ ಹೇಳಲು ಆರಂಭಿಸಿದರು.

"ಬೇಟೆಗಾರನ ಕತೆ ಹೇಳಿ, ಮೇಡಂ" ಎಂದು ಒಂದೇ ಕೊರಳಿನಿಂದ ಮಕ್ಕಳೆಲ್ಲ ಕೂಗಿಕೊಂಡರು.

ಬೇಟೆಗಾರನ ಕತೆ ಯಾವುದೆಂದು ಸುಶೀಲಾಬಾಯಿಗೆ ಅರ್ಥವಾಗಲಿಲ್ಲ.

"ಚೆನ್ನಾಗಿರುವ ಬೇರೆ ಕತೆಯನ್ನು ಹೇಳುತ್ತೇನೆ" ಎಂದು ಮಕ್ಕಳನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದರು.

"ಬೇರೆ ಕತೆ ಬೇಡ, ಮೇಡಂ. ನಮಗೆ ಬೇಟೆಗಾರನ ಕತೆಯನ್ನೇ

ಹೇಳಿ" ಎಂದು ಎಲ್ಲರೂ ಛಲ ಹಿಡಿದರು. ಅವರ ಎಳೆ ಮೊಗಗಳಲ್ಲಿ ಆ ಕತೆಗಾಗಿ ಆಸೆ ತುಂಬಿ ಕಾಣುತ್ತಿತ್ತು. ಆ ಆಸೆಯನ್ನು ಮುರಿಯಲು ಸುಶೀಲಾಬಾಯಿಯ ಮನ ಒಪ್ಪಲಿಲ್ಲ.

"ನಿಮಗೆ ಆ ಕತೆ ಯಾರು ಹೇಳಿದರು?"

ಇಂದಿರೆಯ ಹೆಸರನ್ನು ಕೇಳಿ ಸುಶೀಲಾಬಾಯಿಗೆ ಆನಂದವಾಯಿತು.

"ಹಾಗಾದರೆ ಅವರನ್ನೇ ಆ ಕತೆ ಹೇಳಲು ಕಳಿಸುತ್ತೇನೆ" ಎಂದು ಹೇಳಿ ಹೊರಟುಹೋದರು.

'ಇಂದಿರೆಯನ್ನು ಕಂಡರೆ ಮಕ್ಕಳಿಗೆ ಎಷ್ಟು ಪ್ರೀತಿ' ಎಂದು ಅವರ ಹೃದಯ ಸಂತಸಗೊಂಡಿತು.

ಆ ದಿವಸ ಇಂದಿರೆಯೇ ಹೋಗಿ ಬೇಟೆಗಾರನ ಕತೆಯನ್ನು ಹೇಳಬೇಕಾಯಿತು. ಸುಶೀಲಾಬಾಯಿ ಆ ಕತೆಯನ್ನು ಹೃತ್ಪೂರ್ವಕವಾಗಿ ಹೊಗಳಿದರು. ಆ ಕತೆಯಲ್ಲಿ ಉಕ್ಕುತ್ತಿದ್ದ ಪ್ರೀತಿ, ತ್ಯಾಗ, ಕನಿಕರ ಮುಂತಾದ ಸದ್ಭಾವಗಳನ್ನು ಮಕ್ಕಳ ಹೃದಯದಲ್ಲಿ ಇಂದಿರೆ ಬಿತ್ತಿದಳು.

ಆ ದಿವಸ ನಡೆದ ಪ್ರಸಂಗವನ್ನು ರಾಜು ತಿಳಿದ. ಸುಶೀಲಾಬಾಯಿ ಇಂದಿರೆ ರಚಿಸಿದ ಬೇಟೆಗಾರನ ಕತೆಯನ್ನು ಅವನಿಗೆ ಹೇಳಿದ್ದರು. ಇಂದಿರೆ ಎಂತಹ ಚದುರೆ ಎನ್ನಿಸಿತು, ಅವನಿಗೆ. ತಪಿಸುತ್ತಿದ್ದ ಅವನ ಮನಸ್ಸನ್ನು ಬೇರೆಯೊಂದು ಹೊಸ ಆಸೆ ಹೊಕ್ಕಿತು. ಬೇಟೆಗಾರನ ಚಿತ್ರವನ್ನು ಕೇಳಿದಾಗ ಅವನ ಅಂತರಂಗದ ಭಾವನೆಗಳೆಲ್ಲ ಕಣ್ಣ ಮುಂದೆ ಚಿತ್ರಗಳಾಗಿ ನಿಂತವು. ಅವುಗಳಲ್ಲಿ ಅವನು ಒಂದು ನೂತನ ಸ್ಫೂರ್ತಿಯನ್ನು ಕಂಡ.

ಮುಂದಿನ ವಾರ ಶಿಶುವಿಹಾರದ ನೂತನ ಕಲಾಕೃತಿಗಳ ಗುಂಪಿನಲ್ಲಿ ಒಂದು ಚಿತ್ರಮಾಲೆ ತೂಗಾಡುತ್ತಿತ್ತು. ಅದರ ಒಂದೊಂದು ಚಿತ್ರದಲ್ಲಿಯೂ ಹೆಚ್ಚು ಮಟ್ಟದ ಕುಂಚಗಾರಿಕೆ ಕಾಣುತ್ತಿತ್ತು. ಆ ಚಿತ್ರಗಳನ್ನೆಲ್ಲಾ ಒಂದುಗೂಡಿಸಿದರೆ ಹೃದಯವನ್ನು ಭಾವಗಳಿಂದ ಕಲಕುವ ಒಂದು ಕತೆಯಾಗುತ್ತಿತ್ತು. ಚಿತ್ರಮಾಲೆಯ ಮೇಲೆ ಸುಂದರವಾದ ವರ್ಣಾಕ್ಷರಗಳಿಂದ 'ಬೇಟೆಗಾರನ ಕತೆ' ಎಂದು ಬರೆದಿತ್ತು. ಇಂದಿರೆ, ರಾಜು ಇಬ್ಬರ ಭಾವನೆಗಳೂ ಆ ಚಿತ್ರಗುಚ್ಛದಲ್ಲಿ ಬೆರೆತಿದ್ದವು. ಶಿಶುವಿಹಾರದಲ್ಲಿ ಅದಕ್ಕೆ ಒಂದು ವಿಶೇಷವಾದ ಮಾನ್ಯತೆಯಿತ್ತು. ಮಕ್ಕಳು ಗದ್ದಲ ಮಾಡುತ್ತಿರುವಾಗ ಉಪಾಧ್ಯಾಯಿನಿ ಬೇಟೆಗಾರನ ಕತೆ ಹೇಳುತ್ತೇನೆಂದರೆ ಎಲ್ಲರೂ ನಿಶ್ಶಬ್ದರಾಗಿ ಕುಳಿತುಕೊಳ್ಳುತ್ತಿದ್ದರು.

'ಬೇಟೆಗಾರ' ಚಿತ್ರಮಾಲೆಯನ್ನು ಕಂಡಾಗ ರಾಜುವಿನ ಆಸೆಗಳೆಲ್ಲ ಉಬ್ಬುತ್ತಿದ್ದವು.

ಸುಮಾರು ಒಂದು ವಾರ ಕಳೆದಿರಬಹುದು. ಸಂಜೆ ಶಾಂತವಾಗಿತ್ತು. ಮೈದಾನದ ಮೇಲೆ ಹೊನ್ನಿನ ಕಿರಣಗಳು ಚೆಲ್ಲಿದ್ದವು. ಇಂದಿರೆ ಮನೆಗೆ ಹೊರಟಿದ್ದಳು. ಶಾಲೆಯ ಹೆಬ್ಬಾಗಿಲನ್ನು ಬಿಟ್ಟು ಹೆಜ್ಜೆಹಾಕುತ್ತಿರುವಂತೆಯೇ ರಾಜು ಅವಳಿಗೆ ಎದುರಾದ.

"ನನ್ನ ಚಿತ್ರಮಾಲೆ ನಿಮ್ಮ ಬಾಯಿಂದ ಬಂದ ಕತೆಯಷ್ಟು ಭಾವಪೂರ್ಣವಾಗಿರಲಾರದು" ಎಂದು ರಾಜು ಮುಗುಳ್ನಗೆ ಬೀರಿದ.

"ಇಲ್ಲದೆ ಏನು? ನನಗಿರುವುದು ಒಂದು ನಾಲಗೆ, ನಿಮ್ಮ ಕುಂಚಕ್ಕಿರುವುದು ನೂರು ನಾಲಗೆಗಳು" ಎನ್ನುತ್ತ ಇಂದಿರೆ ಮುಗುಳ್ನಗೆಯನ್ನು ಹಿಂತಿರುಗಿಸಿದಳು.

ರಾಜುವಿಗೆ ಇಂದಿರೆಯ ಮಾತು ಮೋಜೆನಿಸಿತು.

## ೨೬

ಭಾನುವಾರ ಕಾಲೇಜಿಗೆ ರಜ. ಕಾಲೇಜ್ ಕೆಲಸಕ್ಕೆ ವಿರಾಮವಿದ್ದರೂ ಆನಂದನ ಮನಸ್ಸಿಗೆ ಹಿತವಿರಲಿಲ್ಲ. ಅದು ಅಶಾಂತಿಯ ಸುಳಿಗೆ ಸಿಕ್ಕಿಕೊಂಡಿತ್ತು. ಮನಸ್ಸು ಅವನ ಹಿಡಿತವನ್ನು ತಪ್ಪಿಸಿಕೊಂಡಿತ್ತು. ಅವನ ಮಾತು ವರ್ತನೆಗಳು ಯಾವುದೋ ಬೇರೂರಿದ್ದ ಅಸಂತೋಷವನ್ನು ಹೊರಪಡಿಸುತ್ತಿದ್ದವು. ಸಣ್ಣ ವಿಷಯಗಳಲ್ಲಿಯೂ ಸರೋಜ ಆನಂದರ ಮನಸ್ಸುಗಳಲ್ಲಿ ಹೊಂದಾಣಿಕೆಯಿಲ್ಲದೆ ಹೋಗುತ್ತಿತ್ತು. ತಮ್ಮ ಯೌವನದ ಜೋಡಿ ಜೀವನದಲ್ಲಿ ಆನಂದ ತನ್ನಷ್ಟು ಹರ್ಷಚಿತ್ತನಾಗಿಲ್ಲವೆಂದು ಸರೋಜಳಿಗೆ ಒಂದೊಂದು ಪ್ರಸಂಗದಲ್ಲಿಯೂ ಭಾವನೆಯಾಗುತ್ತಿತ್ತು. ಅವಳ ಭಾವನೆ ಬಲಿತು ಅಂತಹ ಊಹೆಗೆ ಕಿಂಚಿತ್ತೂ ಇಂಬಿಲ್ಲದ ಸಮಯದಲ್ಲಿಯೂ ಅದು ಅವಳ ಗಮನಕ್ಕೆ ಹೆಚ್ಚು ಗಾತ್ರದಲ್ಲಿ ಕಾಣುತ್ತಿತ್ತು

ಸರೋಜ ಆನಂದನೊಡನೆ ತನ್ನ ಸಹಜೀವನದ ಬಣ್ಣದ ಸ್ವಪ್ನವನ್ನು ಕಟ್ಟಿಕೊಂಡಿದ್ದಳು. ಸಂತೋಷದ ಕಡಲಿನ ಮೇಲೆ ತಾವಿಬ್ಬರೇ ಪ್ರೇಮದ ದೋಣಿಯಲ್ಲಿ ಸ್ವೇಚ್ಛೆಯಾಗಿ ಹುಟ್ಟುಹಾಕುತ್ತ ತೇಲಾಡಬಹುದೆಂದು ಅವಳು

ಊಹಿಸಿದ್ದಳು. ಅಲ್ಲಿ ಚಿಂತೆಯ ಮೋಡಗಳಾಗಲಿ ಅಥವಾ ಭಿನ್ನ ಮನಸ್ಸು ಗಳ ತಾಕಲಾಟದಿಂದ ಹುಟ್ಟಿದ ಸುಂಟರಗಾಳಿಯಾಗಲಿ ತಮ್ಮ ನೌಕೆಯನ್ನು ತಾಕಬಹುದೆಂದು ಅವಳು ಬಗೆದಿರಲಿಲ್ಲ. ಹೆಣ್ಣು ಹೃದಯದ ಆಸೆಗಳೆಲ್ಲ ಅವಳ ಹೃದಯದಲ್ಲಿದ್ದವು. ಅವುಗಳಲ್ಲಿ ಏನೋ ತಳಮಳ ಹುಟ್ಟಿತ್ತು. ಆನಂದನ ಹೃನ್ಮನಗಳು ಒಳ್ಳೆಯವೆಂದು ಅವಳಿಗೆ ನಂಬಿಕೆಯಿತ್ತು. ಆದರೆ ಯಾವ ರೀತಿಯಲ್ಲಿಯೂ ತನ್ನನ್ನು ನಲಿಸುವ ಉದ್ದೇಶದಿಂದ ಅವನು ನಡೆಯುತ್ತಿರ ಲಿಲ್ಲವೆಂಬುದನ್ನೂ ಅವಳು ಕಂಡುಕೊಂಡಿದ್ದಳು. ಆ ತಿಳಿವಳಿಕೆ ಅವಳ ಮನ ಸ್ಸನ್ನು ಆನಂದನ ವಿಷಯವಾಗಿ ಸ್ವಲ್ಪ ವಿಕಾರಗೊಳಿಸಿತ್ತು.

ಸರೋಜಳ ಜೋಡಿ ಬದುಕಿಗೆ ನಿರಾಶೆಯನ್ನುಂಟು ಮಾಡಬೇಕೆಂಬ ಮನಸ್ಸು ಆನಂದನಿಗಿರಲಿಲ್ಲ. ಮೊದಲ ಪ್ರೇಮದ ನಿರಾಶೆ ಅವನ ಜೀವನದ ಸಂತೋಷವನ್ನು ಘಾತಗೊಳಿಸಿತು. ಇಂದಿರೆಯ ಬಿಂಬವನ್ನು ತನ್ನ ಹೃದಯ ದಿಂದ ಅವನು ಕಿತ್ತೆಸೆಯಲಾರದವನಾಗಿದ್ದ. ಇಂದಿರೆ–ಸರೋಜ ಇಬ್ಬರ ಮೂರ್ತಿಗಳೂ ಅವನ ಮನಸ್ಸಿನೆದುರಿಗೆ ಅರಳಿದ ಎರಡು ಹೂವುಗಳಂತೆ ತೋರು ತ್ತಿದ್ದವು. ಅವನ ಮನಸ್ಸು ದುಂಬಿಯಂತೆ ಆ ಎರಡು ಹೂವುಗಳ ನಡುವೆ ಹಾರಾಡಿ ಒಂದು ಕಲ್ಪನೆಯ ಹೂವೆಂದು ಅರಿತು ಇನ್ನೊಂದು ಹೂವನ್ನು ಸೇರ ಬೇಕಾಗಿತ್ತು. ಸರೋಜ ತನ್ನ ಮನಸ್ಸಿನ ಕಡೆಗೆ ಕಣ್ಣನ್ನು ತೆರೆಯುತ್ತಿದ್ದುದನ್ನು ತಿಳಿದು ತಾನು ಮಾಡುತ್ತಿರುವುದೇನು ಎಂದು ಆನಂದ ಚಿಂತಿಸುತ್ತಿದ್ದ. ತನ್ನ ನಿಜ ಜೀವನವನ್ನು ಸಮಾಧಾನದಿಂದ ಸುಖಮಯ ಮಾಡಿಕೊಳ್ಳುವುದು ತನಗೆ ಉಳಿದಿರುವ ಒಂದೇ ದಾರಿಯೆಂದು ಅವನ ಅಂತರಂಗ ಹೇಳುತ್ತಿತ್ತು.

“ಈ ಸಂಜೆ ಸಿನೀಮಾಗೆ ಹೋಗೋಣ” ಎಂದು ಸರೋಜ ಸಲಹೆ ಮಾಡಿದಳು.

ಆನಂದ ಭೌತಶಾಸ್ತ್ರದ ಯಾವುದೋ ಒಂದು ಪುಸ್ತಕವನ್ನು ಓದುತ್ತಿದ್ದ. ಅವನ ಗಮನವನ್ನು ಬೇರೆ ಆಲೋಚನೆಗಳು ಸೆಳೆದಿದ್ದವು.

“ಆಗಲಿ” ಎಂದ, ಆನಂದ ಮುಗುಳ್ನಗೆಯನ್ನು ತಂದುಕೊಂಡು.

ಸರೋಜಳ ಮುಖದ ಮೇಲೆ ಸುಂಟರಗಾಳಿ ಸುಳಿದಾಡಿತು.

“ನಮ್ಮ ಸಂತೋಷಕ್ಕಾಗಿ ಎಲ್ಲ ಸಲಹೆಯನ್ನೂ ನಾನೇ ಮಾಡಬೇಕು. ನಿಮಗೆ ಬಹಳ ಅನಾಸಕ್ತಿ.”

"ಅನಾಸಕ್ತಿ ಯೋಗವನ್ನು ನಾನು ಹಿಡಿದಿಲ್ಲ, ಸರೋಜ." ಹಾಸ್ಯ ದಿಂದ ನುಡಿದರೂ ಅವನ ಹೃದಯಕ್ಕೆ ಸರೋಜಳ ಮಾತು ನಿಜವೆಂದು ಕಂಡಿತು.

"ಹಿಡಿಯದೆ ಏನು ? ಒಂದು ಸಲವಾದರೂ ನಮ್ಮ ಮನೋರಂಜನೆ ಗಾಗಿ ನೀವು ಮೊದಲ ಸಲಹೆಯನ್ನು ಮಾಡಿದ್ದೀರಾ ?"

ಆನಂದ ತನ್ನ ನೆಪವನ್ನು ಎಷ್ಟು ಹಿಂದಕ್ಕೆ ಚಾಚಿದರೂ ಅಂತಹ ಒಂದು ಪ್ರಸಂಗವೂ ಅವನಿಗೆ ಹೊಳೆಯಲಿಲ್ಲ. ನಿರುಪಾಯನಾಗಿ ಸೋಲಬೇಕಾಯಿತು. ಆದರೆ ಅದೃಷ್ಟ ಅವನನ್ನು ಆ ಸಿಕ್ಕಿನಿಂದ ಬಿಡಿಸಿ ಬೇರೆ ಸಿಕ್ಕಿನಲ್ಲಿ ತೊಡಗಿಸಿತು.

ಯಾರೋ ಹೊರಗಡೆ ಕಾಲಿಂಗ್‌ಬೆಲ್ಲನ್ನು ಒಂದೇ ಸಮ ಶಬ್ದ ಮಾಡಿ ದರು. ಆನಂದ ಬಾಗಿಲನ್ನು ತೆರೆದ. ರಾಜು ಆತುರನಾಗಿ ಬಂದು ಕುಳಿತು ಕೊಂಡ.

"ಐದೂವರೆಯಾಯಿತು, ಹೊರಡೋಣ ಆನಂದ. ಆರಕ್ಕೆ ಸರಿಯಾಗಿ ಕಾರ್ಯಕ್ರಮ" ಎಂದ ರಾಜು.

"ಯಾವ ಕಾರ್ಯಕ್ರಮ ?" ಎಂದ ಆನಂದ.

"ಈಚೆಗೆ ಏಕೋ ನಿನಗೆ ಮರವು ಹೆಚ್ಚಾಯಿತು. ಕಲಾಶಾಲೆಯಲ್ಲಿ ಈ ಹೊತ್ತು ಸರಸ್ವತೀ ಪೂಜೆ, ನೀನು ಅಧ್ಯಕ್ಷತೆ ವಹಿಸಿ ನಾಲ್ಕು ಮಾತನ್ನಾಡ ಬೇಕು ಎಂದು ಕಳೆದ ಭಾನುವಾರವೇ ನಿನ್ನನ್ನು ಕೇಳಿರಲಿಲ್ಲವೆ ?"

ಅದಕ್ಕೆ ತನ್ನ ಒಪ್ಪಿಗೆ ಕೊಟ್ಟಿದ್ದುದು ಆನಂದನಿಗೆ ಆಗ ನೆನಪಾಯಿತು. ಅವನು ಕಕ್ಕಾಬಿಕ್ಕಿಯಾದ. ಹೊರಡಲೇ ಬೇಕಾಯಿತು.

ಸರೋಜ ಕಾಫಿಬಟ್ಟಲನ್ನು ಮುಂದಿರಿಸಿದಳು. ಆತುರದಿಂದ ರಾಜು ಬಟ್ಟಲನ್ನು ಬರಿದುಮಾಡಿದ. ಸರೋಜಳೂ ಉಡುಪನ್ನು ಧರಿಸಿದ್ದುದನ್ನು ರಾಜು ನೋಡಿದ.

"ನೀವೂ ಬರಬಹುದಲ್ಲಾ ?" ಎಂದು ಅವಳನ್ನು ಆಹ್ವಾನಿಸುವ ಧ್ವನಿ ಯಲ್ಲಿ ಕೇಳಿದ.

"ನಾನು ಬೇರೆ ಕಡೆ ಹೋಗಬೇಕಾಗಿದೆ" ಎಂದು ವೋಜಿನ ಭಂಗಿ ಯಿಂದ ನುಡಿದು ರಾಜುವಿನ ಕರೆಯನ್ನು ತಪ್ಪಿಸಿಕೊಂಡಳು.

ಸರೋಜ ನಿರಾಶೆ ತುಂಬಿದ ಕಣ್ಣನ್ನು ಆನಂದನ ಕಡೆಗೆ ಬೀರಿದಳು.

‘ ನನ್ನನ್ನು ಕ್ಷಮಿಸು ’ ಎನ್ನುವಂತಿತ್ತು ಆ ನೋಟ.
ಆನಂದ ರಾಜುವಿನ ಜೊತೆಯಲ್ಲಿ ಮನೆಯಿಂದ ಹೊರಟ.

೨೭

ಕಮಲಮ್ಮನವರು ಸರೋಜಳನ್ನು ಕಂಡು ಎರಡು ವಾರ ಆಗಿದ್ದಿತು. ಕೆಲವು ತಿಂಗಳು ಕಳೆದುಹೋಗಿದ್ದರೂ ಮಗಳ ಅಗಲಿಕೆ ಅವರಿಗೆ ಹೊಸ ಅನುಭವವಾಗಿಯೇ ಉಳಿಯಿತು.

“ ಈ ದಿನ ಭಾನುವಾರ. ಆನಂದನಿಗೂ ವಿರಾಮ. ಸರೋಜಳನ್ನು ಕರೆದುಕೊಂಡು ಬರೋಣ. ಎರಡು ದಿನ ಇಲ್ಲೇ ಇರಲಿ ” ಎಂದು ಬೆಳಗಿನಿಂದ ಸುಂದರರಾಯರನ್ನು ಅವರು ನಾಲ್ಕಾರು ಬಾರಿ ಕೇಳಿದರು. ಸುಂದರರಾಯರಿಗೂ ಸರೋಜಳನ್ನು ನೋಡಬೇಕೆನಿಸಿತು.

“ ಆನಂದ ಈ ವಾರದಲ್ಲಿ ಒಂದು ದಿನ ಸರೋಜಳನ್ನು ಕರೆದುಕೊಂಡು ಬರಬಹುದಾಗಿತ್ತು ” ಎಂದು ಕಮಲಮ್ಮನವರು ತಮ್ಮ ಇಷ್ಟವನ್ನು ಹೊರಗೆಡಹಿದರು.

“ ಕಾಲೇಜಿನ ಕೆಲಸದಲ್ಲಿ ಅವನಿಗೆ ವಿರಾಮ ಇದೆಯೋ ಇಲ್ಲವೋ. ನಾವೇ ಸಂಜೆ ಹೋಗಿ ಬಂದರಾಯಿತು ” ಎಂದು ಸುಂದರರಾಯರು ಆನಂದನ ಪರವಾಗಿ ಮಾತನಾಡಿದರು.

ಕಮಲಮ್ಮನವರು ಬೆಳಗಿನಿಂದಲೂ ಸಂಜೆಯ ತಮ್ಮ ಕಾರ್ಯಕ್ರಮಕ್ಕಾಗಿ ಸಿದ್ಧತೆಮಾಡಿಕೊಂಡರು. ಬಗೆಬಗೆಯ ತಿಂಡಿಗಳನ್ನು ಮಾಡಿಟ್ಟರು.

“ ಆಗಲೆ ಐದೂವರೆ ಗಂಟೆ ಆಯಿತು, ಇನ್ನು ಹೊರಡೋಣ ” ಎಂದು ಅವಸರ ಮಾಡಿದರು. ಮಗಳನ್ನು ನೋಡುವುದಕ್ಕಾಗಿ ಹಂಬಲಿಸುತ್ತಿದ್ದುದನ್ನು ತಿಳಿದು ಸುಂದರರಾಯರು ಅಂತರ್ಯದಲ್ಲಿಯೇ ಸಂತೋಷಗೊಂಡರು. ಅವರು ಕಾರನ್ನು ಮನೆಯ ಮುಂದೆ ನಿಲ್ಲಿಸಿದರು. ಕಮಲಮ್ಮನವರು ಹತ್ತುತ್ತಲೆ ಅದು ಆನಂದನ ಮನೆಯ ಕಡೆಗೆ ಓಡಿತು.

ಆನಂದ ಮನೆಯನ್ನು ಬಿಟ್ಟು ಸುಮಾರು ಅರ್ಧ ಗಂಟೆಯಾಗಿತ್ತು. ಸರೋಜಳ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು. ಮಧ್ಯಾಹ್ನವೆಲ್ಲ ಅವಳಿಗೆ ಬೇಸರವಾಗಿತ್ತು. ಆ ಬೇಸರವನ್ನು ಕಳೆಯುವುದು ಅವಳಿಗೆ ಕಷ್ಟವಾಯಿತು.

ಗಡಿಯಾರವನ್ನೇ ನೋಡುತ್ತ ಸುಮ್ಮನೆ ಕುಳಿತಿದ್ದಳು. ಅವಳ ಬಾಡಿದ ಮುಖ ನಾಲ್ಕು ಗಂಟೆಯ ತಾಡನವನ್ನೇ ಕಾಯುತ್ತಿತ್ತು. ಐದು, ಆರು, ಏಳು ನಿಧಾನವಾಗಿ ಠಣ್, ಠಣ್, ಠಣ್....ಎಂದು ಹೊಡೆದಂತೆಲ್ಲಾ ಅವಳ ಹೃದಯದಲ್ಲಿ ಅಸಂತೋಷದ ತರಂಗಗಳು ಹರಡಿ ದಂಡೆಗೆ ಅಪ್ಪಳಿಸುತ್ತಿದ್ದವು. ಆನಂದ ಬಂದ ಮೇಲೆ ಆ ದಿನ ಅವನೆದುರು ತನ್ನ ಅಂತರಂಗವನ್ನು ತೋಡಿ ಕೊಂಡಿದ್ದಳು. ಅವನು ಅದಕ್ಕಾಗಿ ಮನನೊಂದಿರಬಹುದು. ಅವನ ಮುಖದ ಮೇಲೆ ಅಸಂತೋಷದ ತೆರೆಯಿತ್ತು. ಮನೋಲ್ಲಾಸಕ್ಕಾಗಿ ತಾನೇ ಸಿನಿಮಾಕ್ಕೆ ಹೋಗುವ ಸಲಹೆಯನ್ನು ಕೊಡಬೇಕಾಯಿತು. ಆ ಅಲ್ಪ ವಿನೋದವೂ ಅವಳ ಪಾಲಿಗಿಲ್ಲದೆ ಹೋಯಿತು. ಆ ದಿವಸ ನಡೆದ ಪ್ರಸಂಗಗಳನ್ನೆಲ್ಲಾ ಅವಳು ನೆನೆದಳು.

'ಈಚೆಗೆ ನಿನಗೆ ಮರವು ಹೆಚ್ಚಾಯಿತು' ಎಂದ ರಾಜುವಿನ ಮಾತು ಅವಳ ಮನದಲ್ಲಿ ಸುತ್ತಾಡಿ ಅಲ್ಲಿ ಎದ್ದಿದ್ದ ವಿಚಾರತರಂಗಗಳನ್ನು ಕಲಕಿತು. ಸರೋಜಳಿಗೆ ಆನಂದನೊಂದು ಸಮಸ್ಯೆಯಾಗಿ ಉಳಿದ.

ಮಂಚದ ಮೇಲೆ ಮಲಗಿ ಅದೆಷ್ಟೋ ಹೊತ್ತು ಉರುಳಿಹೋದಂತೆ ಎನಿಸುತ್ತಿತ್ತು ಸರೋಜಳಿಗೆ. ಹೊರಗಡೆ ಕಾರು ಕಿರುಚುತ್ತಿತ್ತು. ಅವಳು ದಿಗ್ಗನೆದ್ದು ಕೆದರಿದ ಕೂದಲನ್ನು ಸರಿಮಾಡಿಕೊಂಡು ಬಾಗಿಲನ್ನು ತೆರೆದಳು. ತಕ್ಷಣ ಅವಳ ಮುಖ ಅರಳುಮಲ್ಲಿಗೆಯಾಯಿತು. ಸುಂದರರಾಯರೂ ಕಮಲಮ್ಮನವರೂ ಒಳಗೆ ಪ್ರವೇಶಿಸಿದರು.

ಕಮಲಮ್ಮನವರು ಸರೋಜ ಸ್ವಲ್ಪ ಪೆಚ್ಚಾಗಿದ್ದುದನ್ನು ಕಂಡು ಆದರದಿಂದ ಕೇಳಿದರು: "ಏಕೆ ಸರೋಜಾ, ಮಂಕಾಗಿದ್ದೀ? ಮೈಯಲ್ಲಿ ಸ್ವಸ್ಥ ಇಲ್ಲವೇ?"

"ಏನಿಲ್ಲಮ್ಮ, ಸುಮ್ಮನೆ ಮಲಗಿದ್ದೆ."

"ಸರೋಜಾ" ಎಂದು ಸುಂದರರಾಯರು ಕೊಟಡಿಯಿಂದ ಎರಡು ಸಲ ಕೂಗಿದರು.

"ಹೋಗು ಮಗು, ಅಪ್ಪನ ಜೊತೆಯಲ್ಲಿ ಮಾತಾಡು. ನಾನು ಕಾಫಿ ಮಾಡುತ್ತೇನೆ" ಎಂದು ಕಮಲಮ್ಮನವರು ವಾತ್ಸಲ್ಯದಿಂದ ನುಡಿದರು.

ತಾಯಿಯ ಪ್ರೀತಿಯನ್ನಳೆಯಲಾರದೆ ಸರೋಜಳ ಕಣ್ಣಲ್ಲಿ ನೀರೂರಿತು.

" ಆನಂದ ಎಲ್ಲಿ, ಸರೋಜಾ ? " ಎಂದರು ಸುಂದರರಾಯರು.

" ರಾಜುವಿನ ಕಲಾಮಂದಿರದಲ್ಲಿ ಸರಸ್ವತೀ ಪೂಜೆಯಂತೆ. ಅರ್ಧ ಗಂಟೆ ಹಿಂದೆ ರಾಜುವಿನ ಜೊತೆಯಲ್ಲಿ ಹೋದರು " ಎಂದು ಸರೋಜ ತಿಳಿಸಿದಳು.

" ಚೆನ್ನಾಗಿ ಸಂಸಾರ ಮಾಡಿಕೊಂಡಿದ್ದೀಯಾ, ಸರೋಜಾ ? " ಎಂದು ಸುಂದರರಾಯರು ಅಭಿಮಾನದಿಂದ ಕೇಳಿದರು.

" ಚೆನ್ನಾಗಿದ್ದೇವೆ " ಎಂಬ ಉತ್ತರ ಸರೋಜಳ ಮುಖದ ಮೇಲೆ ಸುಳಿಯಿತು. ಆಗಿನ ಅವಳ ಮುಖಭಾವವನ್ನು ಅವಳ ಹೃದಯ ಪ್ರಶ್ನಾರ್ಥಕ ವಾಗಿ ಕಂಡಿತು.

" ಆನಂದನ ಮನಸ್ಸು ತಿಳಿದು ನಡೀಬೇಕಮ್ಮ. ನಿನ್ನ ಮನಸ್ಸೂ ಅವನ ಮನಸ್ಸೂ ಯಾವಾಗಲೂ ಒಂದಾಗಿರಬೇಕು. ನೀನು ಜಾಣೆ. ಅದನ್ನೆಲ್ಲಾ ನಿನಗೆ ಹೇಳಬೇಕಾದ್ದೇ ಇಲ್ಲ " ಎಂದು ಸುಂದರರಾಯರು ಲೋಕಾಭಿರಾಮದ ಬುದ್ಧಿವಾದವನ್ನು ಹೇಳಿದರು.

ಆ ಮಾತನ್ನು ಕೇಳಿ ಸರೋಜಳಿಗೆ ತನ್ನ ಸಮಸ್ಯೆ ಮತ್ತೂ ಕಠಿಣ ವಾಯಿತು. ಆನಂದನ ಮನಸ್ಸನ್ನು ಅರ್ಥಮಾಡಿಕೊಳ್ಳುವುದೇ ಅವಳಿಗೆ ಕಷ್ಟ ವಾಗಿತ್ತು. ಅವನ ಮನಸ್ಸೂ ತನ್ನ ಮನಸ್ಸೂ ಒಂದಾಗುವುದು ಹೇಗೆ ಎಂಬ ಸಮಸ್ಯೆ ಬಗೆಹರಿಯದೆ ಸುಮ್ಮನಿದ್ದಳು.

" ಕಮಲು ನಿನ್ನನ್ನು ವಾರವೂ ಅಗಲಿರಲಾರಳು. ಕಳೆದ ಭಾನುವಾರ ದಿಂದ ನಿನ್ನನ್ನು ನೋಡಬೇಕು ಎಂದು ತಪಿಸಿದಳು. ಎರಡು ದಿನ ಮನೆಗೆ ಕರೆದುಕೊಂಡು ಹೋಗಬೇಕು ಎಂದಿದ್ದಾಳೆ."

" ಅಲ್ಲಿ ಎರಡು ದಿನ ಇರಬೇಕು ಎಂದು ನನಗೂ ಆಸೆಯಾಗಿದೆ " ಎಂದು ಉತ್ಸಾಹದಿಂದ ಮರು ಹೇಳಿದಳು.

' ಇಲ್ಲಿ ನನಗೆ ಯಾರೂ ಸ್ನೇಹಿತರಿಲ್ಲ, ಬೇಸರವಾಗಿದೆ ' ಎಂಬಂತೆ ಅವಳು ನೋಟವನ್ನು ಬೀರಿದಳು.

" ಆನಂದ ಬರಲಿ, ಅವನನ್ನು ಕೇಳಿ ಹೊರಡುವೆಯಂತೆ."

ಸಮಾರಂಭ ಮುಗಿಯಲು ರಾಜುವಿಗೆ ತಿಳಿಸಿ ಆನಂದ ವೇಗವಾಗಿ ನಡಿಗೆ ಹಾಕಿದ. ದಾರಿಯುದ್ದಕ್ಕೂ ಅವನ ಮನಸ್ಸಿನಲ್ಲಿ ತುಮುಲ ನಡೆಯುತ್ತಿತ್ತು. ಸರೋಜಳಿಗೆ ಆ ದಿನ ಬಹಳ ನಿರಾಶೆಯಾಗಿದ್ದುದಕ್ಕೆ ತಾನೇ ಬಹು ಮಟ್ಟಿಗೆ ಕಾರಣನಾಗಿದ್ದ. ಆ ರೀತಿ ಆತ್ಮವಿಮರ್ಶೆಯನ್ನು ಮಾಡಿದಾಗ

ತಾನೊಬ್ಬ ತಪ್ಪಿತಸ್ಥನೆಂದು ಅವನಿಗೆ ಭಾವನೆಯಾಯಿತು. ಮನೆ ಸೇರಿದಾಗ ಗಂಟೆ ಎಂಟಾಗಿತ್ತು.

ಮನೆಯ ಮುಂದೆ ಸುಂದರರಾಯರ ಕಾರು ನಿಂತಿತ್ತು. ಆನಂದನಿಗೆ ಏನೂ ಅರ್ಥವಾಗಲಿಲ್ಲ. ಸರೋಜ ಬಾಗಿಲನ್ನು ತೆರೆದಳು. ಅವಳ ಮುಖದಲ್ಲಿ ಹರ್ಷದ ಹೊನಲಿತ್ತು. ಒಳಗೆ ಹೋಗುತ್ತಲೇ ಹಿಂದೂ ಪತ್ರಿಕೆಯನ್ನವಲೋಕಿಸುತ್ತ ಕುಳಿತಿದ್ದ ಸುಂದರರಾಯರು ಕಂಡರು. ಕಮಲಮ್ಮನವರು ಒಳಗೆ ಓಡಾಡುತ್ತಿದ್ದರು.

ಆನಂದ ಆಸನದಲ್ಲಿ ಕುಳಿತುಕೊಳ್ಳುತ್ತಲೇ ಸರೋಜ ಕಾಫಿಯನ್ನು ತಂದಿಟ್ಟಳು. ಸುಂದರರಾಯರು ಮಾತನ್ನಾರಂಭಿಸಿದರು :

" ರಾಜು ಈಚೆಗೆ ಹೆಸರನ್ನು ಗಳಿಸಿದ್ದಾನೆ. ಅವನ ಚಿತ್ರಕ್ಕೆ ಅಖಿಲ ಭಾರತ ಕಲಾಸ್ಪರ್ಧೆಯಲ್ಲಿ ಬಹುಮಾನ ಬಂತಂತೆ."

" ಅದಕ್ಕಾಗಿಯೇ ಈ ಸಂಜೆ ಅವನ ಹೊಸ ಕಟ್ಟಡದಲ್ಲಿ ಉತ್ಸವ ನಡೆಯಿತು. ಅವನ ಶಿಷ್ಯರಲ್ಲಿಯೂ ಒಳ್ಳೆಯ ಕಲಾವಿದರಿದ್ದಾರೆ."

" ಹಣವನ್ನೇನೋ ರಾಜು ಸಂಪಾದಿಸುತ್ತಾನೆ. ಆದರೆ ಅಷ್ಟನ್ನೂ ವ್ಯರ್ಥವಾಗಿ ಚೆಲ್ಲಿಬಿಡುತ್ತಾನೆ. ವಿವೇಕ ಸಾಲದು. ಅಷ್ಟು ದೊಡ್ಡ ಮನೆಯನ್ನು ಮಾರಿ ಆ ಕಟ್ಟಡವನ್ನು ಕಟ್ಟಿದ್ದಾನೆ."

ಆನಂದನಿಗೆ ಆ ಮಾತು ನಿಜವೆನಿಸಿತು. ಸುಂದರರಾಯರು ರಾಜುವಿನ ವಿಷಯ ಮುಗಿಸಿ, ತಾವು ಮನೆಗೆ ಬಂದ ಉದ್ದೇಶವನ್ನು ತಿಳಿಸಿದರು.

" ಸರೋಜ ಏನೂ ತಿಳಿಯದ ಹುಡುಗಿ. ಏನೂ ತಿಳಿಯದೆ ಅವರಮ್ಮನ ಮಡಿಲಲ್ಲಿ ಬೆಳೆದಿದ್ದಾಳೆ. ಬೇಕಾದಾಗ ನೀನೇ ಅವಳಿಗೆ ತಿಳಿವಳಿಕೆಯನ್ನು ಹೇಳಬೇಕು, ಆನಂದ."

ಆ ಮಾತನ್ನು ಕೇಳಿದಾಗ ಆನಂದನಿಗೆ ತನ್ನ ಅಂತರ್ಯವನ್ನು ಯಾರೋ ತಿವಿದಂತಾಯಿತು. ' ಅಪರಾಧಿ ನಾನು ! ' ಎನ್ನುವಂತೆ ಅವನು ಕಾಣಿಸಿದ.

" ಕಮಲು ಒಂದು ವಾರದಿಂದ ಹಂಬಲಿಸುತ್ತಿದ್ದಾಳೆ. ಎರಡು ದಿನ ಅವಳನ್ನು ಕರೆದುಕೊಂಡು ಹೋಗುತ್ತೇವೆ " ಎಂದು ತಮ್ಮ ಇಷ್ಟವನ್ನು ಸೂಚಿಸಿದರು.

ಆ ಸೂಚನೆಯನ್ನು ಕೇಳಿ ಆನಂದನಿಗೆ ಏನೂ ತೋಚದಂತಾಯಿತು.

ಅದರಲ್ಲಿ ಏನಾದರೂ ಅನ್ಯಭಾವನೆಯಿರಬಹುದೇ ಎಂದು ಯೋಚಿಸಿದ. ಆದರೆ ಯಾರ ಮುಖಗಳಲ್ಲಿಯೂ ಅಂತಹ ಭಾವನೆಯಿರಲಿಲ್ಲ. ಅವನು ಸರೋಜ ಳನ್ನು ಹೃದಯದಲ್ಲಿಯೇ ವಂದಿಸಿದ.

ಆನಂದನ ಹೃದಯದಲ್ಲಿ ತಳಮಳವಿದ್ದರೂ ನಗು ನಲಿವುಗಳನ್ನು ಹೊರ ಸೂಸಿದ. ಸುಂದರರಾಯರ ಸಲಹೆಗೆ ಅವನು ಒಪ್ಪಲೇ ಬೇಕಾಯಿತು. ಆ ದಿನ ಅನಿರೀಕ್ಷಿತವಾಗಿ ನಡೆದ ಪ್ರಸಂಗಗಳಿಗಾಗಿ ಸರೋಜಳನ್ನು ಸಮಾಧಾನಪಡಿಸು ವುದಕ್ಕೂ ಆನಂದನಿಗೆ ಅವಕಾಶ ಸಿಕ್ಕಲಿಲ್ಲ.

ಕಾರು ನೇರವಾಗಿ ರಸ್ತೆಯಲ್ಲಿ ದೂರ ದೂರ ಹೋಯಿತು. ಕತ್ತಲಿನಲ್ಲಿ ಅದು ಮರೆಯಾಗುಗುವ ವರೆಗೂ ಆನಂದನ ದೃಷ್ಟಿ ಬೇರೆ ಕಡೆ ತಿರುಗಲಿಲ್ಲ.

## ೨೮

ಇಂದಿರೆ ಆ ದಿನ ಶಿಶುವಿಹಾರದಲ್ಲಿ ಚಿತ್ರಪಟಗಳನ್ನು ನೋಡುತ್ತಿದ್ದಳು. ಚಂದ್ರು ಒಂದು ಕಾಗದವನ್ನು ಹಿಡಿದುಕೊಂಡು ಓಡಾಡುತ್ತಿದ್ದ. ಇಂದಿರೆಗೆ ಚಂದ್ರುವಿನ ಪರಿಚಯವಿತ್ತು.

ಚಂದ್ರು, ಭಾರತ ಶಿಶುವಿಹಾರದ ಒಬ್ಬ ಹಳೆಯ ವಿದ್ಯಾರ್ಥಿ. ಅವನು ದಿಕ್ಕಿಲ್ಲದ ಹುಡುಗ. ಆಗ ಕಾರ್ಯದರ್ಶಿನಿಯಾಗಿದ್ದ ಪದ್ಮಾವತೀದೇವಿ ಅನಾಥನೆಂದು ಔದಾರ್ಯ ತೋರಿಸಿ ಅವನಿಗೆ ಉಚಿತ ಶಿಕ್ಷಣ ಕೊಟ್ಟರು. ಅವನು ನಯವಿನಯಗಳಿಂದ ಎಲ್ಲರನ್ನೂ ಒಲಿಸಿಕೊಂಡಿದ್ದ. ಅಲ್ಲಿಯ ಶಿಕ್ಷಣ ಸೌಕರ್ಯವನ್ನು ಪೂರ್ತಿಯಾಗಿ ಬಳಸಿಕೊಂಡು ತನ್ನ ಸ್ವಾಭಾವಿಕವಾದ ಅಭಿ ರುಚಿಯನ್ನು ಅರಳಿಸಿಕೊಂಡಿದ್ದ. ಚಿತ್ರಕಲೆಯಲ್ಲಿ ಅವನಿಗಿದ್ದ ಸುಪ್ತವಾದ ಶಕ್ತಿಗಳನ್ನು ರಾಜು ಅಂಕುರದಲ್ಲಿಯೇ ಕಂಡುಕೊಂಡಿದ್ದ. ಅವನನ್ನು ಆಗಾಗ್ಗೆ ತನ್ನ ಕಲಾಶಾಲೆಗೆ ಕರೆದು ಹೆಚ್ಚಿನ ಸಲಹೆಗಳನ್ನು ಕೊಡುತ್ತಿದ್ದ. ಹುಡುಗ ಬೆಳೆದನಂತರ ಅವನಿಗೆ ಒಂದು ಜೀವನೋಪಾಯ ಬೇಕಾಯಿತು. ರಾಜು ತನ್ನ ಕಲಾಶಾಲೆಯಲ್ಲಿ ಅವನಿಗೆ ಒಂದು ಕೆಲಸವನ್ನು ದೊರಕಿಸಿಕೊಟ್ಟು ಅವನ ಒಂಟಿ ಜೀವನ ನಡೆಯಲು ಸಹಾಯ ಮಾಡಿದ್ದ. ರಾಜುವಿನ ಆಶ್ರಯ ದಲ್ಲಿ ಚಂದ್ರು ತನ್ನ ಕಲಾಸಕ್ತಿಯನ್ನು ಬಲಿಸಿಕೊಂಡು ತನ್ನ ಕುಂಚದಿಂದ ತಾನು ಸ್ವತಂತ್ರ ಜೀವನವನ್ನು ನಡೆಸುತ್ತಿದ್ದ. ಅವನು ರಾಜುವಿಗೆ ಆಪ್ತಶಿಷ್ಯ

ನಾಗಿದ್ದ. ಭಾನುವಾರ ಸರಸ್ವತೀ ಪೂಜೆಯ ಸಮಯದಲ್ಲಿ ಅವನೂ ತನ್ನ ಕೆಲವು ಚಿತ್ರಗಳನ್ನು ಪ್ರದರ್ಶಿಸಿದ್ದ.

" ಏನು ಬೇಕಾಗಿತ್ತು, ಚಂದ್ರು ? " ಎಂದು ಇಂದಿರೆ ಕೇಳಿದಳು.

" ಸುಶೀಲಾಬಾಯಿಯವರಿಗೆ ಒಂದು ಕಾಗದ ಕೊಡಬೇಕಾಗಿತ್ತು. ರಾಜು ಕಳಿಸಿದ್ದಾರೆ " ಎಂದು ಚಂದ್ರು ಉತ್ತರ ಕೊಟ್ಟ.

" ಸುಶೀಲಾಬಾಯಿ ಯಾವುದೋ ಮೀಟಿಂಗಿಗೆ ಹೋಗಿದ್ದಾರೆ. ಕಾಗದ ಕೊಡು, ನಾನು ತಲಪಿಸುತ್ತೇನೆ."

ಚಂದ್ರು ಕಾಗದವನ್ನು ಇಂದಿರೆಯ ಕೈಗೆ ಕೊಟ್ಟು ಹೊರಡುವುದರಲ್ಲಿದ್ದ. ತಕ್ಷಣ ಇಂದಿರೆಗೆ ಒಂದು ವಿಷಯ ನೆನಪಾಯಿತು.

" ಹೊಸ ಕಟ್ಟಡದಲ್ಲಿ ಆರಂಭೋತ್ಸವ ವಿಜೃಂಭಣೆಯಿಂದ ನಡೆದಿರಬೇಕು " ಎಂದು ವಿಷಯವನ್ನು ತೆರೆದಳು.

" ಬಹಳ ಸಂಭ್ರಮದಿಂದ ನಡೆಯಿತು. ಅಧ್ಯಕ್ಷರ ಭಾಷಣ ವಿಚಾರ ಪೂರಿತವಾಗಿತ್ತು " ಎಂದು ಅಧ್ಯಕ್ಷಭಾಷಣವನ್ನು ಚಂದ್ರು ಹೊಗಳಿದ.

ಆನಂದ ಅಧ್ಯಕ್ಷತೆಯನ್ನು ವಹಿಸಿದ್ದುದು ಇಂದಿರೆಗೆ ಗೊತ್ತಿದ್ದಿತು. ಅವನ ಭಾಷಣವನ್ನು ಚಂದ್ರು ಮೆಚ್ಚಿಕೊಂಡಿದ್ದುದನ್ನು ಕೇಳಿ ಇಂದಿರೆಯ ಮನಸ್ಸು ಪ್ರಫುಲ್ಲವಾಯಿತು. ಆನಂದನ ಇಡಿಯ ವ್ಯಕ್ತಿತ್ವವೇ ಅವಳ ಕಣ್ಣೆದುರು ನಿಂತಿತು. ಅವಳ ಫಲಿಸದ ಹಂಬಲ ಮುಖದ ಮೇಲೆ ತೆರೆತೆರೆಯಾಗಿ ಮೂಡಿ ಅಳಿಸಿ ಹೋಯಿತು.

" ಭಾಷಣದಲ್ಲಿ ಅವರು ಏನು ಹೇಳಿದರು ? " ಎಂದಳು ಇಂದಿರೆ.

ಚಂದ್ರು ಒಂದು ಪುಟ್ಟ ಭಾಷಣವನ್ನೇ ಮಾಡಬೇಕಾಯಿತು. ಆನಂದ ತನ್ನ ಭಾಷಣದಲ್ಲಿ ಕಲೆಯ ವಿಷಯದಲ್ಲಿ ಪ್ರೌಢವಾದ ಭಾವನೆಗಳನ್ನು ಹರಿಸಿದ್ದ. ಪ್ರಾಚೀನ ಗ್ರೀಕರ ಸಂಸ್ಕೃತಿಯ ಅರುಣೋದಯದಿಂದ ಆಧುನಿಕ ಸಂಸ್ಕೃತಿಯವರಿಗೆ ಕಲೆಯ ಬೆಳವಣಿಗೆಯ ಇತಿಹಾಸವನ್ನು ಸ್ಥೂಲವಾಗಿ ರೂಪಿಸಿದ್ದ. ಆ ಇತಿಹಾಸದಲ್ಲಿ ಕಲೆಯ ನಾನಾಮುಖಗಳ ಬೆಳವಣಿಗೆ, ಆದರ್ಶಗಳ ಏಳುಬೀಳುಗಳು, ಸೋಲು ಸಾಧನೆಗಳು—ಇವುಗಳನ್ನೆಲ್ಲಾ ಕ್ರಮವಾಗಿ ವಿಶದಪಡಿಸಿದ್ದ.

ಭಾವನಾಮಯವಾದ ಮನುಷ್ಯನ ಅಂತರಂಗಪ್ರಪಂಚವನ್ನು ಹೊರಗೆಡ

ಹುವ ಶಕ್ತಿ, ಕಲೆ. ತನ್ನ ಊಹೆಯಲ್ಲಿ ಸುಳಿಯುವ ಗಾಳಿಗೋಪುರವನ್ನು ಕಲಾವಿದನು ಸತ್ಯಪ್ರಪಂಚದಲ್ಲಿ ಕಾಣದಿರಬಹುದು. ಆದರೆ ಅದನ್ನು ತಾನೇ ಕಲಾಸಾಮಗ್ರಿಗಳಿಂದ ಸೃಷ್ಟಿಸಿಕೊಂಡು ಅಲ್ಲಿ ಅವನು ಆತ್ಮಸಂತೋಷವನ್ನು ಸಾಧಿಸಿಕೊಳ್ಳಬಲ್ಲ. ಆ ಮಾತನ್ನಾಡಿದಾಗ ತನ್ನ ಊಹಾಪ್ರಪಂಚದಲ್ಲಿ ಆನಂದ ಸ್ವೇಚ್ಛೆಯಾಗಿ ಹಾರಾಡಿದ್ದ.

ಬದುಕಿನಲ್ಲಿ ನಿರಾಶೆ, ಸೋಲು, ನೋವು, ಕಹಿ, ಅಸಂತೋಷಗಳೇ ಹೆಚ್ಚು. ಬಾಳಿನ ಉದ್ದವಾದ ದಾರಿಯಲ್ಲಿ ಮೈಲಿಗಲ್ಲಿನಂತೆ ಸುಖ ಆಗಾಗ್ಗೆ ಸ್ವಲ್ಪ ಸ್ವಲ್ಪವಾಗಿ ಸಿಗುವ ಅನುಭವ. ಅಂತಹ ಸತ್ಯಚಿತ್ರಗಳನ್ನು ಸೃಷ್ಟಿಸುವಾಗ ಕಲಾವಿದನ ಪ್ರತಿಭೆ ಮುಗಿಲಿಗೇರುವುದು. ಆ ಮಾತುಗಳು ಅವನ ಬಾಯಿಂದ ಸರಾಗವಾಗಿ ಬಂದವು. ತನ್ನ ಅನೇಕ ಚಿತ್ರಗಳಲ್ಲಿ ರಾಜು ಅಂತಹ ಭಾವಗಳನ್ನು ಪ್ರತಿಫಲಿಸಿದ್ದ. ರಾಜು ಚಿತ್ರಿಸಿದ್ದ ಕೆಲವು ಚಿತ್ರಗಳ ನಿದರ್ಶನಗಳನ್ನು ಆನಂದ ಸೂಚಿಸಿದ್ದ. ಅಖಿಲಭಾರತದ ಕಲಾಪಾರಿತೋಷಕ ಅಂತಹವನಿಗೆ ದೊರೆತುದು ಯುಕ್ತವೆಂದು ಆನಂದ ರಾಜುವನ್ನು ಪ್ರಶಂಸಿಸಿದ್ದ.

ಚಂದ್ರು ಮಾಡಿದ ವಿವರಣೆ ಕೇಳಿ ಇಂದಿರೆಯ ಹೃದಯ ಹಿಗ್ಗಿ, ಮರು ಕ್ಷಣವೇ ಕುಗ್ಗಿತು. ಆನಂದ ಜೀವನದಲ್ಲಿ ನಿರಾಶಾವಾದಿಯಾಗಲು ಕಾರಣವೇ ನೆಂಬುದು ಇಂದಿರೆಯ ಯೋಚನೆಗಳನ್ನು ಕೆದರಿತು. ಮಾಸಿಹೋಗಿದ್ದ ಅನೇಕ ಚಿತ್ರಗಳು ಮತ್ತೆ ಬಣ್ಣ ತಾಳಿ ಮುಂದೆ ನಿಂತವು. ಆನಂದನ ಬಿಂಬ ಜೀವ ತಾಳಿ ' ಇಷ್ಟು ಬೇಗ ನನ್ನನ್ನು ಮರೆತೆಯಾ, ಇಂದಿರೆ ? ' ಎಂದಂತೆ ಅವಳಿಗೆ ಭ್ರಾಂತಿಯಾಯಿತು.

೨೯

ಸುಂದರರಾಯರು ಸರೋಜಳೊಡನೆ ಚದುರಂಗದ ಆಟವನ್ನು ಆಡುತ್ತಿದ್ದರು. ಸರೋಜ ಚದುರಂಗದಲ್ಲಿ ಚದುರೆ. ಆ ದಿನ ಅವಳ ಬುದ್ಧಿಗೆ ಮಂಕು ಮುಸುಕಿತ್ತು. ಆಟದಲ್ಲಿ ಬಹಳ ತಪ್ಪು ಚಲನೆಗಳನ್ನು ಮಾಡಿದಳು. ಸುಂದರ ರಾಯರು ಅರ್ಧ ಘಂಟೆಯಲ್ಲಿ ಅವಳ ಕಾಯಿಗಳನ್ನು ಎರಡು ಬಾರಿ ಕಟ್ಟಿದರು.

" ಏನು ಸರೋಜಾ, ನಿನ್ನ ಮನಸ್ಸು ಆಟದ ಕಡೆಗೆ ತಿರುಗಿದೆಯೋ, ಆನಂದನ ಕಡೆಗೆ ತಿರುಗಿದೆಯೋ ? " ಎಂದು ಸುಂದರರಾಯರು ಹಾಸ್ಯ ಮಾಡಿದರು.

ಮತ್ತೊಂದು ಆಟವನ್ನು ಆರಂಭಿಸುವುದರಲ್ಲಿಯೆ ಕಾಫಿ ಬಂದಿತು. ಸುಂದರರಾಯರು ಅದನ್ನು ಕುಡಿದು ಸ್ವಲ್ಪ ಹೊತ್ತು ವಿಶ್ರಾಂತಿ ಪಡೆಯಲು ತಮ್ಮ ಕೊಟಡಿಗೆ ಹೋದರು.

ಸುಂದರರಾಯರು ಸರೋಜಳನ್ನು ಕೇಳಿದ ಪ್ರಶ್ನೆಯಲ್ಲಿ ನಿಜಾಂಶವಿತ್ತು. ಅವಳ ಮನಸ್ಸು ಆಟದ ಕಡೆಗೆ ತಿರುಗಿರಲಿಲ್ಲ, ಆನಂದನ ಕಡೆಗೇ ತಿರುಗಿತ್ತು. ಅವಳ ಮನಸ್ಸು ಹಿಂದಿನ ಸಂಜೆಯ ಪ್ರಸಂಗಗಳನ್ನು ಮೆಲಕುಹಾಕುತ್ತಿತ್ತು. ಮನಸ್ಸಿಗಾದ ಗಾಯ ಪೂರ್ತಿ ಮಾಗಿರಲಿಲ್ಲ.

'ನನ್ನ ಹೃದಯವನ್ನು ತೋಡಿಕೊಂಡುಬಿಡಲೇ' ಎಂದು ಸರೋಜಳಿಗೆ ಒಂದೊಂದು ಸಮಯ ಅನ್ನಿಸುತ್ತಿತ್ತು. ಆದರೂ ಮನಸ್ಸನ್ನು ಬಿಗಿಹಿಡಿದು ತನ್ನ ಅತೃಪ್ತಿಯನ್ನು ಯಾರಿಗೂ ತೋರಗೊಡದೆ ನುಂಗಿಕೊಂಡಿದ್ದಳು.

'ಆನಂದ ನನ್ನ ವಿಷಯದಲ್ಲಿ ಮಾಡಿರುವ ಅಪರಾಧವೇನು?' ಎಂಬ ವಿಚಾರವೂ ಮನಸ್ಸಿನಲ್ಲಿ ಸುತ್ತುತ್ತಿತ್ತು. ಆಗ ಆವಳ ಮನಸ್ಸು ಬೇರೆ ರೀತಿಯಲ್ಲಿ ತಿರುಗುತ್ತಿತ್ತು. ಅವನು ತನ್ನಲ್ಲಿ ಎಂದೂ ಯಾವ ತಪ್ಪನ್ನೂ ಎಣಿಸಿರಲಿಲ್ಲ. ಅವಳನ್ನು ಯಾವ ಮಾತಿನಿಂದಲೂ ನೋಯಿಸಿರಲಿಲ್ಲ. ಆದರೆ ಅವನ ಮನಸ್ಸು ತನ್ನ ಮನಸ್ಸಿನಂತಿರಲಿಲ್ಲ. ಅದೇ ಅವನದೊಂದು ತಪ್ಪು ಎಂದೆಣಿಸುವುದು ಸರೋಜಳ ಬುದ್ಧಿಗೆ ಮೊದಲು ಒಪ್ಪಿಗೆಯಾಗಲಿಲ್ಲ.

ಆ ಸಂಜೆ ತನಗಾದ ನಿರಾಶೆಗೆ ಆನಂದ ಎಷ್ಟರಮಟ್ಟಿಗೆ ಕಾರಣನೆಂದು ಸರೋಜ ಯೋಚಿಸಿದಳು. ವಾರದ ಹಿಂದೆ ಒಪ್ಪಿಕೊಂಡಿದ್ದಂತೆ ಕಾರ್ಯಕ್ರಮಕ್ಕೆ ಅವನು ಹೊರಟುಹೋದುದು ಒಂದು ತಪ್ಪಾಗಿರಲಿಲ್ಲ. ಉತ್ಸವದ ಅಧ್ಯಕ್ಷನಾಗ ಬೇಕೆಂದು ರಾಜು ಅವನನ್ನು ಕೇಳಿದಾಗ ಅದಕ್ಕೆ ತನ್ನ ಒಪ್ಪಿಗೆಯನ್ನು ಕೊಟ್ಟುದೂ ಒಂದು ತಪ್ಪಾಗಿರಲಿಲ್ಲ. ಒಪ್ಪಿಗೆಯನ್ನು ಕೊಟ್ಟಿದ್ದುದು ಆನಂದನಿಗೆ ಮರೆತುಹೋಗಿತ್ತು. ಮರೆಯುವುದು ಮನುಷ್ಯನ ಉದ್ದೇಶವನ್ನು ಮೀರಿದ ವಿಷಯ. ಅದಕ್ಕಾಗಿ ಅವನಲ್ಲಿ ತಪ್ಪನ್ನೆಣಿಸುವುದು ಸಾಧುವಲ್ಲ.

'ಆನಂದ ಯಾವ ತಪ್ಪನ್ನೂ ಮಾಡಲಿಲ್ಲ' ಎಂದೆನಿಸಿತು ಸರೋಜಳಿಗೆ.

ಆಗ ಅವಳಿಗೆ ತನ್ನ ತರ್ಕವೇ ಆಶ್ಚರ್ಯವಾಗಿ ಕಂಡಿತು. ಹಾಗಾದರೆ ತನ್ನ ಅಂದಿನ ನಿರಾಶೆಗೆ ತಾನೇ ಕಾರಣವಿರಬಹುದೇ, ಎಂಬ ಯೋಚನೆ ಸುಳಿದಾಗ ಅದನ್ನೂ ಅವಳು ಒಪ್ಪಿಕೊಳ್ಳಲಿಲ್ಲ.

ಆದರೆ ಸರೋಜಳ ಅಂತರ್ಯದಲ್ಲಿ ಊರಿಹೋಗಿದ್ದ ಒಂದು ವಿಷಯವನ್ನು ಮಾತ್ರ ಅವಳ ಬುದ್ಧಿ ಸಮಾಧಾನಮಾಡಲಾಗಲಿಲ್ಲ. ತನ್ನನ್ನು ನಲಿಸುವ ಉದ್ದೇಶವನ್ನು ಆನಂದ ತೋರಿಸಿರಲಿಲ್ಲ. ತಮ್ಮ ಸಂತೋಷಕ್ಕಾಗಿ ಅವನು ಉತ್ಸಾಹವನ್ನು ಹೊರಸೂಸಿರಲಿಲ್ಲ. ಈ ಯೋಚನೆ ಮುಸುಕಿದಾಗ ನಡೆದು ಹೋಗಿದ್ದ ಅನೇಕ ಕಹಿ ಪ್ರಸಂಗಗಳು ಮತ್ತೆ ನೆನಪಾಗುತ್ತಿದ್ದವು.

ಕೆಲವು ದಿನಗಳ ಹಿಂದೆ ಆನಂದನ ಮಿತ್ರರಾದ ಇಂಜಿನಿಯರ್ ರಾಮ ಮೂರ್ತಿಗಳ ಮನೆಯಲ್ಲಿ ಮಗನ ಮುಂಜಿ ನಡೆಯಿತು. ಆ ಸಮಯದಲ್ಲಿ ಸರೋಜಳಿಗೆ ಆಹ್ವಾನ ಬಂದಿತ್ತು. ಸಮಾರಂಭದಲ್ಲಿ ರಾಮಮೂರ್ತಿಗಳ ಪತ್ನಿ ಜಾನಕಮ್ಮ ಒಂದು ಹೊಸ ಮಾದರಿಯ ಸೀರೆಯನ್ನುಟ್ಟು ಓಡಾಡು ತ್ತಿದ್ದರು. ಸರೋಜ ಆ ಸೀರೆಯನ್ನು ಕಂಡು ಅದಕ್ಕಾಗಿ ಆಸೆಪಟ್ಟಳು. ಆನಂದನಿಗೆ ವಿವರಿಸಿದಳು. ಅವಳ ವಿವರಣೆಯಲ್ಲಿ ತನಗೊಂದು ಅಂತಹುದು ಬೇಕೆಂಬ ಆಸೆ ಎದ್ದುಕಾಣುತ್ತಿತ್ತು. ಆದರೆ ಆನಂದ ಅವಳ ಮನದ ಆಸೆಯನ್ನು ಪೂರ್ತಿಮಾಡಲಿಲ್ಲ. ಅದಕ್ಕಾಗಿ ಅವನನ್ನು ನೇರವಾಗಿ ಅವಳು ಮತ್ತೆ ಕೇಳಲಿಲ್ಲ. ತನ್ನ ಆಸೆ ಅವನ ಮನಸ್ಸಿಗೆ ತೋಚದೆಹೋಗಿರಬಹುದು; ತೋಚಿಯೂ ಮರೆತುಹೋಗಿರಬಹುದು—ಎಂದು ಅವಳು ಮೊದಲು ಯೋಚಿಸಿ ದಳು. ಆದರೆ ಅವನು ತನ್ನ ಆಸೆಯನ್ನು ನಿರ್ಲಕ್ಷಿಸಿದನೆಂಬ ಭಾವನೆ ಮಾತ್ರ ಅವಳಿಗೆ ಹೆಚ್ಚು ಹೆಚ್ಚು ನಿಶ್ಚಯವಾಗಿ ಕಂಡಿತು.

ಸರೋಜಳಿಗೆ ಆ ಪ್ರಕರಣದ ನೆನಪಾಯಿತು. ಕಮಲಮ್ಮನವರಿಗೆ ಅವಳು ತನ್ನ ಆಸೆಯನ್ನು ಹೇಳಿದಳು. ಆ ಸಂಜೆಯೇ ಅವರು ಸರೋಜ ಳೊಡನೆ ಅಂಗಡಿಗೆ ಹೋಗಿ ಅವಳು ಬಯಸಿದ ಸೀರೆಯನ್ನು ಕೊಂಡುದಾಯಿತು. ಸರೋಜಳಿಗೆ ಆಗ ಉಂಟಾದ ಉತ್ಸಾಹ ಅವಳಿಗೇ ಅಸಹಜವಾಗಿ ಕಂಡಿತು. ತನ್ನ ಆ ಅಲ್ಪ ಸಂತೋಷವನ್ನು ಆನಂದ ಪೂರ್ತಿಮಾಡಲಿಲ್ಲ ಎಂಬ ಅತೃಪ್ತಿ ಸರೋಜಳ ಸಹನೆಯನ್ನೆಲ್ಲ ಒಮ್ಮೆಲೆ ಪುಡಿ ಪುಡಿ ಮಾಡಿತು. ಆಗ ಅವಳು ತನ್ನ ಬದುಕು ಹೇಗೆ ಸಾಗುತ್ತಿದೆ ಎಂಬುದನ್ನು ಸೂಕ್ಷ್ಮವಾಗಿ ಕಮಲಮ್ಮನವರಿಗೆ ಸೂಚಿಸಿದಳು.

ಎರಡು ದಿವಸಗಳನ್ನು ಆನಂದ ನೆಮ್ಮದಿಯಿಲ್ಲದೆ ಕಳೆಯಬೇಕಾಯಿತು. ಸಂಜೆ ಕಾಲೇಜು ಮುಗಿಯುತ್ತಲೇ ಅವನು ಮಲ್ಲೇಶ್ವರದ ಬಸ್ ಹತ್ತಿದ.

ಒಳಗೆ ಕುಳಿತುಕೊಳ್ಳುವುದಕ್ಕೆ ಸ್ಥಳವಿಲ್ಲದೆ ಅವನು ನಿಂತಿರಬೇಕಾಯಿತು. ಮನಸ್ಸಿನಲ್ಲಿಯೇ ಅವನು ' ನನಗೆಲ್ಲಿದೆ ಸುಖ ! ' ಎಂದುಕೊಂಡ.

ಕೆಲನಿಮಿಷಗಳಲ್ಲಿಯೇ ಬಸ್ಸಿನಿಂದ ನಿಧಾನವಾಗಿ ಇಳಿದ. ಇಳಿಯುತ್ತಿರುವಂತೆಯೆ ಬಸ್ ಮುಂದಕ್ಕುರುಳಿತು. ಆನಂದ ಸುಂದರರಾಯರ ಮನೆಯನ್ನು ಸೇರಿದಾಗ ಅವನಿಗೆ ಬಹಳ ಆಯಾಸವಾಗಿತ್ತು. ಒಳಗೆ ಹೋಗುತ್ತಿರುವಂತೆಯೇ ಸರೋಜಳ ಮೇಲೆ ಅವನ ನೋಟ ಬಿದ್ದಿತು. ಅವಳು ಉಟ್ಟಿದ್ದ ಸೀರೆ ಅವನ ಕಣ್ಣನ್ನು ತಿವಿಯಿತು. ಹಿಂದೆ ನಡೆದಿದ್ದ ಸೀರೆಯ ಪ್ರಸಂಗ ಅವನ ನೆನಪಿಗೆ ಬಂದಿತು. ಸರೋಜ ಅಷ್ಟು ಬಿಗಿಯಿಂದ ವರ್ತಿಸುತ್ತಾಳೆಂದು ಆನಂದ ಊಹಿಸಿರಲಿಲ್ಲ. ಅವಳ ನಡೆಯಲ್ಲಿ ಅಣಕವಿರುವಂತೆ ಅವನಿಗೆ ತೋರಿತು.

## ೩೦

ಮಧ್ಯಾಹ್ನ ರಾಜು ಶಿಶುವಿಹಾರದ ಕಡೆಗೆ ಹೊರಟ. ಆಗ ಶಾಲೆಗೆ ವಿರಾಮ ಸಮಯವಾಗಿತ್ತು. ಎಲ್ಲರೂ ಉಪಾಹಾರಕ್ಕೆ ಹೋಗಿದ್ದರು. ರಾಜು ತಾನೇ ರಚಿಸಿದ್ದ ಕೆಲವು ಚಿತ್ರಗಳನ್ನು ನೋಡುತ್ತ ನಿಂತ. ಮನಸ್ಸಿನಲ್ಲಿ ಒತ್ತುತ್ತಿದ್ದ ಆಸೆಯನ್ನು ಅವನಿಗೆ ತಡೆಯಲಾಗಲಿಲ್ಲ. ' ಬೇಟೆಗಾರನ ಕತೆ 'ಯ ಚಿತ್ರ ಸಮೂಹವನ್ನು ನೆಟ್ಟದೃಷ್ಟಿಯಿಂದ ನೋಡಿದ. ಕಣ್ಣೆದುರು ಚಿತ್ರಗಳು ಭಿನ್ನ ಭಿನ್ನವಾಗಿದ್ದರೂ ಅವುಗಳ ಮಧ್ಯೆ ಸರ್ವಾಂಗಸುಂದರವಾದ ಒಂದು ಪೂರ್ಣ ಚಿತ್ರವನ್ನು ಅವನು ಕಲ್ಪಿಸಿಕೊಂಡ : ಅದು ಇಂದಿರೆಯದು.

ನಿಧಾನವಾಗಿ ಅವನ ಕಣ್ಣು ಗಡಿಯಾರದ ಕಡೆ ಹೊರಳಿತು. ಗೋಡೆಯ ಮೇಲೆ ಓಲಾಡುತ್ತಿದ್ದ ಗಡಿಯಾರ ಎರಡೂವರೆ ಗಂಟೆಯೆಂದು ತೋರಿಸುತ್ತಿತ್ತು. ಅವನಿಗೆ ತಕ್ಷಣ ಒಂದು ಕಾರ್ಯಕ್ರಮ ಜ್ಞಾಪಕವಾಯಿತು. ಆ ದಿನ ಮ್ಯಾಟನಿ ಚಿತ್ರವನ್ನು ನೋಡಲು ' ಗ್ಲೋಬ್ ' ಬಳಿ ಹಾಜರಿರುವಂತೆ ರಾಮುವಿಗೆ ಹೇಳಿದ್ದ. ಅದರ ನೆನಪಾಗಿ ಅವನು ಹೊರಡುವುದರಲ್ಲಿದ್ದ.

ಕತ್ತು ತಿರುಗಿಸುತ್ತಿರುವಾಗ ಮೇಜಿನ ಮೇಲೆ ಅವನಿಗೆ ಒಂದು ಪುಸ್ತಕ ಕಾಣಿಸಿತು. ಪುಸ್ತಕವನ್ನು ಕೈಗೆ ತೆಗೆದುಕೊಂಡ. ಅದರ ಮೇಲೆ ಇಂದಿರೆಯ ಹೆಸರನ್ನು ಕಂಡು ಅವನಿಗೆ ವಿಚಿತ್ರವಾದ ಅನುಭವವಾಯಿತು. ಪುಸ್ತಕವನ್ನು ಬಿಚ್ಚಿ ನೋಡಿದ. ಅದು ಪ್ರೇಮಗೀತಗಳ ಒಂದು ಸಂಕಲನವಾಗಿತ್ತು. ಇಂದಿರೆ

ಆ ಗೀತಗಳನ್ನೋದಿದಾಗ ಅನುಭವಿಸಿದ ಭಾವಗಳನ್ನು ತಾನೂ ಅನುಭವಿಸಲೇ ಬೇಕೆಂಬ ಆಸೆ ಹುಟ್ಟಿತು. ಅದನ್ನು ಕೋಟಿನ ಜೇಬಿನಲ್ಲಿರಿಸಿಕೊಂಡ. ತಕ್ಷಣ ಪುಸ್ತಕದಿಂದ ಒಂದು ಕಾಗದ ಕೆಳಗೆ ಬಿದ್ದಿತು. ಕಾಗದದಲ್ಲಿದ್ದ ಅಕ್ಷರಗಳ ಮೇಲೆ ಅವನ ಕುತೂಹಲಪೂರ್ಣದೃಷ್ಟಿ ಬಿದ್ದಿತು. ಅವು ಇಂದಿರೆಯ ಹಸ್ತಾಕ್ಷರ ಗಳೆಂದು ಅವನಿಗೆ ಗೋಚರವಾದವು. ಅದೊಂದು ಪ್ರೇಮಗೀತೆ. ಅದನ್ನು ಇಂದಿರೆಯೇ ರಚಿಸಿರಬಹುದೆಂದು ಅವನು ತಿಳಿದ. ಅದು ಪರಸ್ಪರ ಅನುರಾಗ ದಲ್ಲಿದ್ದ ಎರಡು ಹಕ್ಕಿಗಳ ಕತೆ. ಆ ಕತೆ ಕಣ್ಣೀರನ್ನು ತರುವಂತಿತ್ತು. ಗಂಡು ಹಕ್ಕಿ ಒಬ್ಬ ಬೇಡನ ಬಲೆಯಲ್ಲಿ ಸಿಕ್ಕಿಕೊಂಡಿತ್ತು. ಹೆಣ್ಣುಹಕ್ಕಿ ಹೊರಗುಳಿ ದಿತ್ತು. ಅದೂ ಒಳಗೆ ಹೋಗಲು ಬಲೆಯ ಒಂದೊಂದು ಕಂಡಿಯಿಂದಲೂ ಪ್ರಯತ್ನಿಸುತ್ತಿತ್ತು. ಎರಡು ಹಕ್ಕಿಗಳ ಹೃದಯಗಳೂ ಒಂದಾಗಲು ಮಿಡಿಯು ತ್ತಿದ್ದವು. ತಮ್ಮ ಮಧ್ಯೆ ಇದ್ದ ಬಲೆಯನ್ನು ಶಪಿಸುತ್ತಿದ್ದವು. ವ್ಯರ್ಥವಾದ ತನ್ನ ಯತ್ನದಲ್ಲಿ ಹೆಣ್ಣುಹಕ್ಕಿ ಸೋತುಹೋಯಿತು. ಪುನಃ ಜೋಡಿಗೂಡುವ ಆಸೆ ಗಾಗಿ ಎರಡು ಹಕ್ಕಿಗಳೂ ಸಾವನ್ನು ತಬ್ಬಿಕೊಳ್ಳಲು ಸಿದ್ಧವಾಗಿದ್ದವು. ಆ ಗೀತೆ ಯಲ್ಲಿ ಪ್ರೇಯಸಿ ತನ್ನ ಇನಿಯನಿಗಾಗಿ ಹಂಬಲಿಸುತ್ತ ಹೃದಯವನ್ನು ತೋಡಿ ಕೊಳ್ಳುವ ಭಾವವಿತ್ತು. ಆ ಕವಿತೆ ರಾಜುವಿನ ಮನಸ್ಸನ್ನು ಸೆರೆಹಿಡಿಯಿತು.

ಮೂರು ಗಂಟೆಗೆ ಹತ್ತು ನಿಮಿಷ ಮಾತ್ರ ಉಳಿದಿತ್ತು. ಮಲ್ಲೇಶ್ವರಂ ನಿಂದ ರಸೆಲ್ ಮಾರ್ಕೆಟ್ಟಿಗೆ ಬಸ್ ಹೊರಡುವ ಸಮಯ. ರಾಜು ಧಾವಿಸಿ ನಡೆದು ಬಸ್ ಹತ್ತಿದ.

ರಾಜುವಿಗಾಗಿ ಬಹಳ ಹೊತ್ತು ಕಾದ ರಾಮುವಿನ ಮುಖದಲ್ಲಿ ಕೋಪ ಮೂಡಿತ್ತು.

"ಯಾವಾಗಲೂ ನಿನ್ನ ದಾರಿ ಕಾಯುವುದೇ ಆಗಿದೆ, ನನ್ನ ಹಣೇಬರಹ. ಚಿತ್ರ ಆರಂಭವಾಗುವ ಸಮಯ, ಇಷ್ಟು ಕಾಫಿಗೂ ಹೊತ್ತಿಲ್ಲ" ಎಂದ ರಾಮು.

ಆ ಮಾತನ್ನೇ ಕಿವಿಯ ಮೇಲೆ ಹಾಕಿಕೊಳ್ಳದೆ ಅವನ ಭುಜವನ್ನು ಚಪ್ಪರಿಸುತ್ತ ರಾಜು ಎರಡು ಟಿಕೆಟ್ ತೆಗೆದ.

"ಬಾರೊ, ಕಾಫಿ ಕುಡಿದು ಬರೋಣ. ಇನ್ನೂ ಇನ್ಫರ್ಮೇಷನ್ ರೀಲ್ ಮುಗಿಯಬೇಕಲ್ಲಾ" ಎಂದು ರಾಮುವನ್ನು ಹೋಟೆಲಿನ ಕಡೆಗೆ ಎಳೆದು ಕೊಂಡು ಹೋದ.

" ಯಾವುದೋ ಅದು, ಜೇಬಿನಲ್ಲಿ ತುರುಕಿಕೊಂಡಿರುವ ಪುಸ್ತಕ? " ಎಂದ ರಾಮು.

" ಪ್ರೇಮಗೀತಗಳು."

" ಅದನ್ನೇ ಪಠಿಸುತ್ತಾ ಮೈಮರೆತು ಕೂತುಬಿಟ್ಟೆಯೇನೋ! ಅದಕ್ಕೇ ಹೊತ್ತು ಮಾಡಿದೆ."

" ಇಲ್ಲ, ಶಿಶುವಿಹಾರದಲ್ಲಿ ಸ್ವಲ್ಪ ಕೆಲಸವಿತ್ತು " ಎಂದು ರಾಜು ಒಂದು ಹಗುರವಾದ ಸುಳ್ಳು ಹೇಳಿದ.

ಚಿತ್ರ ಆರಂಭವಾಯಿತು. ರಾಜುವಿನ ಕಣ್ಣು ಎಲ್ಲೆಲ್ಲೋ ಹೊರಳುತ್ತಿತ್ತು. ಅವನ ಅಂತರಂಗವನ್ನು ಇಂದಿರೆ ರಚಿಸಿದ್ದ ಕವನ ವಶಪಡಿಸಿಕೊಂಡಿತ್ತು. ಚಿತ್ರ ಮುಗಿಯುತ್ತಲೇ ರಾಜು ತನ್ನ ಕಲಾಮಂದಿರದ ಕಡೆಗೆ ನಡೆದ.

" ಏನೋ, ಇಷ್ಟು ಅವಸರ? " ಎಂದ ರಾಮು, ಅವನ ಆತುರವನ್ನು ಕಂಡು.

" ಬರುತ್ತೇನೆ " ಎಂದು ನಗುತ್ತ ರಾಜು ಹಾಗೆಯೆ ನಡೆದ.

ಮಂದಿರವನ್ನು ಸೇರುತ್ತಲೆ ಕುಂಚಗಳು, ಚಿತ್ರ, ಬಣ್ಣಗಳು—ಎಲ್ಲ ಕಲಾಸಾಮಗ್ರಿಗಳನ್ನೂ ಸಿದ್ಧಪಡಿಸುವಂತೆ ಚಂದ್ರುವಿಗೆ ಹೇಳಿದ.

ರಾಜು ಎರಡು ದಿನ ಕಲೆಯಲ್ಲಿ ತಲ್ಲೀನನಾಗಿದ್ದ. ಅವನ ಅಭೀಷ್ಟ ಚಿತ್ರ ಪೂರ್ಣವಾಯಿತು.

ಮಧ್ಯಾಹ್ನ ರಾಜು ಶಿಶುವಿಹಾರಕ್ಕೆ ಹೋಗುತ್ತಿದ್ದ. ದಾರಿಯಲ್ಲಿ ಸುಶೀಲಾಬಾಯಿ ಬಸ್ಸಿಗಾಗಿ ಕಾಯುತ್ತಿರುವುದನ್ನು ನೋಡಿ,

" ಎಲ್ಲಿಗೆ ಹೊರಟಿದ್ದೀರಿ? " ಎಂದು ಪ್ರಶ್ನಿಸಿದ.

" ಶ್ರೀರಾಮಪುರಕ್ಕೆ " ಎಂದರು ಸುಶೀಲಾಬಾಯಿ.

ಆ ಮಾತನ್ನು ಕೇಳಿ ತನಗೆ ಒಂದು ಆತ್ಮೀಯವಾದ ಅವಕಾಶ ದೊರೆಯಿತೆಂದು ರಾಜು ಭಾವಿಸಿದ. ಆ ದಿನ ಯಾರ ಆತಂಕವೂ ಇಲ್ಲದೆ ಇಂದಿರೆಯೊಡನೆ ಕಾಲ ಕಳೆಯಬಹುದೆಂದು ಅವನು ಸಂತೋಷಿಸಿದ.

ಇಂದಿರೆಯೊಡನೆ ಬಹಳ ಹೊತ್ತು ವಿನೋದವಾಗಿ ಮಾತನಾಡುತ್ತ ರಾಜು ಕುಳಿತಿದ್ದ. ಇಂದಿರೆಯೂ ಮಾತಿನಲ್ಲಿ ಆಸಕ್ತಳಾಗಿದ್ದಳು. ಒಂದು ಪುಸ್ತಕವನ್ನೂ, ಅದರೊಡನೆ ತನ್ನ ಮನಸ್ಸನ್ನೆಲ್ಲ ಬೆರಸಿ ರಚಿಸಿದ್ದ ಒಂದು ಚಿತ್ರ

ವನ್ನೂ ರಾಜು ಇಂದಿರೆಯ ಕೈಲಿರಿಸಿದ. ಕಳೆದುಹೋಯಿತೆಂದು ತಿಳಿದಿದ್ದ ಪುಸ್ತಕವನ್ನು ಕಂಡು ಇಂದಿರೆ ಹರ್ಷಚಿತ್ತಳಾದಳು. ಚಿತ್ರವನ್ನು ನೋಡಿದಳು. 'ವಿಶ್ವಾಸಪೂರ್ವಕ ಕಾಣಿಕೆ' ಎಂದಿತ್ತು ಅದರಡಿ. ರಾಜು ತನ್ನ ಸಹಿ ಮಾಡಿದ್ದ. ಚಿತ್ರವನ್ನು ನೋಡುತ್ತಲೆ ಅವಳ ಮನಸ್ಸಿನಲ್ಲಿ ಹಿಂದೆ ಕಮರಿಹೋಗಿದ್ದ ಭಾವನೆಗಳು ಪುನಃ ಸ್ಪಷ್ಟವಾಗಿ ಉದ್ದೀಪನಗೊಂಡವು. ಏನೋ ನೆನಪಿನಿಂದ ಇಂದಿರೆ ಪುಸ್ತಕವನ್ನು ತೆರೆದಳು. ಅದರಲ್ಲಿ ತಾನು ರಚಿಸಿದ್ದ ಹಕ್ಕಿಗಳ ಕವನವಿತ್ತು. ರಾಜುವಿನ ಚಿತ್ರದಲ್ಲಿ ಆ ಕವನದಲ್ಲಿಯ ಭಾವಗಳು ಅರಳಿ ಮನವನ್ನು ಸೂರೆಗೊಳ್ಳುವಂತ್ತಿದ್ದವು. ಇಂದಿರೆಗೆ ತನ್ನ ಕವನ, ರಾಜುವಿನ ಚಿತ್ರ—ಎಲ್ಲ ವಿಷಯಗಳೂ ಅರ್ಥವಾದವು. ಆ ಕ್ಷಣದಲ್ಲಿ ರಾಜು ಅವಳ ಹೃದಯವನ್ನು ಕೆಣಕಿದ್ದ. ಇಂದಿರೆಯ ನೋಟ ಅವನ ಹೃದಯವನ್ನು ತಾಕಿತು.

## ೩೧

ಶಾಮರಾಯರು ಜಮೀನಿನ ವಿಚಾರವಾಗಿ ಸುಶೀಲಾಬಾಯಿಯೊಡನೆ ಮಾತನಾಡಬೇಕಾಗಿದ್ದುದರಿಂದ ಬೆಂಗಳೂರಿಗೆ ಹೊರಟರು. ಅವರು ಆನಂದನ ಮನೆಯಲ್ಲಿಯೇ ಬಂದಿಳಿದರು.

ಶಾಮರಾಯರನ್ನು ನೋಡುತ್ತಲೇ ಆನಂದನಿಗೆ ಸಂಪಿಗೆಯ ತನ್ನ ಜೀವನ ನೆನಪಿಗೆ ಬಂದಿತು. ತನ್ನ ಆದರ್ಶಗಳೆಲ್ಲ ಜೀವಂತವಾಗಿದ್ದ ಆ ದಿವಸಗಳ ನೆನಪಾಯಿತು. ಮರುಕ್ಷಣ ಸಂಪಿಗೆಯ ಚಿಂತೆಯೂ ಹತ್ತಿತು. ಬೆಂಗಳೂರಿನಲ್ಲಿ ಯಾವಾಗಲೂ ತನ್ನ ಸ್ವಂತ ವಿಚಾರಗಳು ಮನಸ್ಸನ್ನು ಮುತ್ತಿರುತ್ತಿದ್ದವು. ಬಹಳ ದೂರ ಯೋಚಿಸಿದಾಗ ಬದುಕಿನ ಮೇಳ ತಿಳಿಯದೆ ತಾಳ ತಪ್ಪಿದಂತೆ ಅವನಿಗೆ ಹೆದರಿಕೆಯಾಗುತ್ತಿತ್ತು.

ಅನಾರೋಗ್ಯದಿಂದಿದ್ದ ತಾಯಿಯ ಚಿಂತೆಯಿಂದ ಆವನು ಶಾಮರಾಯರನ್ನು ಕೇಳಿದ : "ಅಮ್ಮನ ಆರೋಗ್ಯ ಹೇಗಿದೆ ?"

"ಏನೋ ಇದೆ. ಮೊದಲಿಂದಲೂ ಹಣಗಿದ ಜೀವ. ರಕ್ತದ ಒತ್ತಡವಂತೆ." ಶಾಮರಾಯರ ಉತ್ತರ ನಿರುತ್ಸಾಹವನ್ನು ಹರಡಿತು.

ಶಾಮರಾಯರು ತಾವೇ ರಂಗರಾಯರ ಕಡೆಗೆ ಮಾತನ್ನು ತಿರುಗಿಸಿದರು.

"ರಂಗೂಗೂ ವಯಸ್ಸಾಯಿತು. ಒಬ್ಬನೇ ಎಲ್ಲ ನೋಡಿಕೊಳ್ಳಬೇಕು.

ಅವನೂ ಮೆತ್ತಗಾಗಿದ್ದಾನೆ.”

ಶಾಮರಾಯರು ಮುಂದುವರಿದು ಸಂಪಿಗೆಯಲ್ಲಿನ ಮನೆಯ ಸ್ಥಿತಿಗತಿಗಳ ವಿವರಣೆ ಕೊಟ್ಟರು. ನಾಗಮ್ಮನವರು ಮಕ್ಕಳ ಅಗಲಿಕೆ ತಾಳಲಾರದೆ ತಲ್ಲಣಿಸಿದ್ದರು. ಅದು ಅವರ ಹೃದಯದ ಮೇಲೆ ಪರಿಣಾಮ ಮಾಡಿತ್ತು. ಬರಿದಾದ ಮನೆಯಲ್ಲಿ ದಿನಗಳನ್ನು ಕಳೆಯುವುದು ಹೇಗೆ ಎಂದು ರಂಗರಾಯರು ಕಂಗೆಟ್ಟಿದ್ದರು. ನಾಗಮ್ಮನವರನ್ನು ನೋಡಿಕೊಳ್ಳುವುದಲ್ಲದೆ ಹೊಲ, ಗದ್ದೆ, ತೋಟಗಳ ಕೆಲಸಗಳನ್ನೂ ನಿರ್ವಹಿಸಬೇಕಾಗಿತ್ತು. ಅಲ್ಲದೆ ಪದ್ಮಳ ಚಿಂತೆ ಇಬ್ಬರನ್ನೂ ಮತ್ತೆ ಪೀಡಿಸುತ್ತಿತ್ತು. ಪದ್ಮಳನ್ನು ದೇವನಹಳ್ಳಿಗೆ ಕರೆದುಕೊಂಡುಹೋದ ತರುವಾಯ ಮೊದಮೊದಲು ನಾಣಿ ಕ್ಷೇಮಸಮಾಚಾರಕ್ಕೆ ಪತ್ರಗಳನ್ನು ಬರೆಯುತ್ತಿದ್ದ. ಆದರೆ ಈಚೆಗೆ ಅವನಲ್ಲಿ ದೊಡ್ಡ ಮಾರ್ಪಾಡಾಗಿತ್ತು. ರಂಗರಾಯರು ಮೂರು ಪತ್ರಗಳನ್ನು ಬರೆದಿದ್ದರೂ ನಾಣಿಯಿಂದ ಉತ್ತರ ಬಂದಿರಲಿಲ್ಲ. ಅದೂ ಅವರಿಗೆ ಒಂದು ಚಿಂತೆಯಾಗಿತ್ತು.

ಶಾಮರಾಯರಿಂದ ಸಮಾಚಾರಗಳನ್ನೆಲ್ಲ ತಿಳಿದು ಆನಂದ ವಿಷಣ್ಣನಾದ. ಸರೋಜ ಕನಿಕರಪಟ್ಟಳು.

ಇಂಗಿತಜ್ಞ ಶಾಮರಾಯರು ತಮ್ಮ ಬುದ್ಧಿಯನ್ನು ನಾನಾ ಮುಖಗಳಲ್ಲಿ ಹರಿಸಿದ್ದರು. ಆನಂದ ಕೃಶನಾಗಿದ್ದ. ಹಿಂದೆ ಅವನು ಯಾವಾಗಲೂ ಸಂತೋಷಚಿತ್ತನಾಗಿರುತ್ತಿದ್ದ. ಸರೋಜಳ ಮುಖವೂ ಬಾಡಿತ್ತು. ಮದುವೆಯ ಸಮಯದಲ್ಲಿ ತಾವು ಕಂಡಿದ್ದ ಅವಳ ರೂಪ ಈಗ ಸ್ವಲ್ಪ ಬೇರೆಯಾಗಿತ್ತು. ಆ ಮಾತುಗಾರಿಕೆಯೂ ಮಾಯವಾಗಿತ್ತು. ಶಾಮರಾಯರು ಆನಂದನನ್ನು ಅವನ ಸುಖದುಃಖಗಳ ವಿಷಯವಾಗಿ ಪ್ರಶ್ನೆಮಾಡಿದರು. ಆ ಪ್ರಶ್ನೆಗಳಿಗೆಲ್ಲ ಆನಂದನಿಂದ ಮೊಟಕಾದ ಉತ್ತರಗಳು ಬಂದವು. ಆ ರೀತಿ ಅವರು ವಿಚಾರಿಸುವುದೂ ಅವನಿಗೆ ಹಿತ ಕಾಣಲಿಲ್ಲ. ಶಾಮರಾಯರು ಅನೇಕ ಊಹೆಗಳನ್ನು ಕಟ್ಟಿಕೊಂಡರು.

ಬೆಳಗ್ಗೆ ಕಾಫಿ ತಿಂಡಿ ಆದನಂತರ ಶಾಮರಾಯರು ಸುಂದರರಾಯರ ಮನೆಗೆ ಹೋದಾಗ ಸುಂದರರಾಯರು ಮನೆಯಲ್ಲಿರಲಿಲ್ಲ. ಅವರು ತಿರುಗಾಡಲು ಹೋಗಿದ್ದರು.

ಕಮಲಮ್ಮನವರು ಶಾಮರಾಯರನ್ನು ಸ್ವಾಗತಿಸಿ ಮಾತಿಗೆ ಕುಳಿತರು.

ಅವರ ಮಾತಿನಲ್ಲಿ, ಆನಂದ ಸರೋಜಳನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ ವೆಂಬ ಅಭಿಪ್ರಾಯವನ್ನು ಶಾಮುರಾಯರು ತಿಳಿದುಕೊಂಡರು.

"ಆನಂದನಿಗೆ ಎಲ್ಲದರಲ್ಲೂ ನಿರುತ್ಸಾಹ. ಈ ಪ್ರಪಂಚವೇ ಅವನಿಗೆ ಬೇಡವಾಗಿದೆ" ಎಂದರು ಕಮಲಮ್ಮನವರು.

"ಅವನಿಗೆ ಸಂಪಿಗೆಯ ಮನೆ ಚಿಂತೆ ಹತ್ತಿರಬಹುದು. ಅನಾರೋಗ್ಯದಿಂದ ನರಳುವ ತಾಯಿ, ವಯಸ್ಸಾದ ತಂದೆ...." ಎಂದು ಶಾಮುರಾಯರು ಹೇಳುತ್ತಿರುವಂತೆ ಕಮಲಮ್ಮನವರು,

"ಏನೋ ಚಿಂತೆಯಿಂದ ಹೆಂಡತಿಯನ್ನು ಅಸಂತೋಷಪಡಿಸುವುದು ಅದೆಂಥಾ ನ್ಯಾಯ ?" ಎಂದು ನಡುವೆ ತಡೆದರು.

ಶಾಮುರಾಯರು ಆ ಮಾತನ್ನು ನಿರೀಕ್ಷಿಸಿರಲಿಲ್ಲ. ಕಮಲಮ್ಮನವರ ಎದುರು ವಾದಿಸಲು ಸಿದ್ಧರಿರಲಿಲ್ಲ.

"ಅವನು ಅಷ್ಟೊಂದು ಚಿಂತೆ ಹಚ್ಚಿಕೊಳ್ಳಬಾರದು. ಚಿಂತೆಯಿಂದ ಪ್ರಯೋಜನವೇನು ?" ಎಂದು ಮಾತನ್ನು ತೇಲಿಸಿದರು.

ಆ ವೇಳೆಗೆ ಸುಂದರರಾಯರು ಬಂದರು. ಉಪಚಾರದ ಮಾತು ಮುಗಿದ ಮೇಲೆ ಒತ್ತಾಯದಿಂದ ಶಾಮುರಾಯರು ಅಲ್ಲಿಯೇ ಊಟಕ್ಕೇಳಬೇಕಾಯಿತು. ಊಟವಾಗುತ್ತಲೆ ಅವರು ಹೊರಡುವ ಅವಸರವನ್ನು ತೋರಿಸಿದರು. ರಾತ್ರಿಯ ಗಾಡಿಗೆ ಸಂಪಿಗೆಗೆ ಹೊರಡಲೇಬೇಕಾಗಿದ್ದುದರಿಂದ ಹೆಚ್ಚು ಕಾಲಾವಕಾಶವಿರಲಿಲ್ಲ. ಮುಖ್ಯವಾಗಿ ಅವರು ಸುಶೀಲಾಬಾಯಿಯನ್ನು ನೋಡಬೇಕಾಗಿತ್ತು.

ಶಾಮುರಾಯರು ಶಿಶುವಿಹಾರವನ್ನು ಸೇರುತ್ತಲೇ ಅಲ್ಲಿ ಮೊದಲು ಕಂಡದ್ದು ಇಂದಿರೆಯನ್ನು. ಅವಳು ಅವರ ಉದ್ದೇಶವನ್ನು ವಿಚಾರಿಸಿ ಸುಶೀಲಾಬಾಯಿಯ ಬಳಿಗೆ ಕರೆದುಕೊಂಡುಹೋದಳು. ಇಂದಿರೆಯ ರೂಪ, ನಯವಿನಯಗಳನ್ನು ನೋಡಿ ಶಾಮುರಾಯರು ಚಕಿತರಾದರು.

ಸುಶೀಲಾಬಾಯಿ ಶಾಮುರಾಯರಿಗೆ ಇಂದಿರೆಯನ್ನು ಪರಿಚಯ ಮಾಡಿಕೊಟ್ಟರು. ಅವರು ಪರಿಚಯ ಮಾಡಿಕೊಡುತ್ತಿರುವಂತೆಯೇ ಅವಳನ್ನು ಎಲ್ಲಿಯೋ ಒಂದು ಬಾರಿ ನೋಡಿದ್ದ ನೆನಪಾಯಿತು. ಅವರ ಜ್ಞಾಪಕ ಶಕ್ತಿಗೇನೂ ಸೋಲಾಗಲಿಲ್ಲ. ಸರೋಜಳ ಮದುವೆಗೆ ಆಹ್ವಾನ ಕೊಡಲು ಗೋಪಾಲರಾಯರ ಮನೆಗೆ ಹೋಗಿದ್ದಾಗ ಅವಳನ್ನು ಕಂಡಿದ್ದುದು ನೆನಪಾ

ಯಿತು. ಆದರೆ ಇಂದಿರೆ ಶಿಶುವಿಹಾರದಲ್ಲಿ ಉಪಾಧ್ಯಾಯಿನಿಯೆಂಬುದು ಅವರು ತಿಳಿದುಕೊಳ್ಳಬೇಕಾದ ಹೊಸ ವಿಚಾರವಾಗಿತ್ತು.

ಶಾಮರಾಯರು ಸಂಪಿಗೆಯವರೆಂದು ಕೇಳಿದಾಗ ಮನಸ್ಸಿನಲ್ಲಿಯೇ ನಿದ್ರಿಸುತ್ತಿದ್ದ ಇಂದಿರೆಯ ನೆನಪುಗಳು ಎಚ್ಚತ್ತು ಚಕ್ರದಂತೆ ಸುತ್ತಿದವು.

ಸುಶೀಲಾಬಾಯಿ ಅನೇಕ ಆತ್ಮೀಯ ವಿಚಾರಗಳನ್ನು ಮಾತನಾಡಬೇಕಾಗಿದ್ದರಿಂದ ಶಾಮರಾಯರನ್ನು ತಮ್ಮ ಮನೆಗೆ ಕರೆದುಕೊಂಡುಹೋದರು.

ಶಾಮರಾಯರು ಸ್ವಂತ ವಿಷಯಗಳನ್ನೆಲ್ಲಾ ಮಾತನಾಡಿ ಮುಗಿಸಿದರು. ಆನಂದನ ವಿಷಯವನ್ನೆತ್ತಿ,

“ ಆನಂದ ಏಕೆ ಬಡವಾಗಿದ್ದಾನೆ ? ಸರಿಯಾಗಿ ಮಾತೂ ಇಲ್ಲ. ಸಂಸಾರ ಚೆನ್ನಾಗಿ ನಡೆದಿದೆ ತಾನೆ ? ” ಎಂದು ಕೇಳಿದರು.

ಸುಶೀಲಾಬಾಯಿ ಸಾಮಾನ್ಯವಾಗಿ ತಮಗೆ ತಿಳಿದ ಯಾವ ವಿಚಾರಗಳನ್ನೂ ಶಾಮರಾಯರಿಂದ ರಹಸ್ಯವಾಗಿಟ್ಟುಕೊಳ್ಳುತ್ತಿರಲಿಲ್ಲ.

“ ಅವನಿಗಾದ ದೊಡ್ಡ ನಿರಾಶೆ ನಿಮಗೆ ಗೊತ್ತೇ ಇದೆ. ಈಗೇನೂ ಮಾಡುವ ಹಾಗಿಲ್ಲ. ತಾನೇ ಸಮಾಧಾನ ತಂದುಕೊಳ್ಳಬೇಕು, ಅಷ್ಟೇ ” ಎಂದರು ಸುಶೀಲಾಬಾಯಿ.

“ ಏನದು, ಸ್ವಲ್ಪ ಬಿಡಿಸಿ ಹೇಳಿ.”

“ ಅವನು ಇಂದಿರೆಯನ್ನು ಮದುವೆಯಾಗಬೇಕೆಂದು ಆಸೆಪಟ್ಟಿದ್ದ. ಆದರೆ ತನ್ನ ಮನಸ್ಸಿನ ವಿರುದ್ಧ ಅವನು ಸರೋಜಳನ್ನು ಮದುವೆಯಾಗಬೇಕಾಯಿತು. ಅದೇ ಅವನಿಗಾದ ನಿರಾಶೆ.”

ಶಾಮರಾಯರಿಗೆ ಆನಂದನ ಕತೆಯೆಲ್ಲ ಸಂಪೂರ್ಣವಾಗಿ ಅರ್ಥವಾಯಿತು. ಮದುವೆಯ ತೀರ್ಮಾನವನ್ನು ತಿಳಿಸಿದ ಕ್ಷಣದಿಂದ ಅವನ ಮುಖ ಪೆಚ್ಚಾದುದೇಕೆ ಎಂಬುದು ಈಗ ಸ್ಪಷ್ಟವಾಯಿತು. ಇಂದಿರೆಯಂತಹ ಚೆಲುವೆಯನ್ನು ಪ್ರೇಮಿಸಿ ಆ ಪ್ರೇಮ ಭಂಗವಾದರೆ ಅದೆಂತಹ ಪೆಟ್ಟೆಂಬುದನ್ನು ಅವರು ಊಹಿಸಿದರು. ಶಾಮರಾಯರಿಗೆ ಇಡಿ ಕುಟುಂಬವೇ ಯಾವುದೋ ಬಿರುಗಾಳಿಗೆ ಸಿಗಬಹುದೆಂಬ ಸೂಚನೆ ಗೋಚರವಾಯಿತು.

ಶಾಮರಾಯರು ರಾತ್ರಿಗಾಡಿಯಲ್ಲಿ ಸಂಪಿಗೆಗೆ ಹೊರಟರು.

## ೩೨

ನಾಗಮ್ಮನವರು ಆನಂದನನ್ನು ನೋಡಬೇಕೆಂದು ರಂಗರಾಯರನ್ನು ಆಗಾಗ್ಗೆ ಕೇಳುತ್ತಿದ್ದರು. ಅವರನ್ನು ಸಮಾಧಾನಗೊಳಿಸುವುದೂ ಕಷ್ಟವಾಗಿತ್ತು. ಮಕ್ಕಳನ್ನು ನೋಡಿದರೆ ತಮ್ಮ ಹೃದಯದ ಬೇನೆ ಬೇಗ ವಾಸಿಯಾಗುವುದೆಂದು ಅವರು ಹಂಬಲಿಸುತ್ತಿದ್ದರು.

ಶಾಮರಾಯರು ಸಂಪಿಗೆಗೆ ಬರುತ್ತಲೇ ರಂಗರಾಯರ ಮನೆಗೆ ಮೊದಲು ಭೇಟಿಕೊಟ್ಟರು. ಬೆಂಗಳೂರಿನ ಸುದ್ದಿಯೆಲ್ಲವನ್ನು ರಂಗರಾಯರ ಮುಂದಿಡಲು ಕುತೂಹಲವುಳ್ಳವರಾಗಿದ್ದರು.

ಬೆಂಗಳೂರಿನ ಸುದ್ದಿ ಕೇಳಿದಾಗ ರಂಗರಾಯರ ದುಃಖ ಇಮ್ಮಡಿಸಿತು. ಅವರು ಬಯಸಿದಂತೆ ಯಾವುದೂ ಆಗಿರಲಿಲ್ಲ.

ಆನಂದನ ಸುಖಕ್ಕಾಗಿ, ಪದ್ಮಳ ಬದುಕಿಗಾಗಿ ಅವರು ಸುಂದರರಾಯರ ಸಂಬಂಧ ಬೆಳೆಸಿದ್ದರು. ಆ ಸಂಬಂಧ ಅವರನ್ನು ಸುಖದ ದಾರಿಗೆ ತರುವುದೆಂದು ಆಶಿಸಿದ್ದರು. ಆದರೆ ಅದು ಅವರನ್ನು ಬೇರೆ ದಾರಿಯಲ್ಲಿ ದೂರ ದೂರ ನಡೆಸಿ ಕೊಂಡು ಹೋಗಿದ್ದಿತು. ಮದುವೆಯ ಮೊದಲೇ ಅಂಕುರಿಸಿದ್ದ ಇಂದಿರೆ ಮತ್ತು ಆನಂದನ ಪ್ರೇಮ ಅವರಿಗೆ ಸಮಯದಲ್ಲಿ ತಿಳಿಯದೆಹೋಯಿತು. ಆನಂದ ನಿರುತ್ಸಾಹಿಯಾದುದಕ್ಕೆ ಕಾರಣವನ್ನು ಆಗ ತರ್ಕಿಸಲಾರದೆಹೋಗಿದ್ದರು. ಆನಂದ ಆಗ ತನ್ನ ಹೃದಯವನ್ನು ಬಿಚ್ಚಿ ನುಡಿದಿದ್ದರೂ ಬಹಳ ಮುಂದಕ್ಕೆ ಉರುಳಿದ್ದ ಗಾಲಿಯನ್ನು ಹಿಂದಕ್ಕುರುಳಿಸುವ ಸಾಧ್ಯಾಸಾಧ್ಯತೆಗಳನ್ನು ಈಗ ಊಹಿಸುವುದು ಸುಲಭವಾಗಿರಲಿಲ್ಲ. ಅಂದು ಅವರು ಆನಂದನಿಗಾಗಿ ಕಾಣುತ್ತಿದ್ದ ಆಸೆಗಳಿಂದ ತಮ್ಮ ನಿರ್ಧಾರದ ನಿರಾಕರಣೆಗಾಗಿ ಅವನನ್ನು ಬಹುಶಃ ಹುಚ್ಚ ನೆನ್ನುತ್ತಿದ್ದರು. ಮುಂದಾಗುವುದನ್ನು ಅವರು ಆಗ ಕಾಣಲಾಗುತ್ತಿರಲಿಲ್ಲ. ಅವರು ಈಗ ಅದನ್ನು ಕಂಡು ಚಿಂತಿಸಬೇಕಾಯಿತು. ಆನಂದನೇನೋ ಅದರ ನೆರಳನ್ನು ಆಗಲೇ ಕಂಡಿದ್ದ. ಆದರೆ ಪದ್ಮಳ ಮದುವೆಗೆ ಅಡ್ಡಿಬರಲು ಅವನ ಅಂತಃಕರಣ ಅವನನ್ನು ಹಿಂದಕ್ಕೆಳೆಯಿತು. ಇಡಿಯ ಕುಟುಂಬವನ್ನು ದುಃಖ, ಅಪಮಾನಗಳಿಗೊಡ್ಡುವುದು ತರವಲ್ಲವೆನಿಸಿತು. ತನ್ನ ಕರ್ತವ್ಯನಿಷ್ಠೆ ಮತ್ತು ಧರ್ಮಸಂಕಟ ಅವನನ್ನು ಸುಖದ ದಾರಿಯಿಂದ ವಿಮುಖ ಮಾಡಿದವು. ತಾನು ಕಣ್ಣಾರಳಿಸಿ ಕಂಡ ಅಸುಖದ ಹಾದಿಯಲ್ಲಿಯೇ ಆನಂದ ಕಾಲಿಡಬೇಕಾಯಿತು.

ಈ ಎಲ್ಲ ವಿಚಾರಗಳೂ ರಂಗರಾಯರ ಮನಸ್ಸಿನಲ್ಲಿ ಸುತ್ತಾಡಿದವು.

'ಎಂತಹ ತ್ಯಾಗ ಆನಂದನದು!' ಎಂದು ರಂಗರಾಯರ ಹೃದಯ ಕಂಪಿಸಿತು.

ಆನಂದ ನಿರಾಶೆಯ ಸುಳಿಯಲ್ಲಿ ಸಿಕ್ಕಿದ್ದಾನೆ. ಅವನು ಹಂಬಲಿಸುತ್ತಿದ್ದ ಸುಖವನ್ನು ಹಾಳುಮಾಡಿದವರು ತಾವೇ. ಪದ್ಮಳ ಮದುವೆಯನ್ನು ಮಾಡುವುದು ತಮ್ಮ ಕರ್ತವ್ಯವಾಗಿತ್ತು. ಅದನ್ನು ನಿರ್ವಹಿಸಲು ತಮಗೆ ಸಾಮರ್ಥ್ಯವಿಲ್ಲದೇ ಹೋಯಿತು. ಅದಕ್ಕಾಗಿ ಆನಂದನ ಪ್ರೇಮದ ಆಹುತಿ! ಆ ಆಹುತಿಯ ಕಾವು ಆರುವುದಲ್ಲ. ಬಹಶಃ ಅದು ಕತ್ತು ಚಾಚಿ ಇಡೀ ಬಾಳನ್ನು ವ್ಯಾಪಿಸಬಹುದು. ಶಾಮರಾಯರ ಬೆಂಗಳೂರು ಪ್ರವಾಸದ ಪರಿಣಾಮವಾಗಿ ಇಷ್ಟೆಲ್ಲ ವಿಚಾರಗಳೂ ರಂಗರಾಯರ ತಲೆಯಲ್ಲಿ ಸುಳಿದವು. ವರ್ಷದ ಹಿಂದೆ ಅವರು ಕಂಡ ಕನಸು ಈ ಚಿಂತೆಯಿಂದ ಅಳಿಸಿತು.

ರಂಗರಾಯರು ಆನಂದನನ್ನು ಕೂಡಲೆ ಕರೆಸಿ ಸಮಾಧಾನೋಕ್ತಿಗಳನ್ನು ಹೇಳಬೇಕೆಂದು ತವಕಪಟ್ಟರು. ಆನಂದನ ಭಗ್ನಪ್ರೇಮದ ವಿಚಾರವನ್ನಾಗಲಿ, ಅವನ ಗೃಹಜೀವನದ ವಿಚಾರವನ್ನಾಗಲಿ ಅವರು ನಾಗಮ್ಮನವರ ಕಿವಿಗೆ ಹಾಕಲಿಲ್ಲ. ಅದೆಲ್ಲ ಅವರಿಗೆ ಮನವರಿಕೆಯಾದರೆ ರೋಗಪೀಡಿತವಾದ ಅವರ ಹೃದಯಕ್ಕೆ ಮತ್ತೂ ಕಸವಿಸಿಯಾಗುತ್ತಿತ್ತು.

ಕೂಡಲೆ ಸಂಪಿಗೆಗೆ ಬರುವಂತೆ ರಂಗರಾಯರು ಆನಂದನಿಗೆ ಪತ್ರವನ್ನು ಅಂದೇ ಬರೆದರು. ಪತ್ರದಲ್ಲಿ ನಾಗಮ್ಮನವರ ಪರಿಸ್ಥಿತಿಯನ್ನೂ ಅವನನ್ನು ನೋಡಬೇಕೆಂಬ ತೀವ್ರವಾದ ಆಸೆಯನ್ನೂ ತಿಳಿಸಿದರು.

ರಾತ್ರಿ ರಂಗರಾಯರಿಗೆ ನಿದ್ರೆ ಹತ್ತಲಿಲ್ಲ. ಮನಸ್ಸಿನ ಎಚ್ಚರ ಜಾರಿತು. ಸುತ್ತಲೂ ಮಸಕು ಆವರಿಸಿತು. ತಪ್ಪು ಹೆಜ್ಜೆಯನ್ನು ಹಾಕುತ್ತ ಅವರು ಎಲ್ಲಿಗೋ ನಡೆಯುತ್ತಿದ್ದರು. ದಾರಿ ಬಹಳ ಉದ್ದವಾಗಿ, ಭೀಕರವಾಗಿ ಕಂಡಿತು.

'ಈ ದಾರಿ ನನ್ನನ್ನು ಮನೆ ಮುಟ್ಟಿಸೀತೆ!' ಎನ್ನಿಸಿತು ಅವರಿಗೆ.

ಕತ್ತಲು ಮತ್ತೂ ಮಂದವಾಯಿತು. ಕಣ್ಣು ಮುಚ್ಚಿಕೊಂಡೇ ಅವರು ಕಾಲಿಡುತ್ತಿದ್ದರು. ಮುಗಿಲುಗಳು ಗುಡುಗಿದವು.

'ನೀನು ದಾರಿ ತಪ್ಪಿದೆ. ಇನ್ನೆಲ್ಲಿದೆ ಮನೆ ನಿನಗೆ?' ಎಂದಿತು ಒಂದು ಒಂಟಿ ನಕ್ಷತ್ರ.

ಕೂಡಲೆ ಒಂದು ಕರಿ ಮೋಡ ಅದನ್ನು ಕಬಳಿಸಿತು. ರಂಗರಾಯರ ಎದೆ ಬಡಿದುಕೊಳ್ಳಹತ್ತಿತು. ಕಣ್ಣು ಕೋರೈಸುವಂತೆ ಒಂದು ಮಿಂಚು ಸಿಡಿದು ಹೋಯಿತು.

ಅದೇ ದಾರಿಯಲ್ಲಿ ಭರದಿಂದ ನಡೆದರು.

' ಈ ದಾರಿ ನಿನ್ನನ್ನು ಎಲ್ಲಿಗಾದರೂ ಸಾಗಿಸಲಿ, ನಡೆ.'

ಕಾಲು ಸೋತು, ಶಕ್ತಿ ಕುಂದಿತು.

' ಇನ್ನು ನಾನು ನಡೆಯಲಾರೆ.'

' ಧೈರ್ಯ ತಾಳು. ನಡೆ. ಯಾವುದೋ ದಾರಿಯಲ್ಲಿ ಬಹಳ ದೂರ ಬಂದುಬಿಟ್ಟಿದ್ದೀ.'

' ಈ ದಾರಿ ನನ್ನನ್ನು ಬೆಳಕಿಗೆ ಮುಟ್ಟಿಸುತ್ತದೆಯೆ ? '

' ಅದರ ಚಿಂತೆ ಈಗೇಕೆ ? '

' ಸರಿಯಾದ ದಾರಿ ತೋರಿಸು.'

' ನಿನಗೆ ಬೇಕಾದ ದಾರಿ ಈಗ ಇಲ್ಲವೇ ಇಲ್ಲ.'

' ಹಾಗಾದರೆ ಇದೇ ಸರಿಯಾದ ದಾರಿಯೆ ? '

' ಈಗ ಬೇರೆ ದಾರಿಯಿದ್ದರಲ್ಲವೆ—ಈ ದಾರಿ ಸರಿ ಅಥವಾ ಈ ದಾರಿ ತಪ್ಪು ಎನ್ನುವುದಕ್ಕೆ ? '

' ನಿನ್ನ ಅರ್ಥವನ್ನು ನೇರವಾಗಿ ತಿಳಿಸು.'

' ನೀನು ಈ ದಾರಿಯಲ್ಲಿ ಬಹಳ ದೂರ ನಡೆದುಬಿಟ್ಟಿದ್ದೀ. ಈಗ ಬೇರೆ ದಾರಿಯನ್ನು ಚಿಂತಿಸಿ ಸುಖವಿಲ್ಲ.'

' ಇದು ತಪ್ಪು ದಾರಿಯೆಂದೇ ನಿನ್ನ ಇಂಗಿತವೆ ? '

' ಅದನ್ನು ನಾನು ಹೇಳುವುದಿಲ್ಲ. ಬದುಕಿ ತಿಳಿದುಕೋ.'

ರಂಗರಾಯರು ಕಂಗಾಲಾಗಿ ಮುಗ್ಗರಿಸುತ್ತ ಮುಂದೆ ನಡೆದರು. ಮಳೆ ಬೀಳತೊಡಗಿತು. ತಲೆ ಗಿರ್ರನೆ ಸುತ್ತಹತ್ತಿತು. ಎಷ್ಟು ದೂರ ನಡೆದರೋ—ಅವರಿಗೇ ತಿಳಿಯದು. ಮನೆಯನ್ನು ಮುಟ್ಟಿದಂತೆ ಭ್ರಾಂತಿಯಾಯಿತು.

' ಯಾವ ಮನೆಯಿದು ! ' ಎಂದು ಅವರಿಗೇ ಗುರ್ತಿಸಲಾಗಲಿಲ್ಲ.

ಕಣ್ಣುಬಿಟ್ಟು ನೋಡಿದರು. ಆಗಲೇ ಬೆಳಕಾಗಿತ್ತು. ಅವರು ಎಂದೂ ಅಷ್ಟು ಹೊತ್ತು ಮಲಗಿರಲಿಲ್ಲ.

೩೩

“ಹಾಗಾದರೆ ಶಿಶುವಿಹಾರದ ವಾರ್ಷಿಕೋತ್ಸವಕ್ಕೆ ನೀವು ನಿಲ್ಲುವ ಹಾಗಿಲ್ಲ” ಎಂದು ಕೇಳಿದಳು ಸರೋಜ.

‘ಆಗುವುದಿಲ್ಲ’ ಎಂಬ ಉತ್ತರ ಅವಳ ಪ್ರಶ್ನೆಯಲ್ಲಿಯೇ ಅಡಕವಾಗಿದ್ದಿತು.

“ಹೇಗೆ ಸಾಧ್ಯ, ಸರೋಜ? ಅಮ್ಮನಿಗೆ ಹೃದಯದ ಬೇನೆ ಹೆಚ್ಚಿದೆಯಂತೆ. ಸಂಜೆಗೆ ಹೊರಡುತ್ತೇನೆ” ಎಂದು ತಾನೊಬ್ಬ ಅಪರಾಧಿಯಂತೆ ಆನಂದ ಉತ್ತರ ಕೊಟ್ಟ.

ಸರೋಜ ಸಂಪಿಗೆಯ ಕಾಗದವನ್ನು ಓದಿದ್ದಳು. ಆನಂದನ ನಿರ್ಧಾರ ಅವಳಿಗೂ ಸರಿಯೆಂದು ತೋರಿತು. ಆದರೂ ಆ ಪ್ರಕರಣ ಅವಳ ಮನಸ್ಸಿನಲ್ಲಿ ಬೇರೂರಿದ್ದ ಯಾವುದೋ ಭಾವನೆಯನ್ನು ಬಲಿಸಿತು.

ಭಾನುವಾರ ಶಿಶುವಿಹಾರದ ವಾರ್ಷಿಕೋತ್ಸವ ನಡೆಯಲು ವ್ಯವಸ್ಥೆಗಳು ಸಂಭ್ರಮದಿಂದ ಸಾಗಿದ್ದವು. ಆ ಸಮಾರಂಭಕ್ಕೆ ಸುಂದರರಾಯರನ್ನು ಅಧ್ಯಕ್ಷರನ್ನಾಗಿ ಮಾಡಬೇಕೆಂದು ಸಂಸ್ಥೆಯ ಕಾರ್ಯಕಾರಿ ಸಮಿತಿ ತೀರ್ಮಾನಿಸಿತ್ತು. ಆಹ್ವಾನಕ್ಕೆ ಸುಂದರರಾಯರೂ ಒಪ್ಪಿದ್ದರು.

ಆ ಬಾರಿಯ ವಾರ್ಷಿಕೋತ್ಸವದಲ್ಲಿ ರಾಜುವಿನ ಕಲಾಕೃತಿಯೊಂದು ಪ್ರದರ್ಶಿತವಾಗುವುದಿತ್ತು. ತಾನೊಬ್ಬ ಆದರ್ಶ ಕಲಾವಿದನಾಗಬೇಕೆಂಬುದು ಅವನ ಜೀವಿತದ ಆಕಾಂಕ್ಷೆಯಾಗಿತ್ತು. ಆ ಆಕಾಂಕ್ಷೆಯಲ್ಲಿ ಅವನು ಪ್ರತಿಷ್ಠಿಸಿದ್ದ ಶ್ರದ್ಧೆ ಅವನನ್ನು ಅದರ ತುದಿಯ ಮೆಟ್ಟಲುಗಳಿಗೆ ಏರಿಸಿತ್ತು. ಮನುಷ್ಯ ಸ್ವಭಾವದ ಪ್ರೇರೇಪಣೆಗಳನ್ನು ಉದ್ದೀಪಿಸುವ ಶಕ್ತಿಗಳಿಗೆ ರಾಜು ಬೇಗ ಮನಸೋಲುತ್ತಿದ್ದ. ಅವನು ಸೌಂದರ್ಯದ ಸನ್ನಿಧಾನದಲ್ಲಿದ್ದಾಗ ಆ ಸ್ವಭಾವ ಲಕ್ಷಣ ಅವನ ಶೃಂಗಾರಭಾವಗಳನ್ನು ಕೆಣಕುತ್ತಿತ್ತು. ಕಲಾವಿದನಿಗೆ ಸಹಜವಾದ ಭಾವಪುಷ್ಟಿ ಆಗ ಅವನನ್ನು ಮೈಮರೆಯುವಂತೆ ಮಾಡುತ್ತಿತ್ತು.

ರಾಜು ತನ್ನ ಆದರ್ಶಸಾಧನೆಯಲ್ಲಿ ಬಹಳ ದೂರ ಮುಂದೆ ಹೋಗಿದ್ದ. ಬಹಳ ವರ್ಷಗಳಿಂದ ಕೃಷಿ ಮಾಡಿದ ಅವನ ಕಲೆ ತನ್ನ ನೂತನ ಚಿತ್ರದಲ್ಲಿ ಹೊಸ ಗುರುತನ್ನು ಮಾಡಿದ್ದಿತು.

ವಾರ್ಷಿಕೋತ್ಸವ ಸಮಯದಲ್ಲಿ ಸರೋಜ ಆನಂದನೊಡನೆ ಹರ್ಷದಿಂದ

ಮೆರೆಯಬಹುದೆಂದು ಮೂರು ದಿನಗಳಿಂದಲೂ ಕನಸು ಕಾಣುತ್ತಿದ್ದಳು. ಆದರೆ ಸಂಪಿಗೆಯಿಂದ ಬಂದ ಕಾಗದ ಆನಂದನನ್ನು ತನ್ನಿಂದ ಅಗಲುವಂತೆ ಮಾಡಿತು. ಒಂದಲ್ಲ ಒಂದು ಪ್ರಸಂಗ ಅವಳ ಮತ್ತು ಆನಂದನ ಅಲ್ಪ ಸಂತೋಷಕ್ಕೆ ಅಡ್ಡಿ ಬರುತ್ತಿತ್ತು. ಅಂತಹ ಒಂದೊಂದು ಪ್ರಸಂಗವೂ ಸರೋಜಳ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡಿತ್ತು. ಕೆಲವು ವೇಳೆ ಆನಂದನ ಎಚ್ಚರ ತಪ್ಪಿದ ಮನಸ್ಸೂ ಅದಕ್ಕೆ ಕಾರಣವಾಗುತ್ತಿತ್ತು. ಮತ್ತೊಂದು ವೇಳೆ, ಅವನ ಎಚ್ಚರವನ್ನು ಮೀರಿದ ಬೇರೆ ಯಾವುದೋ ಕಾರಣವಾಗಿರುತ್ತಿತ್ತು.

ಆನಂದನ ಮನಸ್ಸು ಇಡೀ ದಿನ ಭಾರವಾಗಿತ್ತು. ಕಾಲೇಜ್ ಕೆಲಸ ಆ ದಿನ ಹೇಗೋ ತೇಲಿತು. ಹೃದಯರೋಗದಿಂದ ಹಾಸಿಗೆ ಹಿಡಿದಿದ್ದ ತಾಯಿಯ ಚಿತ್ರ ಅವನ ಮನಸ್ಸಿನ ಮೇಲೆ ಒತ್ತಿ ಕಾಣುತ್ತಿತ್ತು. ಸಂಜೆಯ ಗಾಡಿಗೆ ಅವನು ಸಂಪಿಗೆಗೆ ಹೊರಟ. ಗಾಡಿ ಓಡುತ್ತಿರುವಂತೆ ಹೊರಗೆ ಚಕ್ರಾಕಾರದಲ್ಲಿ ಸುತ್ತುತ್ತಿದ್ದ ನಿಸರ್ಗ ದೃಶ್ಯಗಳು ಅವನ ತಲೆಯಲ್ಲಿಯ ಭ್ರಾಮಕ ಚಿತ್ರಗಳಂತೆ ಪರಿಭ್ರಮಿಸುತ್ತಿದ್ದವು.

ಮನೆಯನ್ನು ಹೊಗುತ್ತಲೇ ಆನಂದನಿಗೆ ಒಂದು ಬಾರಿ ಗಟ್ಟಿಯಾಗಿ ಅಳುವಂತಾಯಿತು. ಮನಸ್ಸನ್ನು ಹೇಗೋ ಹಿಡಿತದಲ್ಲಿಟ್ಟುಕೊಂಡ. ದುಃಖದಿಂದಲೇ ನೊಂದು ಹಣ್ಣಾಗಿದ್ದ ಅವನ ಮನಸ್ಸು ಅದನ್ನೇ ಅಣಕಿಸುವ ಸ್ಥಿತಿಯಲ್ಲಿತ್ತು. ಮುಂದೆ ಯಾವ ಆಸೆ ಉದ್ದೇಶಗಳೂ ಉಳಿಯದೆ ಬಾಳಿನ ಬೆಳ್ದಿಂಗಳಿಲ್ಲ ಅಸ್ತಮಿಸಿ ಸವೆದ ಎರಡು ಜೀವಗಳು ಆ ಕುಟೀರದಲ್ಲಿ ವಾಸವಾಗಿದ್ದವು.

ಆನಂದನನ್ನು ನೋಡಿ ನಾಗಮ್ಮನವರ ಸಂತೋಷದ ಚಿಲುಮೆ ಉಕ್ಕಿತು. ತೆಗೆದುಹೋಗಿದ್ದ ಅವನ ಮೈಯನ್ನು ಕಂಡು ಕ್ಷಣದಲ್ಲಿ ಆ ಚಿಲುಮೆ ಬತ್ತಿ ಹೋಯಿತು.

" ಅಪ್ಪ, ಆನಂದ, ಬಂದೆಯಾ ! " ಎಂದಿತು ಅವರ ಉಸಿರು.

ನಾಗಮ್ಮನವರು ನಿಶ್ಶಕ್ತರಾಗಿದ್ದರು. ಆನಂದ ಬಹಳ ಎಚ್ಚರಿಕೆಯಿಂದ ವರ್ತಿಸಿದ. ತನ್ನ ಮನಸ್ಸನ್ನು ತೋರಗೊಡಲಿಲ್ಲ. ಅವನು ತಾಯಿಯ ಹಾಸಿಗೆಯ ಬಳಿಯಲ್ಲಿಯೇ ಬಹಳ ಹೊತ್ತು ಕುಳಿತಿರುತ್ತಿದ್ದ. ತಾಯಿಯ ಸನ್ನಿಧಿ ಅವನ ಮನಸ್ಸಿಗೂ ಎಷ್ಟೋ ಶಾಂತಿಯನ್ನುಂಟುಮಾಡಿತು.

೩೪

ರಂಗರಾಯರ ಹೃದಯ ಭಾರವಾಗಿತ್ತು. ಅದನ್ನು ಹಗುರ ಮಾಡಿಕೊಳ್ಳಲು ಅವರು ತಮ್ಮ ಕೊಟಡಿಯಲ್ಲಿ ಆನಂದನೊಡನೆ ಅಂತರಂಗವನ್ನು ಬಿಚ್ಚಿ ಮಾತನಾಡಿದರು. ಆನಂದನ ಎಲ್ಲ ವಿಚಾರಗಳನ್ನೂ ತಿಳಿದವರಂತೆ ಅವರು ನೇರವಾಗಿ ಮಾತನಾಡಿದರು.

"ಆನಂದ, ನಡೆದುಹೋದ ಕತೆಯೆಲ್ಲ ನನಗೆ ಗೊತ್ತಾಗಿದೆ. ಎಲ್ಲ ತಪ್ಪುಗಳನ್ನು ಮಾಡಿದವನು ನಾನೇ."

"ಆ ಕತೆಯನ್ನು ಯಾರು ಹೇಳಿದರು ?"

"ಶಾಮರಾಯರು."

ಶಾಮರಾಯರು ಎಲ್ಲ ವಿಷಯಗಳನ್ನೂ ಪತ್ತೆಹಚ್ಚಿದ್ದುದರಲ್ಲಿ ಆನಂದನಿಗೆ ಸಂದೇಹ ಉಳಿಯಲಿಲ್ಲ.

"ನಿನ್ನದೇನಿದೆ ತಪ್ಪು ?"

"ಪರಿಹಾರವನ್ನೇ ಮಾಡಲಾಗದ ಕೇಡನ್ನು ನಿನಗೆ ಮಾಡಿದ್ದೇನೆ."

"ನಿನ್ನನ್ನು ನಿಂದಿಸುವುದು ಸರಿಯಲ್ಲ."

"ಕೇಡು ಮಾಡಿದವರನ್ನು ನಿಂದಿಸುವುದು ಸರಿಯಲ್ಲವೆ ?"

"ಸರಿಯಿಲ್ಲದೆಯೂ ಇರಬಹುದು."

"ಹೇಗೆ ?"

"ಒಬ್ಬ ವ್ಯಕ್ತಿಯನ್ನು ಕೇಡಿಗನೆಂದು ನಿಂದಿಸಬೇಕಾದರೆ ಅವನ ಉದ್ದೇಶದಲ್ಲಿ ಕೇಡಿರಬೇಕು."

ರಂಗರಾಯರಿಗೆ ಅದು ಸತ್ಯವೆಂದೆನಿಸಿತು

"ಆನಂದ, ನನ್ನ ಉದ್ದೇಶವೆಲ್ಲ ಆಶಾದಾಯಕವಾಗಿತ್ತು. ಆದರೆ ಉತ್ತದ್ದು ಮಾವು, ಉಂಡದ್ದು ಬೇವಾಯಿತು."

"ಕಾರ್ಯದ ಉದ್ದೇಶದಲ್ಲಿ ಹಿತಚಿಂತನೆಯಿದ್ದು ಪರಿಣಾಮದಲ್ಲಿ ಕೇಡಿದ್ದರೆ ಅದು ವ್ಯಕ್ತಿಯ ಉದ್ದೇಶವನ್ನು ಮೀರಿದ ವಿಷಯ. ಅದಕ್ಕಾಗಿ ವ್ಯಕ್ತಿಯನ್ನು ನಿಂದಿಸಿದರೆ ಅದು ತಿಳಿಗೇಡಿತನ."

"ನಿನ್ನ ಪ್ರೇಮಭಂಗಕ್ಕಾಗಿ ನಾನು ವಿಷಾದಪಡುತ್ತೇನೆ."

"ಅದಕ್ಕೆಲ್ಲ ನೀನಲ್ಲ ಕಾರಣ."

“ ಹಾಗಾದರೆ ಯಾರು ? ”

“ ಯಾವ ವ್ಯಕ್ತಿಗಳೂ ಅಲ್ಲ.”

“ ಮತ್ತೆ ? ”

“ ವ್ಯಕ್ತಿಗಳನ್ನು ಮೀರಿದ ಯಾವುದೋ ಶಕ್ತಿ.”

“ ಆ ಶಕ್ತಿಯನ್ನು ಎದುರಿಸುವ ಯುಕ್ತಿ ನಮಗಿಲ್ಲದೆ ಹೋಯಿತು.”

“ ಯುಕ್ತಿಯನ್ನು ಮೀರಿದೆ ಆ ಶಕ್ತಿ.”

ರಂಗರಾಯರು ಆನಂದನ ವಿಮರ್ಶೆಯನ್ನು ಒಪ್ಪಿಕೊಂಡರು.

“ ನಿನ್ನ ವಿಚಾರಸರಣಿ ನನ್ನ ಬುದ್ಧಿಗೆ ಒಪ್ಪಿಗೆಯಾದರೂ ಹೃದಯಕ್ಕೆ ಸಮಾಧಾನವಿಲ್ಲ.”

“ ವಿಚಾರಸರಣಿ ಬುದ್ಧಿಯನ್ನು ತೃಪ್ತಿಪಡಿಸಬಹುದು , ಭಾವನೆಗಳನ್ನು ತೃಪ್ತಿಪಡಿಸಲಾರದು. ಅದಿಲ್ಲದೆ ಹೃದಯಕ್ಕೆ ಸಮಾಧಾನವೆಲ್ಲಿದೆ ? ”

“ ನೀನು ಜೀವನದಲ್ಲಿ ಸಮಾಧಾನ ತಂದುಕೊಳ್ಳಲಾರೆಯಾ, ಆನಂದ ? ”

“ ಸಮಾಧಾನ ತಂದುಕೊಳ್ಳಲೇ ಬೇಕಲ್ಲ ” ಎಂದು ಆನಂದ ಒಪ್ಪಿಗೆಯನ್ನು ಸೂಚಿಸಿದ.

“ ನಿನಗೆ ಜೀವನದಲ್ಲಿ ನಿರುತ್ಸಾಹವೆ, ಆನಂದ ? ”

“ ಉತ್ಸಾಹ ನಿರುತ್ಸಾಹಗಳು ನನ್ನ ತಿಳಿವಳಿಕೆಯಿಲ್ಲದೇ ಬೇರೆಯವರಿಗೆ ತೋರ್ಪಡಬಹುದು. ಬೇರೆಯವರು ಅದನ್ನು ಗುರ್ತಿಸಬೇಕು.”

“ ಗುರ್ತಿಸಿದ್ದಾರಂತೆ.”

“ ಯಾರು ? ”

“ ಸರೋಜ.”

ಆನಂದ ತಾನು ಊಹೆ ಮಾಡಿದ್ದುದೆಲ್ಲ ಸರಿಯೆನಿಸಿತು.

“ ಅದಕ್ಕೆ ಕಾರಣವಿರಬಹುದು.”

“ ಸರೋಜ ಅದಕ್ಕೆ ಕಾರಣಳೆ ? ”

“ ಅಲ್ಲ.”

“ ಅವಳಲ್ಲಿ ಯಾವ ತಪ್ಪೂ ಇಲ್ಲ ಎನ್ನುತ್ತೀಯಾ ? ”

“ ಯಾವ ತಪ್ಪನ್ನೂ ನಾನು ಅವಳಲ್ಲಿ ಕಂಡಿಲ್ಲ.”

“ ಅವಳಿಗೂ ಜೀವನದಲ್ಲಿ ಅಸಂತೋಷವೆ ? ”

" ಹಾಗೇ ಕಾಣುತ್ತದೆ."

ಆ ಉತ್ತರವನ್ನು ಕೊಟ್ಟಾಗ ಆನಂದ ತಾನು ನಿಜವಾಗಿ ಭಾವಿಸಿದ್ದುದನ್ನು ನುಡಿದಿದ್ದ.

" ಯಾವ ತಪ್ಪೂ ಇಲ್ಲದೆ ಸರೋಜಳಿಗೇಕೆ ಜೀವನದಲ್ಲಿ ಅಸಂತೋಷ ? "

ಆ ಪ್ರಶ್ನೆ ಎದ್ದಾಗ ಆನಂದನಿಗೆ ಮುಚ್ಚಿದ್ದ ಕಣ್ಣು ತೆರೆದಂತಾಯಿತು. ತಾನು ಸರೋಜಳೊಡನೆ ಅನೀತಿಯಿಂದ ವರ್ತಿಸುತ್ತಿದ್ದಂತೆ ಅವನಿಗೆ ಅನ್ನಿಸಿತು. ಅದನ್ನು ಅವನು ಒಪ್ಪಿಕೊಂಡ.

" ಅವಳ ಅಸಂತೋಷದಲ್ಲಿ ನನ್ನ ತಪ್ಪಿರಬಹುದು. ಅವಳನ್ನು ಸಂತೋಷ ಪಡಿಸಲು ನಾನು ಪ್ರಯತ್ನಿಸುತ್ತೇನೆ."

ಆ ಮಾತನ್ನು ಕೇಳಿ ರಂಗರಾಯರಿಗೆ ಸ್ವಲ್ಪ ಸಮಾಧಾನವಾಯಿತು. ಸರೋಜಳನ್ನು ಸಂತೋಷಪಡಿಸಬೇಕಾದರೆ ಆನಂದನು ಸಂತೋಷದಿಂದಿರಲೇ ಬೇಕಾಗುವುದು. ಪರಸ್ಪರ ಸಂತೋಷವೇ ಬದುಕಿನ ಸುಖ ಎಂದು ಅವರು ಯೋಚಿಸಿದರು.

" ಪದ್ಮಳ ಸಂಸಾರ ಚೆನ್ನಾಗಿದೆಯೆ ? " ಎಂದು ಆನಂದ ಪ್ರಶ್ನಿಸಿದ.

" ಅದೂ ಚಿಂತೆಯಾಗಿದೆ. ನನ್ನ ಈಚಿನ ಮೂರು ಕಾಗದಗಳಿಗೂ ದೇವನಹಳ್ಳಿಯಿಂದ ಉತ್ತರವಿಲ್ಲ. ಪದ್ಮಳಿಗಾಗಿ ನೀನು ಎಷ್ಟೊಂದು ತ್ಯಾಗ ಮಾಡಿದೆ."

" ಆ ತ್ಯಾಗ ಫಲಿಸಿದರೆ ನನ್ನ ಮನಸ್ಸಿಗೆ ಸಮಾಧಾನ."

ಆನಂದ ಆ ಮಾತನ್ನಾಡಿದಾಗ ಅವನಿಗೆ ಅದರಲ್ಲಿ ಏನೋ ತಪ್ಪು ತೋರಿತು.

' ತ್ಯಾಗದ ಧ್ಯೇಯ ಒಳ್ಳೆಯದಾಗಿದ್ದರೆ ಆಗುವ ಪರಿಣಾಮದಿಂದ ಅದನ್ನು ವ್ಯರ್ಥವೆನ್ನಬಾರದು ' ಎನ್ನಿಸಿತು ಅವನಿಗೆ.

' ತ್ಯಾಗದ ಪುಣ್ಯ ಪರಿಣಾಮದಲ್ಲಿ ಕಾಣದಿದ್ದರೂ ಉದ್ದೇಶದಲ್ಲಿದೆ ' ಎಂದಿತು ಅವನ ಸೂಕ್ಷ್ಮಬುದ್ಧಿ.

ಆನಂದನೂ ರಂಗರಾಯರೂ ಎಷ್ಟೋ ಹೊತ್ತು ಮಾತನಾಡಿದರು. ಅವರು ತರ್ಕದ ಜಾಲದಲ್ಲಿ ತೊಳಲಿ ಅಲ್ಲಿ ಸಮಾಧಾನವನ್ನು ಕಾಣಲಾರದೆ ಸುಮ್ಮನಾಗ ಬೇಕಾಯಿತು.

೩೫

ಅಂದು ಶಿಶುವಿಹಾರದ ವಾರ್ಷಿಕೋತ್ಸವ. ಮಂದಿರ ತಳಿರುತೋರಣಗಳಿಂದ ಶೋಭಾಯಮಾನವಾಗಿತ್ತು. ಬೆಳಗ್ಗೆ ಮಕ್ಕಳ ಕ್ರೀಡಾಸ್ಪರ್ಧೆಗಳು ನಡೆಯುತ್ತಿದ್ದವು. ಬಣ್ಣಬಣ್ಣದ ಬಟ್ಟೆಗಳನ್ನು ತೊಟ್ಟ ಮಕ್ಕಳು ಕುಣಿದಾಡುತ್ತಿದ್ದರು. ರಸ್ತೆಯಲ್ಲಿ ಓಡಾಡುತ್ತಿದ್ದ ಜನ ಆ ಹಬ್ಬವನ್ನು ನೋಡಲು ಸ್ವಲ್ಪ ಹೊತ್ತು ನಿಲ್ಲುತ್ತಿದ್ದರು. ಮೈದಾನದ ಮಧ್ಯೆ ಇಂದಿರೆ ಓಡಾಡುತ್ತಿದ್ದಳು. ಅವಳು ಪ್ರೇಕ್ಷಕರ ನಯನಗಳನ್ನು ಸೆಳೆದಿದ್ದಳು. ಅವಳ ಮನಸ್ಸು ಹಕ್ಕಿಯಂತೆ ಮಕ್ಕಳೊಡನೆ ಉಲ್ಲಾಸದಿಂದ ತೂರಾಡುತ್ತಿತ್ತು. ಬಿಸಿಲೇರುತ್ತಿರುವಂತೆ ಬೆಳಗಿನ ಕಾರ್ಯಕ್ರಮ ಮುಕ್ತಾಯವಾಯಿತು.

ಸಂಜೆಯ ಕಾರ್ಯಕ್ರಮ ನಗರದ ಬಹುಮಂದಿ ಗಣ್ಯವ್ಯಕ್ತಿಗಳನ್ನು ಆಕರ್ಷಿಸುತ್ತಿತ್ತು. ಸಂಸ್ಥೆಯ ಮಕ್ಕಳ ತಂದೆತಾಯಿಗಳೆಲ್ಲ ಆ ಸಂದರ್ಭಕ್ಕೆ ನೆರೆಯುವುದು ರೂಢಿಯಾಗಿತ್ತು. ರಾಜು ಆಹ್ವಾನಿತರನ್ನು ಬರಮಾಡಿಕೊಳ್ಳುವುದರಲ್ಲಿ ಆಸಕ್ತನಾಗಿದ್ದ. ಇಂದಿರೆ ಮಹಿಳೆಯರನ್ನು ಸ್ವಾಗತಿಸುತ್ತಿದ್ದಳು.

ಆಹ್ವಾನಿತರು ವಸ್ತುಪ್ರದರ್ಶನವನ್ನು ನೋಡಿ ಮನಮೆಚ್ಚಿ ಸಂಸ್ಥೆಯನ್ನು ಪ್ರಶಂಸಿಸಿದರು. ಆ ಮನೋರಂಜನೆಯನ್ನನುಭವಿಸಿ ತಮ್ಮ ಆಸನಗಳಲ್ಲಿ ಕುಳಿತರು. ಪ್ರದರ್ಶನಕ್ಕಾಗಿ ಇಟ್ಟಿದ್ದ ಒಂದೊಂದು ವಸ್ತುವಿನಲ್ಲಿಯೂ ಮಕ್ಕಳ ಮೊಳಕೆಯಲ್ಲಿದ್ದ ಬಗೆಬಗೆಯ ಅಭಿರುಚಿಗಳು ಕಾಣುತ್ತಿದ್ದವು.

ರಾಜು ರಚಿಸಿದ್ದ ಕಲಾಕೃತಿಗಳ ಪ್ರದರ್ಶನ ವಸ್ತುಪ್ರದರ್ಶನದ ಒಂದು ಮುಖ್ಯ ಅಂಗವಾಗಿತ್ತು. ಅದು ಎಲ್ಲರ ಹೃನ್ನಯನಗಳನ್ನೂ ಅಪಹರಿಸುವಂತಿತ್ತು. ಆ ಸಮೂಹದಲ್ಲಿರಿಸಿದ್ದ ಒಂದೊಂದು ಕಲಾಕೃತಿಯೂ ಒಂದೊಂದು ಭಾವನೆಯನ್ನು ಕೆರಳಿಸಿ ಊಹೆಯ ಸುಳಿಯಲ್ಲಿ ಅದನ್ನು ತೇಲಿಬಿಡುತ್ತಿತ್ತು. ಆ ಕಲಾರಾಶಿಯ ಮಧ್ಯದಲ್ಲಿ ವಿಶೇಷ ಪ್ರಭೆ ಬೀರುತ್ತಿದ್ದ ಒಂದು ಚಿತ್ರ ವಿರಾಜಿಸುತ್ತಿತ್ತು. ಅದರಲ್ಲಿ ಕಲಾದೇವತೆಯ ಪ್ರಸನ್ನತೆಯನ್ನು ರಾಜು ಮನಗಂಡಿದ್ದ. ಅವನು ತನ್ನ ಆತ್ಮವನ್ನೇ ಅದರಲ್ಲಿ ಪ್ರಕಾಶಪಡಿಸಿದ್ದ.

ಸೃಷ್ಟಿಯ ಹೊಯ್ದಾಟವನ್ನೇ ಆ ಚಿತ್ರದಲ್ಲಿ ಚಿತ್ರಿಸಲು ರಾಜು ಪ್ರಯತ್ನಿಸಿದ್ದ. ಭಾವನಾಮಯವಾದ ಅದರ ಒಂದೊಂದು ರೇಖೆಯಲ್ಲಿಯೂ ವೈಶಿಷ್ಟ್ಯ ಕಾಣುತ್ತಿತ್ತು. ಬೆಳಕು ದಿಗಂತದಾಚೆ ತನ್ನ ತೋಳನ್ನು ಚಾಚಿ ಬೆಳಗುತ್ತಿತ್ತು.

ಕತ್ತಲು ಮಂದವಾಗಿ ಹೆಪ್ಪುಗಟ್ಟುತ್ತಾ ಬೆಳಕನ್ನು ನಾಲ್ಕು ದಿಕ್ಕುಗಳಿಂದಲೂ ನುಂಗಲು ಹವಣಿಸುತ್ತಿತ್ತು. ಇದೀ ಸೃಷ್ಟಿಯೇ ಬೆಳಕು–ಕತ್ತಲಿನ ಆ ಹೋರಾಟವನ್ನು ತೆಪ್ಪಗೆ ನೋಡುತ್ತಿತ್ತು.

'ಸೃಷ್ಟಿಯಲ್ಲಿ ಇನ್ನು ಬೆಳಕೇ · ಇರಬಾರದು—' ಮೊರೆಯುತ್ತಿತ್ತು ಕತ್ತಲು.

'ಈ ಪಿಶಾಚಿಯ ತೋಳನ್ನು ನಾನು ಕತ್ತರಿಸಲೇ ಬೇಕು—' ಬೆಳಕು ಕ್ಷೀಣಿಸುತ್ತಿದ್ದ ತನ್ನ ಕಿರಣಗಳನ್ನು ದೂರಕ್ಕೆ ಮುಟ್ಟಿಸುತ್ತಿತ್ತು.

'ನನ್ನೆಡೆಯಲ್ಲಿ ನಿನಗೆ ಸ್ಥಳವೆಲ್ಲಿದೆ? ನಿನ್ನನ್ನು ಬೇಗ ಅಳಿಸಿಬಿಡುತ್ತೇನೆ.'

'ನಿಜ, ನನಗೂ ನಿನಗೂ ಸೃಷ್ಟಿಯಲ್ಲಿ ಒಟ್ಟಿಗೆ ಸ್ಥಳವಿಲ್ಲ. ಆದರೆ ನಿನಗೆ ಈ ಸುಂದರ ಪ್ರಕೃತಿಯನ್ನೇ ಆಹುತಿ ಮಾಡಲಾರೆ.'

'ನಿನ್ನನ್ನೂ ಸೃಷ್ಟಿಯನ್ನೂ ಒಟ್ಟಿಗೇ ಕಬಳಿಸುತ್ತೇನೆ. ನನ್ನ ಬಲವನ್ನು ನೀನು ಎದುರಿಸಲಾರೆ.'

'ನಿನ್ನ ರಾಕ್ಷಸೀ ತೋಳನ್ನು ನನ್ನ ತೇಜೋಮಯವಾದ ಒಂದೇ ಒಂದು ಕಿರಣದಿಂದ ದೂರಕ್ಕೆ ನೂಕಿಬಿಡುತ್ತೇನೆ.'

'ಎಲ್ಲ ಕನಸು. ಇನ್ನೆಲ್ಲಿದೆ ನಿನಗೆ ಎಡೆ?' ಎಂದು ಕತ್ತಲು ತನ್ನ ಸಾವಿರ ತೋಳಿನಿಂದ ಬೆಳಕನ್ನು ಸುತ್ತುಗಟ್ಟುತ್ತಿತ್ತು.

ಜಗತ್ತಿನಲ್ಲಿ ಸ್ವಲ್ಪವಾಗಿರುವ ಒಳಿತು ಮಹತ್ತರವಾಗಿರುವ ಕೇಡಿನೊಡನೆ ಸದಾ ಹೆಣಗಾಡುತ್ತಿರುವ ಭಾವ ಆ ಚಿತ್ರದಲ್ಲಿತ್ತು.

ಸಂಜೆ ಸುಂದರರಾಯರು ಅಧ್ಯಕ್ಷತೆ ವಹಿಸಿದ್ದರು. ಅವರು ಸರೋಜಳೊಡನೆ ಕಾರಿನಿಂದ ಇಳಿಯುತ್ತಲೇ ವ್ಯವಸ್ಥಾಪಕವರ್ಗ ಸ್ವಾಗತಿಸಿತು. ಸುಶೀಲಾಬಾಯಿ ಸರೋಜಳ ಕೈ ಹಿಡಿದುಕೊಂಡು ಜೊತೆಯಲ್ಲಿ ನಡೆದರು. ಸುಂದರರಾಯರು ವಸ್ತುಪ್ರದರ್ಶನವನ್ನೆಲ್ಲ ಗಮನವಿಟ್ಟು ನೋಡಿದರು. ರಾಜುವಿನ ಹೊಸ ಕಲಾ ಕೃತಿಯನ್ನು ನೋಡುತ್ತಿರುವಂತೆಯೇ ಅವರ ರಸಾಭಿಜ್ಞತೆ ಭಾವತರಂಗಗಳಲ್ಲಿ ತೇಲಾಡಿತು. ಅದನ್ನು ನೋಡಿದಾಗ ಒಂದೊಂದು ಕ್ಷಣವೂ ಒಂದೊಂದು ಭಾವ ಬಿತ್ತರಿಸುತ್ತಿತ್ತು. ವಸ್ತುಪ್ರದರ್ಶನಶಾಲೆ ಸರೋಜಳಿಗೆ ಭ್ರಮೆಯನ್ನು ಉಂಟುಮಾಡಿತು. ರಾಜುವಿನ ಕಲೆಯನ್ನು ಅವಳು ಪೂರ್ತಿಯಾಗಿ ಮೆಚ್ಚಿಕೊಂಡಳು.

ರಾಜು ಸರೋಜಳಿಗೆ ಆಸನವನ್ನು ತೋರಿಸಿದ. ವೇದಿಕೆಯ ಮುಂದೆ ಒಂದು ಸ್ಥಳದಲ್ಲಿ ಅವಳು ಕುಳಿತಳು. ರಾಜುವಿನ ಮುಖದ ಮೇಲೆ ಸುಳಿನಗೆ ಇತ್ತು. 'ಅದೇ ನಗೆ ಆನಂದನ ಮುಖದ ಮೇಲಿದ್ದಿದ್ದರೆ ತಾನು ಎಷ್ಟು ಸುಖವಾಗಿರಬಹುದಿತ್ತು' ಎನ್ನಿಸಿತು ಸರೋಜಳಿಗೆ. ಸ್ವಲ್ಪ ಹೊತ್ತಿನಲ್ಲಿ ಇಂದಿರೆ ಸರೋಜಳ ಪಕ್ಕದಲ್ಲಿ ಬಂದು ಕುಳಿತಳು. ಅವರಿಬ್ಬರ ಮುಖಗಳೂ ಪೂರ್ತಿಯಾಗಿ ಕಾಣುವಂತೆ ರಾಜು ತನ್ನ ಸ್ಥಳ ಹುಡುಕಿಕೊಂಡ.

ಸುಂದರರಾಯರು ವೇದಿಕೆಯನ್ನು ಹತ್ತುತ್ತಲೇ ಕರತಾಡನವಾಯಿತು. ಸುಶೀಲಾಬಾಯಿ ಅವರ ಪಾರ್ಶ್ವದಲ್ಲಿ ಕುಳಿತುಕೊಂಡರು. ಸಂಸ್ಥೆಯ ಅಧ್ಯಕ್ಷರು ಸುಂದರರಾಯರನ್ನು ಆಡಂಬರದ ಮಾತುಗಳಿಂದ ಸಭಿಕರಿಗೆ ಪರಿಚಯ ಮಾಡಿಕೊಟ್ಟರು. ಸುಶೀಲಾಬಾಯಿ ಸಂಸ್ಥೆಯ ವಾರ್ಷಿಕ ವರದಿಯನ್ನು ಓದಿದರು. ಅನಂತರ ಮಕ್ಕಳ ನಾಟಕ ಆರಂಭವಾಯಿತು. ಕಾರ್ಯಕ್ರಮ ಮುಗಿದಾಗ ನಿರೀಕ್ಷಿಸಿದುದಕ್ಕಿಂತ ವೇಳೆ ಬಹಳ ಮುಂದೆ ಸರಿದಿತ್ತು. ಹೊತ್ತು ಮೀರಿದ್ದುದರಿಂದ ಸುಂದರರಾಯರು ಭಾಷಣವನ್ನು ಬೆಳೆಸದೆ, ಸಂಸ್ಥೆಯ ಕಾರ್ಯದಕ್ಷತೆಗಾಗಿ ಅಭಿನಂದನೆ ಸಲ್ಲಿಸಿ, ಸುಶೀಲಾಬಾಯಿಯ ಸಾಮರ್ಥ್ಯಕ್ಕಾಗಿ ಧನ್ಯವಾದಗಳನ್ನರ್ಪಿಸಿದರು. ಸಭೆ ಆಗಲೇ ಚದುರುತ್ತಿತ್ತು. ರಾಜುವಿನ ಕಲೆಯನ್ನು ಪ್ರಶಂಸಿಸಿದಾಗ ಬಹಳ ಕರತಾಡನವಾಯಿತು. ಕೊನೆಯದಾಗಿ, ಈ ಸೇವಾಕ್ಷೇತ್ರದಲ್ಲಿ ಸಂಸ್ಥೆಗೆ ಭವ್ಯ ಭವಿಷ್ಯವನ್ನು ಬಯಸಿ ಭಾಷಣವನ್ನು ಮುಗಿಸಿದರು.

ವಿದ್ಯುದ್ದೀಪದ ಬೆಳಕಿನಲ್ಲಿ ಅಕ್ಕಪಕ್ಕದಲ್ಲಿ ಓಲಾಡುತ್ತಿದ್ದ ಎರಡು ಮುಖಗಳು ರಾಜುವಿನ ನೋಟದಲ್ಲಿ ಸಿಕ್ಕಿಬಿದ್ದಿದ್ದವು. ಸರೋಜಳ ಮುಖ ಇಂದಿರೆಯ ಮುಖದೊಡನೆ ರೂಪದಲ್ಲಿ ಸ್ಪರ್ಧಿಸಲಾರದೆಂದು ಅವನು ನಿಶ್ಚಯಿಸಿದ. ಇಂದಿರೆ ಅಷ್ಟು ಚೆಲುವೆಯಾದುದರಿಂದಲೇ ತನಗೆ ಅವಳಲ್ಲಿ ಅಷ್ಟು ಅನುರಾಗ ಹುಟ್ಟಿತೆಂದು ಯೋಚಿಸಿದ. ತನ್ನ ಪ್ರೇಮದ ಮಾನದಂಡದ ವಿಷಯದಲ್ಲಿ ತನ್ನ ಮನಸ್ಸಿಗೆ ವಿಶ್ವಾಸವುಂಟಾಗಲಿಲ್ಲ. ಆದರೆ ಅವನು ತನ್ನ ಮನಸ್ಸನ್ನು ನಿರ್ಲಕ್ಷಿಸಿದ. ಬಹಳ ಹೊತ್ತು ತನ್ನ ದೃಷ್ಟಿತೃಪ್ತಿಯನ್ನು ಪಡೆದುಕೊಂಡ. ಆದರೂ ಪುನಃ ಪುನಃ ಅವನ ದೃಷ್ಟಿ ತೃಪ್ತಿಯನ್ನು ಬಯಸುತ್ತಿತ್ತು.

೩೬

ರಾಷ್ಟ್ರಗೀತೆಯೊಂದಿಗೆ ಅಂದಿನ ಕಾರ್ಯಕ್ರಮ ಮುಕ್ತಾಯವಾಯಿತು. ಸುಂದರರಾಯರು ಶಿಶುವಿಹಾರದ ಕಾರ್ಯಕಾರಿ ಸಮಿತಿಯ ಸದಸ್ಯರೊಡನೆ ಮಾತನಾಡುತ್ತ ನಿಂತಿದ್ದರು. ಇಂದಿರೆ, ಸರೋಜ ಕುಳಿತಿದ್ದ ಕಡೆಗೆ ರಾಜು ನಡೆದ. ಇಂದಿರೆಯನ್ನು ಸರೋಜಳಿಗೆ ಪರಿಚಯ ಮಾಡಿಕೊಟ್ಟ. ಅವರಿಬ್ಬರ ಕೈಗಳೂ ಒಂದರಲ್ಲೊಂದು ಸೇರಿದವು. ರಾಜುವಿನ ಕಣ್ಣಿಗೆ ಅವರಿಬ್ಬರೂ ಎರಡು ಹಕ್ಕಿಗಳಂತೆ ಕಂಡರು. ಅವನ ಕಣ್ಣಿನಲ್ಲಿ ಉನ್ಮಾದ ತಲೆಹಾಕಿತು.

ರಾಜು ಸರೋಜಳನ್ನು ಇಂದಿರೆಗೆ ಪರಿಚಯ ಮಾಡಿಕೊಟ್ಟಾಗ ಇಂದಿರೆಗೆ ಮಾತು ಹೊರಡದಂತಾಯಿತು. ಮುಖದಲ್ಲಿ ಮೂಡಿದ್ದ ಕೆಂಪು ಕಾಂತಿ ಮಾಯ ವಾಯಿತು. ಅವಳು ವಿಮನಸ್ಕಳಾದಳು. ಮನಸ್ಸಿನ ಹತೋಟಿ ಮೀರಿ ಅವಳ ಮಾನಸಿಕ ಅಶಾಂತಿ ತೋರಿ ಅಡಗಿತು.

ಸರೋಜಳ ಪರಿಚಯದಿಂದ ಇಂದಿರೆಯ ಅಶಾಂತಿ ಮತ್ತೂ ಹೆಚ್ಚಿತು. ಅವಳು ಆನಂದನ ಹೆಂಡತಿಯೆಂದು ರಾಜು ಪರಿಚಯ ಮಾಡಿಕೊಟ್ಟಾಗ ಅವಳ ಮುಖ ಮಸಕಾದುದನ್ನು ಇಂದಿರೆ ಗುರುತಿಸಿದ್ದಳು. ಅವಳ ಯೋಚನೆಗಳು ಆಗ ನಿರ್ದೇಶವಿಲ್ಲದಾದವು.

'ನಾನೇ ಸರೋಜ ಆಗಿದ್ದರೆ!' ಎಂದಿತು ಇಂದಿರೆಯ ಆಸೆ. ಅವಳು ಉದ್ದವಾದ ನಿರಾಶೆಯ ನಿಟ್ಟುಸಿರನ್ನು ಬಿಟ್ಟಳು. ಅವಳ ಆಸೆ ದೂರ ದೂರ ತೇಲಿ ಹೋಗಿ ಒಡೆದು ಹಿಂತಿರುಗಿ ಬಾರದ ನೌಕೆಯಂತೆ ನೆನಪಿನಲ್ಲಿ ಮಾತ್ರ ಉಳಿ ಯಿತು. ಅವಳ ನೆನಪಿಗೆ ಒಂದು ಕ್ಷಣ ಚೇತನ ಬಂದು ಮತ್ತೆ ತೆಪ್ಪಗಾಯಿತು.

ಸಭಾಂಗಣ ಬರಿದಾಯಿತು. ಉತ್ಸವದಲ್ಲಿ ನೆರವಾಗಿದ್ದವರೆಲ್ಲ ಹೊರ ಡಲು ಆತುರವಾಗಿ ಸುತ್ತಾಡುತ್ತಿದ್ದರು. ಏನೋ ನೆನಪಿನಿಂದ ರಾಜು ರಚಿಸಿದ್ದ ಹೊಸ ಕೃತಿಯನ್ನು ನೋಡುತ್ತ ಇಂದಿರೆ ಸ್ವಲ್ಪ ಹೊತ್ತು ಸುಮ್ಮನೆ ನಿಂತಿದ್ದಳು. ಅವಳ ಬೆನ್ನನ್ನೇ ಕಾಯುತ್ತಿದ್ದು ರಾಜು ಅಲ್ಲಿಗೆ ಬಂದ. ತನ್ನ ಕಲೆಯಲ್ಲಿ ಅವಳ ಮನಸ್ಸು ಲೀನವಾಗಿದ್ದುದನ್ನು ಅರಿತುಕೊಂಡ. ಅವನಿಗೆ ಏನೋ ತೃಪ್ತಿ ಯಾಯಿತು. ಆದರೆ ಆಗ ಅವಳ ಮನದಲ್ಲಿ ಯಾವ ಭಾವನೆಗಳು ಸಂಚಾರ ಮಾಡುತ್ತಿದ್ದುವೆಂಬುದನ್ನು ಅವನು ತಿಳಿಯಲಾಗಲಿಲ್ಲ. ಅವಳು ನೋಟವನ್ನು ತನ್ನ ಕಡೆಗೆ ತಿರುಗಿಸುತ್ತಲೇ ಕೇಳಿದ :

" ಮನೆಗೆ ಹೊರಡುವುದು ತಾನೆ ? "

ಇಂದಿರೆಯ ಮನಸ್ಸು ಆ ದಿನ ಎಚ್ಚರದಿಂದ ಬಹಳ ಬಾರಿ ಜಾರಿತು. ಆ ಸಮಯದಲ್ಲಿಯೂ ಅವಳು ಅದೇ ಸ್ಥಿತಿಯಲ್ಲಿದ್ದಳು. ಶೃಂಗಾರಮಯವಾದ ಆವರಣದಲ್ಲಿ ಆಗ ರಾಜುವಿಗೆ ಅವಳ ಏಕಾಂತ ದೊರಕಿತು. ಅವನ ಚಿತ್ತವು ಭ್ರಮೆಗೊಂಡು ಎಲ್ಲಿಯೋ ತೇಲಾಡುತ್ತಿತ್ತು. ಇಂದಿರೆಯ ಕಣ್ಣು ರಾಜುವಿನ ಕಣ್ಣನ್ನು ತಾಕಿತು. ಅವಳಲ್ಲಿ ಏನೋ ಚೇತನ ಹರಿಯಿತು.

" ನಾನು ಹೊರಡುತ್ತೇನೆ " ಎಂದು ಹೆಜ್ಜೆ ಹಾಕುವುದರಲ್ಲಿದ್ದಳು.

" ಗಂಟೆ ಮೀರಿದೆ. ಈಗ ನಿಮಗೆ ಬಸ್ಸು ಸಿಗುವುದು ಸಂದೇಹ."

" ಈಗ ಒಂಬತ್ತು. ಕೂಡಲೆ ಹೊರಟರೆ ಕೊನೆ ಬಸ್ಸು ಸಿಕ್ಕಬಹುದು."

" ಹೊರಡೋಣ, ನಾನೂ ಮಲ್ಲೇಶ್ವರಕ್ಕೆ ಹತ್ತುತ್ತೇನೆ."

ರಾಜುವಿನ ಕಣ್ಣು ಮಿನುಗಿತು. ಆ ಸಮಯಕ್ಕೆ ಸುಶೀಲಾಬಾಯಿ ಅಲ್ಲಿಗೆ ಬಂದರು.

" ಇಂದಿರೆ, ಹೊರಡೋಣ. ನಾನೂ ಮಲ್ಲೇಶ್ವರಕ್ಕೆ ಹೋಗಬೇಕಾಗಿದೆ. ಗಂಟೆ ಒಂಬತ್ತು ಮೀರಿತು. ಕೊನೆಯ ಬಸ್ಸು ತಪ್ಪೀತು " ಎಂದರು.

ರಾಜುವಿನ ಆಸೆ ಕೂಡಲೆ ಕಮರಿಹೋಯಿತು ಸುಶೀಲಾಬಾಯಿ ಅವನ ಉದ್ದೇಶವನ್ನು ಭಂಗಪಡಿಸಿದರು. ಅಂದು ಅವರು ಅಡ್ಡಿ ಬರದಿದ್ದರೆ ಇಂದಿರೆಯ ಜೊತೆ ಸುಖ ಅವನಿಗೆ ದೊರಕುತ್ತಿತ್ತು. ಕೊನೆಯ ಬಸ್ಸನ್ನೂ ಇಂದಿರೆಗೆ ತಪ್ಪಿಸಿ ಕುದುರೆಗಾಡಿಯಲ್ಲಿ ಅವಳ ಏಕಾಂತ ಸಹವಾಸವನ್ನು ಕೆಲ ಗಳಿಗೆ ಗಳಾದರೂ ಅನುಭವಿಸಬೇಕೆಂಬ ಆಸೆ ಇತ್ತು. ಒಂದೇ ಕ್ಷಣದಲ್ಲಿ ಅವನ ಬಯಕೆ ನೀರಿನ ಗುಳ್ಳೆಯಂತೆ ಒಡೆದುಹೋಯಿತು.

' ಸುಶೀಲಾಬಾಯಿಯ ಜೊತೆ ಇನ್ನು ತಪ್ಪುವ ಹಾಗೇ ಇಲ್ಲ, ಎಲ್ಲ ಹಾಳಾಯಿತು....' ಎಂದು ಮನಸ್ಸಿನಲ್ಲಿಯೆ ಅವನು ಆಕೆಯನ್ನು ಮೂದಲಿಸಿದ.

ಕೊನೆಗೂ ರಾಜು ಇಂದಿರೆಯ ಸಂಗಕ್ಕಾಗಿ ಕಾದ. ಇಂದಿರೆ, ರಾಜು ಮತ್ತು ಸುಶೀಲಾಬಾಯಿ ಮಲ್ಲೇಶ್ವರದ ಬಸ್ ಹತ್ತಿದರು.

ಗೋಪಾಲರಾಯರು ಆ ರಾತ್ರಿ ಇಂದಿರೆಗಾಗಿ ಬಹಳ ಹೊತ್ತು ಎದುರು ನೋಡಿದರು. ಅಂದು ಶಿಶುವಿಹಾರದ ವಾರ್ಷಿಕೋತ್ಸವವೆಂದು ಅವರಿಗೆ ತಿಳಿದಿತ್ತು. ಅವರಿಗೆ ಸ್ವಲ್ಪ ದೇಹಾಲಸ್ಯವಾಗಿದ್ದುದರಿಂದ ಉತ್ಸವಕ್ಕೆ ಹೋಗಲಿಲ್ಲ.

ಹೊತ್ತು ಬಹಳವಾಗಿತ್ತು. ಅವರಿಗೆ ಸ್ವಲ್ಪ ಯೋಚನೆ ಹತ್ತಿತು. 'ಪ್ರಾಯದ ಮಗಳನ್ನು ಹಾಗೆ ಸ್ವೇಚ್ಛೆಯಾಗಿ ಬಿಟ್ಟುಬಿಡುವುದೇ' ಎಂದು. ಮರುಕ್ಷಣದಲ್ಲಿಯೇ ಅವಳಿಗಾಗಿ ಪ್ರೀತಿ ಉಕ್ಕಿಬಂದು ಅವಳು ಸ್ವೇಚ್ಛೆಯಾಗಿಯೇ ಬೆಳೆಯಬೇಕೆಂದೆನಿಸಿತು. ಅವಳು ಸಂತೋಷವಾಗಿರುವುದೇ ಗೋಪಾಲರಾಯರ ಸಂತೋಷದ ಜೀವಾಳವಾಗಿತ್ತು. ಕಿಂಚಿತ್ತೂ ಅವಳಿಗೆ ಅಸಂತೋಷವನ್ನುಂಟು ಮಾಡಲು ಅವರ ಮನಸ್ಸು ಒಪ್ಪುತ್ತಿರಲಿಲ್ಲ. ಈ ಯೋಚನೆಗಳು ಹರಿಯುತ್ತಿರುವಂತೆ ಇಂದಿರೆ ಮನೆಯನ್ನು ಹೊಕ್ಕಳು.

## ೩೭

ಇಂದಿರೆ ಆ ರಾತ್ರಿಯನ್ನು ಆಲೋಚನೆಗಳಲ್ಲಿ ಕಳೆದಳು. ಕಳೆದುಹೋದ ಅವಳ ಬಾಳ ಗಳಿಗೆಗಳ ಮಧ್ಯೆ ಕಾಲವು ಹರಡಿದ್ದ ಮಸಕು ತೆರೆಗಳು ಕರಗಿದ್ದವು. ಗತಜೀವನದ ಪ್ರಕರಣಗಳೆಲ್ಲ ನಿನ್ನೆಯ ನೆನಪಿನಂತೆ ಅವಳ ಕಣ್ಣ ಮುಂದೆ ಪುನರಾವೃತವಾದವು. ಯಾವುದೋ ಆವೇಗ ಆಗ ನಡೆಯುತ್ತಿದ್ದ ಅವಳ ಮನೋವ್ಯಾಪಾರಗಳನ್ನು ಚೇತನಗೊಳಿಸಿತು. ಈಚೆಗೆ ತಾನು ತುಳಿಯುತ್ತಿದ್ದ ಜಾಡು ಬಳಸುಬಳಸಾಗಿ ಮುಂದೆ ಸಾಗಿ ದೂರದ ಅಜ್ಞಾತದಲ್ಲಿ ಹಾದುಹೋಗಿತ್ತು. ಶಿಥುವಿಹಾರದ ಹೆಬ್ಬಾಗಿಲೇ ಆ ತುದಿಗಾಣದ ದಾರಿಗೆ ಉಗಮವಾಗಿತ್ತು.

'ಎಲ್ಲಿಗೆ ನಡೆಸೀತು ನನ್ನನ್ನು, ಈ ಹಾದಿ' ಎನ್ನಿಸಿತು. ಅವಳ ಕಣ್ಣೆವೆಯನ್ನು ಅರೆ ಎಚ್ಚರ ಮುಸುಕಿತ್ತು.

ಇಂದಿರೆಯ ಮನಸ್ಸಿನಲ್ಲಿ ರಾಜು ರಚಿಸಿದ್ದ ಚಿತ್ರ ಮೂಡಿತು. ಅವಳ ಚಿತ್ರ ಕದಡಿಹೋಯಿತು. ಒಡೆದ ಕನ್ನಡಿಯಂತೆ ಅದು ಸಾವಿರ ಪ್ರತಿಬಿಂಬಗಳನ್ನು ಹುಟ್ಟಿಸಿತು. ಅಲ್ಲಿ ಕಾಣುತ್ತಿದ್ದ ಬೆಳಕು ಕತ್ತಲಿನ ಹೋರಾಟ ಇಂದಿರೆಯ ತಲೆಯಲ್ಲಿ ಕಾವನ್ನುಂಟುಮಾಡಿತು. ನಿಜವಾಗಿ ತನ್ನ ಜೀವನದ ಮರ್ಮವನ್ನೇ ರಾಜು ಆ ಚಿತ್ರದಲ್ಲಿ ಹೊರಹೊಮ್ಮಿಸಿದ್ದಾನೆಂದು ಇಂದಿರೆಗೆ ಭಾವನೆಯಾಯಿತು. ಕತ್ತಲೆ ಬೆಳಕನ್ನು ಮುತ್ತುತ್ತಿದ್ದುದು ಅವಳ ಸತ್ಯಜೀವನದ ಅನುಭವವಾಗಿತ್ತು. ಅಲ್ಲಿಯ ಬೆಳಕಿನಂತೆ ಅವಳ ಬದುಕಿನಲ್ಲಿ ಆಸೆ ಪ್ರಜ್ವಲಿಸಿ ಕುಂದಿಹೋಗಿತ್ತು.

ಶಿಶುವಿಹಾರದ ಉತ್ಸವದಲ್ಲಿ ರಾಜು ಒಬ್ಬ ಪ್ರಧಾನವ್ಯಕ್ತಿಯಾಗಿದ್ದ. ಆ ವಿಚಾರದತ್ತ ಅವಳ ಆಲೋಚನೆಗಳು ಓಡಿದವು. ಆಗ ಆನಂದ ಮತ್ತು ರಾಜು ಇಬ್ಬರೂ ಏಕಕಾಲದಲ್ಲಿ ಅವಳ ಮನಸ್ಸನ್ನು ಆಕ್ರಮಿಸಿದರು. ಆ ಇಬ್ಬರ ವ್ಯಕ್ತಿತ್ವಗಳೂ ಅಲ್ಲಿ ಸುಳಿದಾಡಿದವು.

'ಆನಂದನೆಲ್ಲಿ, ರಾಜು ಎಲ್ಲಿ! ಯಾರು ಹೆಚ್ಚು, ಯಾರು ಕಡಿಮೆ? ಆನಂದನಿಗೆ ರಾಜು ಸಮನಾಗುತ್ತಾನೆಯೆ? ಯಾವ ವಿಚಾರದಲ್ಲಿ? ಹಲವು ವಿಚಾರಗಳಲ್ಲಿ ಹಾಗೆ ಕಾಣುವುದು. ಹಲವು ವಿಚಾರಗಳಲ್ಲಿ ಆನಂದನೂ ರಾಜುವಿಗೆ ಸಮಾನನಾಗಲಾರ, ಅಲ್ಲವೆ? ಆದರೂ ಆನಂದ ಸೆಳೆಯುವಷ್ಟು ವಿಶ್ವಾಸವನ್ನು ರಾಜು ಸೆಳೆಯಲಾರನಲ್ಲ! ನನ್ನ ದೃಷ್ಟಿಯಲ್ಲಿಯೇ ಏನಾದರೂ ತಪ್ಪಿದ್ದೀತೆ? ತಪ್ಪೇನಿದೆ, ನನ್ನ ದೃಷ್ಟಿಯಲ್ಲಿ? ಅದಕ್ಕೆ ನನ್ನ ಮನಸ್ಸು ಕಾರಣ ವಿದ್ದೀತೆ? ಇದ್ದರೂ ಇರಬಹುದು. ನನ್ನ ಮನಸ್ಸು ಪೂರ್ವಭಾವಿಯಾಗಿಯೇ ಆನಂದನಲ್ಲಿ ನೆಟ್ಟಿದ್ದುದರಿಂದ ರಾಜುವಿನ ವಿಶ್ವಾಸ ಅದಕ್ಕೆ ಬೇಕಾಗಿಲ್ಲ.'

ಇಂದಿರೆಯ ತರ್ಕ ಎಲ್ಲೆಲ್ಲಿಯೋ ಭ್ರಮರದಂತೆ ಹಾರಾಡಿತು.

ರಾಜುವನ್ನು ತಾನು ಕಾಣುತ್ತಿದ್ದ ದೃಷ್ಟಿಯಲ್ಲಿ ಅವನಿಗೆ ಸಲ್ಲಬೇಕಾದ ಮಾನ್ಯತೆ ಇರಲಿಲ್ಲವೆಂದು ಇಂದಿರೆ ಭಾವಿಸಿದಳು. ಅವನು ಅವಳಿಗಾಗಿ ತೋರಿದ್ದ ಎಷ್ಟೋ ನಯಭಾವಗಳು ಅವಳ ಗಮನವನ್ನು ಸೆಳೆದವು. ಅವು ಯಾವ ಉದ್ದೇಶದಲ್ಲಿ ಬೇರನ್ನು ಬಿಟ್ಟಿದ್ದವೆಂಬುದನ್ನು ಚಿಂತಿಸಿದಳು. ಅವನು ತನ್ನ ಮೇಲೆ ಬೀರುತ್ತಿದ್ದ ನೋಟದಲ್ಲಿ ಸಾಮಾನ್ಯವಾದ ಸ್ನೇಹಕ್ಕೂ ಬೇರೆ ಯಾದ ಭಾವನೆಗಳನ್ನು ಅವಳು ಊಹಿಸಿದಳು.

ಯಾವ ಶಕ್ತಿ ಆನಂದನಿಂದ ತನ್ನ ಬದುಕನ್ನು ಕತ್ತರಿಸಿ ದೂರಮಾಡಿತೊ ಅದೇ ಶಕ್ತಿ ಈಗ ರಾಜುವಿನ ಕಡೆಗೆ ಸೆಳೆಯುತ್ತಿದೆ ಎಂಬ ಯೋಚನೆ ಅವಳಿಗೆ ಹೊಳೆಯಿತು ಆಗ ಅವಳ ಅಂತರ್ಯದಲ್ಲಿ ಏನೋ ಮಸೆದಾಟವಾಯಿತು. ಆನಂದನಿಂದ ತನ್ನ ಮನಸ್ಸನ್ನು ವಿಮುಖಮಾಡಿ ಬೇರೆ ವ್ಯಕ್ತಿಯಲ್ಲಿ ಅದನ್ನು ಹೊಗಿಸುವುದು ಅವಳಿಗೆ ಅಸಹನೀಯವಾಗಿ ಕಂಡಿತು. ಆಲೋಚನೆ ಮುಂದೆ ದಾರಿಗಾಣದಾಯಿತು.

ಅನಿವಾರ್ಯವಾದುದನ್ನು ಕನಸಿನ ಬದುಕಿನಲ್ಲಿ ಸ್ವಲ್ಪ ಕಾಲ ಮರೆಯ ಬಹುದು. ಆದರೆ ಬೇಗ ವಾಸ್ತವತೆ ವ್ಯಕ್ತಿಯ ಕಣ್ಣನ್ನು ತೆರೆದು ಅಂತಹ

ಕನಸಿನಿಂದ ಎಚ್ಚರಮಾಡುತ್ತದೆ. ಎಚ್ಚತ್ತ ಇಂದಿರೆ ವಾಸ್ತವತೆಯನ್ನು ಎದುರಿಸ ಬೇಕಾಗಿತ್ತು.

ರಾಜು ಕಲೆಯಲ್ಲಿ ಆದರ್ಶ ಸಾಧಕನೆನಿಸಿಕೊಂಡಿದ್ದ. ಖ್ಯಾತಿಯನ್ನು ಗಳಿಸಿದ್ದ. ಅವನಲ್ಲಿ ಜನರ ಹೃದಯಗಳನ್ನು ಗೆಲ್ಲುವ ಶಕ್ತಿಯಿತ್ತು. ಇಂದಿರೆಯ ಹೃದಯವನ್ನು ಅವನು ಹೆಚ್ಚು ಸೆಳೆದಿದ್ದ. ಆನಂದನನ್ನುಳಿದರೆ ಇಂದಿರೆಯ ಮನೋರಂಗದಲ್ಲಿ ಸ್ಥಾನವನ್ನು ಪಡೆದಿದ್ದ ಎರಡನೆಯ ವ್ಯಕ್ತಿ —ರಾಜು. ಆನಂದ ಇಂದಿರೆಯ ಪಾಲಿಗೆ ಕನಸಾಗಿ ದೂರವಾದ. ಅವನ ಉದ್ದೇಶಕ್ಕೆ ಸೋಲಾಯಿತು. ಅದಕ್ಕೆ ಸಾಕಷ್ಟು ಕಾರಣಗಳಿದ್ದಿರಬಹುದು. ಆದರೆ ಅವನು ಇಂದಿರೆಯ ಮುಂದಿನ ಬದುಕಿಗೆ ಸಂಬಂಧಿಸದ ವ್ಯಕ್ತಿಯಾಗಿದ್ದ. ಈ ಎಲ್ಲ ಯೋಚನೆಗಳೂ ಇಂದಿರೆಯ ಮನಸ್ಸಿನಲ್ಲಿ ರಾಜುವಿಗೆ ಎಡೆಕೊಟ್ಟಿದ್ದವು. ಆದರೆ ಅವಳು ಯಾವ ನಿರ್ಧಾರಕ್ಕೂ ಬಂದಿರಲಿಲ್ಲ.

೩೮

ಸಂಪಿಗೆಯಿಂದ ಬಂದ ಮೇಲೆ ಆನಂದ ಕೆಲವು ವಿಷಯ ನಿಶ್ಚಯ ಮಾಡಿಕೊಂಡಿದ್ದ. ಆ ನಿಶ್ಚಯಗಳು ತನ್ನ ಮುಂದಿನ ಬದುಕಿಗೆ ಆವಶ್ಯಕವೆಂದು ಅವನು ಎಣಿಸಿದ್ದ. ಅನೇಕ ವಿಷಮ ಶಕ್ತಿಗಳ ಸೆಳೆತಕ್ಕೆ ಸಿಕ್ಕಿ ಅವನ ಮನಸ್ಸು ಅಸ್ಥಿರವಾಗಿತ್ತು. ಸಂಪಿಗೆಯ ಎರಡು ದಿವಸಗಳ ವಾಸ ಎಲ್ಲ ಶಕ್ತಿಗಳನ್ನೂ ಮೆಟ್ಟಿ ಅನಿವಾರ್ಯವಾದುದನ್ನು ಎದುರಿಸುವ ನಿರ್ಧಾರವನ್ನು ಅವನಲ್ಲಿ ಉಂಟು ಮಾಡಿತು. ಇಂದಿರೆಯನ್ನು ತನ್ನ ಯೋಚನೆಯಿಂದ ದೂರ ಮಾಡುವುದು ಅಗತ್ಯವೆಂಬುದನ್ನು ಅವನು ಮೊದಲೇ ತಿಳಿದಿದ್ದ. ಆದರೆ ಅಷ್ಟು ಮನಸ್ಥೈರ್ಯ ಅವನಲ್ಲಿರಲಿಲ್ಲ. ಅದರಿಂದ ತನ್ನ ಮತ್ತು ಸರೋಜಳ ಪರಸ್ಪರ ಮನೋಭಾವನೆ ಗಳು ಮೇಳ ತಪ್ಪಿದ್ದುವೆಂಬುದನ್ನೂ ಅವನು ಅರಿತಿದ್ದ. ಆ ವೈಮನಸ್ಯಕ್ಕೆ ಕಾರಣ, ತಮ್ಮ ಬದುಕನ್ನು ಅವಳು ಕಾಣುವ ದೃಷ್ಟಿಯಿಂದ ತಾನು ಕಾಣಲಾರದೆ ಇದ್ದುದು. ಇಂದಿರೆಯಲ್ಲಿ ಆಸಕ್ತಗೊಂಡಿದ್ದ ಅವನ ಮನಸ್ಸೇ ಅಷ್ಟೆಲ್ಲಕ್ಕೂ ಕಾರಣವಾಗಿತ್ತು. ಆ ಮನೋವಿಶ್ಲೇಷಣ ಮಾಡಿದಾಗ ಆನಂದನಿಗೆ ತಾನೊಬ್ಬ ತಪ್ಪಿತಸ್ಥನೆನಿಸುತ್ತಿತ್ತು.

' ಧರ್ಮಕ್ಕಾಗಿ ನಾನು ಇಂದಿರೆಯ ಪ್ರೇಮವನ್ನು ತ್ಯಾಗಮಾಡಿದೆ. ಆದರೆ

ಅದೇ ಧರ್ಮದ ಕಣ್ಣಿನಲ್ಲಿ ನಾನು ತಪ್ಪಾಗಿ ನಡೆಯುತ್ತಿಲ್ಲವೆ? ಸರೋಜ ನನ್ನ ಧರ್ಮಪತ್ನಿ. ಆದಕ್ಕೆ ಅಗ್ನಿಸಾಕ್ಷ್ಯವಿದೆ. ಅವಳೊಡನೆ ನಾನು ಸರಿಯಾಗಿ ನಡೆಯುತ್ತಿದ್ದೇನೆಯೆ?' ಆ ಯೋಚನೆ ಅವನ ಧ್ಯೇಯವನ್ನು ಅಣಕಿಸಿತು.

ಬೇರೆಯೊಂದು ಯೋಚನೆಯೆದ್ದಿತು. ಆನಂದನ ಎರಡು ಮನಸ್ಸುಗಳಲ್ಲಿ ವಿಚಾರದ ಮಸೆದಾಟ ಉಂಟಾಯಿತು.

'ಇಂದಿರೆಯಂತಹ ಚೆಲುವೆಯನ್ನು ನನ್ನ ಮನಸ್ಸಿನಿಂದ ಅಟ್ಟುವುದು ಸಾಧ್ಯವೆ?'

'ಅದು ಸಾಧ್ಯವಾಗಬೇಕು.'

'ಅದು ಅಸಾಧ್ಯವಾದರೆ?'

'ನೀನು ಧರ್ಮದಿಂದ ವಿಮುಖನಾಗುತ್ತೀ.'

'ಸೌಂದರ್ಯಕ್ಕಾಗಿ ಮನಸೋತು ಮನಸ್ಸನ್ನು ಅದರಿಂದ ಹಿಂತೆಗೆಯು ಲಾಗದಿದ್ದರೆ ಧರ್ಮಕ್ಕೆ ಚ್ಯುತಿಯಾಯಿತೆ?'

'ನಿನ್ನ–ಇಂದಿರೆಯ ವಿಚಾರವೇ ಬೇರೆಯಾಗಿದೆ.'

'ಹೇಗೆ?'

'ದೇವರು ಸೃಷ್ಟಿಸಿರುವ ಸೌಂದರ್ಯಕ್ಕಾಗಿ ಮನಸೋಲುವುದರಿಂದ ಧರ್ಮಕ್ಕೆ ಚ್ಯುತಿಯಾಯಿತೆಂದು ನಾನು ಹೇಳುವುದಿಲ್ಲ.'

'ಅಂತೆಯೇ ನಾನು ಇಂದಿರೆಗೆ ಮನಸೋತಿದ್ದೇನೆ.'

'ಆ ಭಾವನೆ ಕಪಟ.'

'ಕಪಟ ಏನಿದೆ ಆದರಲ್ಲಿ?'

'ಒಂದು ಸುಂದರವಾದ ಗುಲಾಬಿಯನ್ನು ನೋಡಿ ಏನೋ ಭಾವನೆ ಯಿಂದ ನೀನು ಮನಸೋಲುತ್ತೀಯಲ್ಲವೆ?'

'ಸುಂದರವಾದ ಯಾವ ವಸ್ತುವನ್ನು ನೋಡಿದರೂ ಅಂತೆಯೇ ಮನ ಸೋಲುತ್ತೇನೆ.'

'ಈಗ ಹೇಳು, ಇಂದಿರೆಗಾಗಿ ನೀನು ಮನಸೋತಿರುವುದು ಅಷ್ಟೇ ಭಾವನೆಯಿಂದಲೆ?'

'ಉತ್ತರ ಕೊಡುವುದು ನನಗೆ ಕಷ್ಟವಾಗಿ ತೋರುತ್ತದೆ.'

'ಅದಕ್ಕೇ ನಿನ್ನ ಭಾವನೆಯಲ್ಲಿ ಕಪಟವಿದೆ ಎಂದದ್ದು. ಆ ಭಾವನೆ

ಯೊಂದೇ ಅಲ್ಲ ನಿನ್ನ ಮನಸ್ಸನ್ನು ಹೊಕ್ಕಿರುವುದು. ಅಲ್ಲಿ ಸ್ವಾರ್ಥದ ಬಯಕೆಗಳು ಬೇರೂರಿವೆ.'

'ಹಾಗಾದರೆ ಇಂದಿರೆಗೆ ನನ್ನ ಮನಸ್ಸಿನಲ್ಲಿ ಸ್ಥಳವೇ ಕೂಡದೆ?'

'ಏಕೆ ಬಳಸಿ ಮಾತನಾಡುತ್ತಿ? ನಿನಗೂ ಸರೋಜಳಿಗೂ ಮಧ್ಯೆ ಇಂದಿರೆಗೆ ಸ್ಥಳ ಹೇಗೆ ಸಿಕ್ಕೀತು?'

ಆ ಹರಿತವಾದ ವಿಚಾರಸರಣಿ ಆನಂದನ ವಿವೇಚನೆಯನ್ನು ಎಚ್ಚರಗೊಳಿಸಿತು.

ಸಂಪಿಗೆಯಿಂದ ಬಂದನಂತರ ಆನಂದನಲ್ಲಿ ಸರೋಜ ಕೆಲವು ಬದಲಾವಣೆಗಳನ್ನು ಕಂಡಳು. ಅದರಿಂದ ಅವಳಿಗೆ ಸ್ವಲ್ಪ ಸಂತೋಷವೇನೋ ಉಂಟಾಯಿತು. ಆದರೆ ಆ ವಿಚಾರದಲ್ಲಿ ಬೆಳೆದು ಬಲಿತಿದ್ದ ಸರೋಜಳ ಸಂಶಯ ದೃಷ್ಟಿ ಅಷ್ಟರಿಂದ ಪರಿಹಾರವಾಗಲಿಲ್ಲ.

## ೩೯

ಇಂದಿರೆಯ ಮನಸ್ಸಿನ ಎಲ್ಲ ಪರಿವರ್ತನೆಗಳನ್ನೂ ರಾಜು ಅರ್ಥಮಾಡಿಕೊಂಡಿದ್ದ. ಆ ಪರಿವರ್ತನೆಗಳು ಅವನಿಗೆ ಆಶಾದಾಯಕವಾಗಿದ್ದವು. ಇಂದಿರೆಯ ಚೂರ್ಣಿತ ನೌಕೆ ಹೊಸ ಪ್ರೇರೇಪಣೆಗಳಿಂದ ಒಂದುಗೂಡಿ ಬೇರೆ ದಿಕ್ಕಿನಲ್ಲಿಯಾದರೂ ದಂಡೆ ಮುಟ್ಟಲು ಸಿದ್ಧವಾಗಬೇಕಾಗಿತ್ತು. ಗಾಳಿ ಬೀಸಿದ ಕಡೆಗೆ ಬಾಗುವ ಹುಲ್ಲಿನ ಕಡ್ಡಿಯಂತೆ ಅನಿರ್ಧಾರದ ಇಂದಿರೆಯ ಮನಸ್ಸು ಬಾಗುತ್ತಿತ್ತು. ಆ ಮನಸ್ಸನ್ನು ವಶಪಡಿಸಿಕೊಳ್ಳಲು ರಾಜು ಪ್ರಯತ್ನಿಸುತ್ತಿದ್ದ. ಎಂತಹ ಅಡ್ಡಿ ಬಂದರೂ ಅದನ್ನು ಪರಿಹರಿಸಿಕೊಳ್ಳುವ ನಿರ್ಧಾರವನ್ನು ಅವನು ಮಾಡಿದ್ದ. ಆದರೆ ಎದುರಾದ ದೊಡ್ಡ ಅಡ್ಡಿ ತಾನಾಗಿ ಸರಿದು ಹೋಯಿತು. ಆನಂದ–ಇಂದಿರೆಯರ ಪ್ರೇಮ ತನ್ನ ಯಾವ ಯತ್ನವೂ ಇಲ್ಲದೆ ಪೂರ್ತಿ ಭಂಗವಾಯಿತು.

ರಾಜು ಸಂತೋಷಚಿತ್ತನಾಗಿದ್ದರೂ ಅವನ ಹೃದಯದ ಯಾವುದೋ ಮೂಲೆಯಲ್ಲಿ ಒಂದೊಂದು ವೇಳೆ ಅಳುಕು ಕಾಣುತ್ತಿತ್ತು. ತಾನು ಇಂದಿರೆಯ ಬೆನ್ನುಕಾಯುತ್ತಿರುವುದು ಪ್ರೇಮದಿಂದಲೇ ಅಥವಾ ಕಾಮದಿಂದಲೇ ಎಂಬ ವಿಚಾರ ಮೂಡುತ್ತಿತ್ತು. ಅವನು ವಿಚಾರವನ್ನು ಅಷ್ಟಕ್ಕೇ ಕತ್ತರಿಸಿ ಹಾಕು

ತ್ತಿದ್ದ. ಅದನ್ನು ಚಿಂತಿಸುವ ಮನಸ್ಸು ಅವನಿಗಿರಲಿಲ್ಲ. ಆತ್ಮವಿಮರ್ಶೆಯ ಅಭ್ಯಾಸ ಅವನಿಗೆ ಬೇಕಾಗಿರಲಿಲ್ಲ.

ರಾಜು ತನ್ನ ಹೃದಯವನ್ನು ಇಂದಿರೆಗೆ ಪೂರ್ತಿಯಾಗಿ ಬಿಚ್ಚಿ ನುಡಿ ನುಡಿಯಲು ಮನಸ್ಸು ಮಾಡಿದ. ಅದಕ್ಕಾಗಿ ಸರಿಯಾದ ಸಮಯವನ್ನು ಕಾಯುತ್ತಿದ್ದ. ಅವನಿಗೆ ಒಂದು ಸಮಯ ಒದಗಿತು.

ಅಂದು ಭಾನುವಾರ. ಸಂಜೆಯ ಕಾಂತಿ ಹೊನ್ನನ್ನು ಎರಚಿತ್ತು. ಮಧ್ಯಾಹ್ನವೆಲ್ಲ ಬಿಸಿಯ ಕಿರಣಗಳನ್ನು ಬೀರಿ ಉಜ್ವಲಿಸಿ ಸೋತ ಸೂರ್ಯನು ತನ್ನ ಕೊನೆಯ ಕಿರಣಗಳನ್ನು ಎಸೆಯುತ್ತಿದ್ದ. ಬೆಳಗಿನಿಂದ ಮೆರೆದ ನಿಸರ್ಗ ರಾಶಿ ವಿಶ್ರಾಂತಿಯನ್ನು ಬಯಸಿ ಪ್ರಶಾಂತವಾಗಿತ್ತು.

ರಾಜುವಿನ ಮನಸ್ಸು ಕದಡಿತ್ತು. ಅವನು ಪಬ್ಲಿಕ್ ಲೈಬ್ರರಿಯಿಂದ ಆಗತಾನೆ ಹೊರಬಿದ್ದಿದ್ದ. ಆಗ ಲೈಬ್ರರಿಯ ಕಡೆಗೆ ನಡಿಗೆಯನ್ನು ಹಾಕುತ್ತಿದ್ದ ಇಂದಿರೆಯನ್ನು ಕಂಡ. ಅವನ ಮನಸ್ಸು ಉದ್ವೇಗಗೊಂಡಿತು. ಕಾಲುಗಳು ಆತುರವಾಗಿ ಅವಳ ಕಡೆಗೇ ನಡೆದವು. ಇಂದಿರೆಯೊಡನೆ ರಾಜು ಮಾತಿಗೆ ಸುರು ಹಚ್ಚಿದ. ಮಾತು ಎಲ್ಲೆಲ್ಲಿಯೋ ಹರಿಯಿತು.

"ಸಂಜೆ ಸೊಗಸಾಗಿದೆ, ಅಲ್ಲವೆ ?"

ಪ್ರಶ್ನೆ ಇಂದಿರೆಯ ಕೆನ್ನೆಯಲ್ಲಿ ಕೆಂಪನ್ನು ಉಕ್ಕಿಸಿತು.

"ನನ್ನ ಮನಸ್ಸೂ ಅದೇ ಪ್ರಶ್ನೆಯನ್ನು ಕೇಳುತ್ತಿದೆ."

"ಇಬ್ಬರೂ ಪ್ರಶ್ನೆಯನ್ನೇ ಹಾಕಿದರೆ ಉತ್ತರ ಹೇಳುವವರು ಯಾರು ?"

"ನಿಮ್ಮ ಉತ್ತರ ಏನು ?"

"ಸಂಜೆ ಬಹಳ ಉಲ್ಲಾಸವಾಗಿದೆ."

"ನನ್ನ ಉಲ್ಲಾಸಕ್ಕೆ ಕಾರಣ ಬೇರೆಯಾಗಿದೆ."

"ಏನದು ?" ರಾಜುವಿನ ಮುಖದಲ್ಲಿ ಕುತೂಹಲ ಕಾಣಿಸಿತು.

"ಇದು" ಎಂದು ಇಂದಿರೆ ತನ್ನ ಕೈಲಿದ್ದ ಪುಸ್ತಕವನ್ನು ತೋರಿಸಿದಳು.

"ಯಾವ ಪುಸ್ತಕ ಅದು ?"

"ಒಂದು ಕಾದಂಬರಿ."

ಇಂದಿರೆಯ ಕೈಯಿಂದ ಆ ಕಾದಂಬರಿಯನ್ನು ತೆಗೆದುಕೊಂಡು ದೃಷ್ಟಿ ಬೀರಿದ. ಕಾದಂಬರಿಯನ್ನು ನೋಡುತ್ತಲೇ ಅವನ ಮನಸ್ಸಿನಲ್ಲಿ ಯೋಚನೆ

ಗಳು ತರಂಗತರಂಗವಾಗಿ ಮಿಂಚಿಹೋದವು. ತಾನು ಬಯಸಿದ್ದ ಅವಕಾಶ ಅಷ್ಟು ಅನಿರೀಕ್ಷಿತವಾಗಿ ಸಿಗುವುದೆಂದು ರಾಜು ಊಹಿಸಿರಲಿಲ್ಲ. ಆ ಕಾದಂಬರಿಯನ್ನು ಅವನೂ ಓದಿದ್ದ. ಕಾದಂಬರಿಕಾರ ಅದರಲ್ಲಿ ಎತ್ತಿದ್ದ ಮುಖ್ಯವಾದ ಸಮಸ್ಯೆಯನ್ನು ತನ್ನ ಚರ್ಚೆಯಲ್ಲಿ ರಾಜು ಚತುರತೆಯಿಂದ ಬಳಸಿಕೊಂಡ.

"ಸ್ವಲ್ಪ ಹೊತ್ತು ಪಾರ್ಕಿನಲ್ಲಿ ಸುತ್ತಾಡಬಹುದಲ್ಲಾ ?"

"ಈ ಪುಸ್ತಕವನ್ನು ನಾನು ಲೈಬ್ರರಿಗೆ ಹಿಂತಿರುಗಿಸಬೇಕಾಗಿದೆ. ಈ ಕಾದಂಬರಿ ನನ್ನ ಮನಸ್ಸನ್ನು ಕಲಕಿದೆ. ಇದನ್ನು ಹಿಂತಿರುಗಿಸುವುದಕ್ಕೂ ನನಗೆ ಮನಸ್ಸಿಲ್ಲ."

"ಹಿಂತಿರುಗಿಸಿದರಾಯಿತು. ಸಂಜೆ ಹಿತವಾಗಿದೆ. ಸ್ವಲ್ಪ ಹೊತ್ತು ಸುತ್ತೋಣ" ಎಂದು ರಾಜು ತನ್ನ ಇಷ್ಟವನ್ನು ಒತ್ತಿ ನುಡಿದ. ಇಂದಿರೆ ಒಪ್ಪಬೇಕಾಯಿತು.

ಯಾವುದೋ ಒಂದು ಅಪರಿಚಿತ ಲೋಕದಲ್ಲಿ ಅಲೆದಾಡುತ್ತಿರುವಂತೆ ರಾಜುವಿಗೆ ಭಾವನೆಯಾಯಿತು. ಸ್ವಲ್ಪ ಹೊತ್ತು ಇಬ್ಬರೂ ಸುತ್ತಾಡಿದರು. ಹಸುರು ರತ್ನಕಂಬಳಿಯಂತಿದ್ದ ಹುಲ್ಲು ಬೆಳೆದ ಒಂದು ಸ್ಥಳದಲ್ಲಿ ಇಬ್ಬರೂ ಕುಳಿತುಕೊಂಡರು. ರಾಜುವಿಗೆ ತನ್ನ ಅಂತರಂಗವನ್ನು ಇಂದಿರೆಗೆ ಪರಿಪರಿಯಾಗಿ ಬಿಡಿಸಿ ತೋರಿಸಬೇಕೆನಿಸಿತು. ಆ ಕಾದಂಬರಿಯಲ್ಲಿಯ ಸಮಸ್ಯೆಗಳ ಜಾಲ ಅವಳ ಮನಸ್ಸಿನಲ್ಲಿ ಬಿರುಗಾಳಿಯನ್ನೆಬ್ಬಿಸಿದೆ ಎಂದು ರಾಜು ಊಹಿಸಿದ್ದ. ಅವನ ಊಹೆ ನಿಜವಾಗಿತ್ತು. ಇಂದಿರೆಯ ಆಗಿನ ಮನಃಸ್ಥಿತಿಯನ್ನು ಅವನು ಪೂರ್ತಿಯಾಗಿ ಉಪಯೋಗಿಸಿಕೊಂಡ.

"ಆ ಕಾದಂಬರಿಯ ವಿಷಯವಾಗಿ ನಿಮ್ಮ ಅಭಿಪ್ರಾಯವೇನು ?"

ಇಂದಿರೆ ಪ್ರಶ್ನೆಗೆ ಸುಲಭವಾಗಿ ಉತ್ತರ ಕೊಡಲಾಗಲಿಲ್ಲ. ಎರಡು ಕ್ಷಣಗಳನಂತರ,

"ಅದು ವಿಚಾರಗಳನ್ನು ಕೆರಳಿಸುವಂತಿದೆ." ಎಂದು ಮರುನುಡಿದಳು.

"ನಿಮ್ಮ ಮಾತನ್ನು ನಾನೂ ಒಪ್ಪುತ್ತೇನೆ."

"ನೀವೂ ಈ ಕಾದಂಬರಿಯನ್ನು ಓದಿದ್ದೀರಾ ?"

"ಓದಿದ್ದೇನೆ. ನನ್ನ ಮನಸ್ಸಿನಲ್ಲಿಯೂ ಅದು ವಿಚಾರಗಳನ್ನು ಕೆರಳಿಸಿದೆ. ಆದರೆ ಕಾದಂಬರಿಕಾರ ಆ ಕತೆಯನ್ನು ದುರಂತದಲ್ಲಿ ಮುಕ್ತಾಯ

ಮಾಡುವುದನ್ನು ನಾನು ಸಮರ್ಥಿಸಲಾರೆ."

" ನನಗೆ ಅದು ಸ್ವಾಭಾವಿಕವಾಗಿಯೇ ಕಾಣುತ್ತದೆ."

" ಕಥಾನಾಯಕಿಯಾದ ವೃಂದಳ ಬದುಕು ದುರಂತದಲ್ಲಿ ಕೊನೆಗೊಂಡಿರುವುದು ಸರಿಯೆಂದೇ ನಿಮ್ಮ ಅಭಿಪ್ರಾಯವೆ ? "

" ಕಾದಂಬರಿಕಾರನ ದೃಷ್ಟಿಯನ್ನು ಸರಿಯೆಂದೇ ನಾನು ಒಪ್ಪುತ್ತೇನೆ. ವೃಂದಳ ಬದುಕು ಅಂತೆಯೇ ಮುಗಿಯಬೇಕಾಗಿತ್ತು. ಬೇರೆ ದಾರಿಯೇ ಇರಲಿಲ್ಲ."

" ವೃಂದಳನ್ನು ಇಬ್ಬರು ಪ್ರೇಮಿಸುತ್ತಿದ್ದರು. ಒಬ್ಬನು ಅನಿವಾರ್ಯವಾಗಿ ಬೇರೆ ಹಾದಿಯನ್ನು ಹಿಡಿಯಬೇಕಾಯಿತು. ವೃಂದಳ ಮೊದಲ ಪ್ರೇಮಕ್ಕೆ ಭಂಗವಾಯಿತು. ಅದಕ್ಕಾಗಿ ವೃಂದಳಂತಹ ಚೆಲುವೆಯ ಬದುಕು ಹಾಳಾಗಬೇಕೆ ? "

" ನಿಶ್ಚಲವಾದ ಪ್ರೇಮದ ತೆಕ್ಕೆಯಿಂದ ಇಬ್ಬರನ್ನೂ ಬೇರೆ ಮಾಡಿದರೆ ಅವರಿಬ್ಬರ ಆಸೆಗಳೂ ಹಾಳೇ."

" ಪ್ರಸನ್ನನನ್ನು ಬದುಕಿನ ಕಾಣದ ಶಕ್ತಿಗಳು ವೃಂದಳಿಂದ ದೂರ ಮಾಡಿದವು. ಅದಕ್ಕಾಗಿ ಅವಳ ಬಾಳೇಕೆ ದುರಂತದಲ್ಲಿ ಮುಗಿಯಬೇಕು ? ವೃಂದಳೊಬ್ಬ ಮುಗ್ಧೆ. ಅವಳ ಕೇಡಿಗಾಗಿ ಅವಳು ಯಾವ ತಪ್ಪನ್ನೂ ಮಾಡಿಲ್ಲ."

" ಯಾವ ತಪ್ಪನ್ನು ಮಾಡದಿದ್ದರೂ ವ್ಯಕ್ತಿಗೆ ಕೆಲವು ವೇಳೆ ಕೇಡಾಗುವುದಿಲ್ಲವೆ ? "

" ವೃಂದಳ ಬದುಕು ಹಾಳಾಗಲು ಅವಳ ವಿಚಾರಶೂನ್ಯತೆಯೇ ಕಾರಣ."

" ಅವಳು ವಿಚಾರಶೂನ್ಯಳಾಗಿರಲಿಲ್ಲ. ವಿಚಾರವಾದಿಯಾಗಿಯೇ ತನ್ನ ನಿರಾಶೆಯ ಬದುಕನ್ನು ಮುಗಿಸಿಕೊಂಡಳು."

" ಸುಖವಾಗಿ ಬದುಕಲು ಹಾದಿಯಿದ್ದರೂ ಅವಳು ದುರಂತದ ಕಡೆಗೇ ಹೆಜ್ಜೆ ಹಾಕಿದಳು. ಅದಕ್ಕೆ ಕಾರಣ ಅವಳ ವಿಚಾರಬುದ್ಧಿಯ ಅಭಾವವೇ."

" ನೀವು ಊಹಿಸಿರುವ ಬೇರೆ ಹಾದಿ ಯಾವುದು ? "

" ಗೋಪುವಿನ ಪ್ರೇಮವನ್ನು ಅಂಗೀಕರಿಸಿ ಸುಖವಾಗಿ ಬಾಳುವುದು."

" ವೃಂದಳಿಗೆ ನೀವು ಹೇಳಿದ ಹಾದಿಯಿದ್ದಿರಬಹುದು. ಆದರೆ ಅದು ಅವಳು ಹಂಬಲಿಸುತ್ತಿದ್ದ ಹಾದಿಯಲ್ಲ."

"ಒಂದು ಹೃದಯದಲ್ಲಿ ನೆಟ್ಟುಹೋಗಿದ್ದ ಅವಳ ಕಣ್ಣು ಬೇರೆ ಹೃದಯದ ಬೆಂಬಲವನ್ನು ಕಾಣಲಾರದೆ ಹೋಯಿತು."

"ಪ್ರಸನ್ನನದು ಆದರ್ಶ ಪ್ರೇಮ. ಅವನ ಪ್ರೇಮ ಒಂದು ವಿದ್ಯುದ್ದೀಪಕ್ಕೆ ಸಮವಾದರೆ ಅದರೆಡೆಯಲ್ಲಿ ಗೋಪುವಿನ ಪ್ರೇಮ ಒಂದು ಮಿಣುಕುಹುಳದಂತೆ."

"ವೃಂದಳು ತಾನು ವರ್ತಿಸುತ್ತಿದ್ದುದು ವಿಚಾರದಿಂದಲ್ಲ, ಭಾವನೆಗಳ ಉದ್ವೇಗದಿಂದ."

"ಶುದ್ಧವಾದ ಪ್ರೇಮ ವಿಚಾರವನ್ನು ಮೀರಿದ್ದು."

"ಪ್ರಸನ್ನನ ಪ್ರೇಮ ಶುದ್ಧವಾಗಿತ್ತೋ ಇಲ್ಲವೋ ನಾನು ಹೇಳಲಾರೆ. ವೃಂದ ಹಾಗೆ ನಂಬಿದ್ದಳು. ಅಂತೂ ಆ ಪ್ರೇಮಕ್ಕೆ ಸೋಲಾಯಿತು. ಅವಳು ಗೋಪುವಿನೊಡನೆ ಒಂದುಗೂಡಿ ಸಂತೋಷದಲ್ಲಿರಬಹುದಿತ್ತು. ಆದರೆ ಅವಳ ನಿರ್ಧಾರ ತಪ್ಪು ದಾರಿಯನ್ನೇ ಹಿಡಿಯಿತು. ಅದು ಶೋಚನೀಯ."

"ಪ್ರಸನ್ನನ ಪ್ರೇಮ ದೃಢವಾಗಿತ್ತೆಂದು ನಾನು ಖಂಡಿತ ಹೇಳುತ್ತೇನೆ."

"ಧ್ಯೇಯ ದೃಢವಾಗಿದ್ದರೆ ಅದು ಫಲಿಸಲೇ ಬೇಕಲ್ಲವೆ ?"

ಇಂದಿರೆಯ ಮನಸ್ಸಿನಲ್ಲಿ ಯೋಚನೆಗಳು ದಿಕ್ಕುಗಾಣದೆ ಸುತ್ತಾಡಿದವು.

"ಅನಿವಾರ್ಯ ಪ್ರಸಂಗಗಳು ಅದಕ್ಕೆ ಅಡ್ಡಿಬರಬಹುದಲ್ಲಾ ?"

"ಆ ಮಾತನ್ನು ನಾನು ಒಪ್ಪುವುದಿಲ್ಲ."

"ಏಕೆ ?"

"ಧ್ಯೇಯ ದೃಢವಾಗಿದ್ದರೆ ಎಲ್ಲ ಪ್ರಸಂಗಗಳೂ ನಿವಾರ್ಯವೇ."

"ವ್ಯಕ್ತಿಯ ಪ್ರಸಂಗಗಳು ನಿಜವಾಗಿಯೂ ಅನಿವಾರ್ಯವಾದರೆ ?"

"ವ್ಯಕ್ತಿಯ ಧ್ಯೇಯ ದೃಢವಾಗಿಲ್ಲವೆಂದೇ ತಿಳಿಯಬೇಕು. ಧ್ಯೇಯ ದೃಢವಾಗಿಲ್ಲದಿದ್ದರೆ ನಿವಾರ್ಯವಾದುದೂ ಅನಿವಾರ್ಯವಾಗುವುದು. ಆದರ್ಶ ಧ್ಯೇಯಕ್ಕೆ ಎಲ್ಲ ನಿವಾರ್ಯವೇ. ಅದಕ್ಕೆ ಸೋಲೇ ಇಲ್ಲ."

"ಹಾಗಾದರೆ ಪ್ರಸನ್ನನ ಧ್ಯೇಯ ದೃಢವಾಗಿರಲಿಲ್ಲವೇ ?"

"ನಾನು ಹಾಗೇ ತಿಳಿಯುತ್ತೇನೆ."

"ಹಾಗಾದರೆ ವೃಂದ ಹಾಳಾದುದು ಅನ್ಯಾಯ."

"ವಿವೇಚನೆ ಸಾಲದುದೇ ಅವಳ ಕೇಡಿಗೆ ಕಾರಣ. ನ್ಯಾಯ ಅನ್ಯಾಯಗಳ ಮಾತೇಕೆ ಇಲ್ಲಿ."

" ಏನದು, ಅವಳು ಮಾಡಬೇಕಾಗಿದ್ದ ವಿವೇಚನೆ ? "

" ಪ್ರಸನ್ನನ ಪ್ರೇಮ ಕಡಿದುಹೋಗುತ್ತಲೂ ಅವಳು ಗೋಪುವನ್ನು ಮದುವೆಯಾಗಬೇಕಾಗಿತ್ತು. ಗೋಪುವಿಗೂ ಅವಳಲ್ಲಿ ಅಷ್ಟೇ ಪ್ರೇಮವಿತ್ತು. ಅವಳ ಮನಸ್ಸನ್ನು ಪ್ರಸನ್ನ ಮೊದಲೇ ವಶಪಡಿಸಿಕೊಂಡಿದ್ದುದರಿಂದ ಗೋಪುವಿನ ಪ್ರೇಮದ ಆಳತೆ ಅವಳಿಗೆ ಅರಿವಾಗಲಿಲ್ಲ."

" ವಿಚಾರದೃಷ್ಟಿಯಿಂದ ನಿಮ್ಮ ವಾದ ನನ್ನ ಮನಸ್ಸಿಗೆ ಒಪ್ಪಿಗೆ. ಆದರೆ ಅದು ಭಾವನೆಗಳಿಗೆ ಒಪ್ಪುವುದಿಲ್ಲವಲ್ಲಾ ! "

" ನೀವು ಕನಸಿನ ಬದುಕನ್ನೇ ಇನ್ನೂ ಕಾಣುತ್ತಿದ್ದೀರಿ. ಆದರ್ಶದ ಬಿಸಿಲುಕುದುರೆಯನ್ನೇ ಬೆನ್ನುಹತ್ತಿದ್ದೀರಿ. ಅದೆಲ್ಲ ವಾಸ್ತವತೆಯಿಂದ ದೂರವಾಗಿದೆ. ಯೌವನದ ಅಮಲಿನಲ್ಲಿ ಧ್ಯೇಯಗಳ ಗೋಪುರವನ್ನು ಕಟ್ಟಿಕೊಂಡು ನಿಜಸ್ಥಿತಿಯನ್ನೇ ಮರೆತಿದ್ದೀರಿ. ಫಲಿಸದೆ ಹೋದ ಭೂತಕಾಲದ ಯಾವುದೋ ಆಸೆಯನ್ನು ಹೃದಯದಲ್ಲಿ ತುಂಬಿಕೊಂಡು ಇಂದಿನ ಮತ್ತು ನಾಳೆಯ ಸತ್ಯ ಜೀವನವನ್ನೇ ನೀವು ಮರೆತಿದ್ದೀರಿ. ವಿಚಾರಬುದ್ಧಿ ನಿಮ್ಮ ಧ್ಯೇಯವನ್ನು ಒಪ್ಪುವುದೇ ಇಲ್ಲ. ವೃಂದ ಸಾಧಿಸಿದ್ದಾದರೂ ಏನು ? ಪ್ರಸನ್ನನ ಪ್ರೇಮ ಭಂಗದಿಂದ ತನ್ನ ಬದುಕನ್ನು ಹಾಳುಮಾಡಿಕೊಂಡು ಗೋಪುವನ್ನೂ ನಿರಾಶೆಯ ಬೀಡಿಗೆ ನೂಕಿದಳು. ಅದರಿಂದ ಯಾವ ಆದರ್ಶಸಾಧನೆಯೂ ಆಗಲಿಲ್ಲ." ರಾಜುವಿನ ಮಾತುಗಳು ಗಂಭೀರವಾಗಿದ್ದವು.

' ನಿನ್ನ ಭಾವನೆಯಲ್ಲಿ ಪ್ರಸನ್ನನೇ ಆನಂದನಾದರೆ, ಗೋಪು ನಾನೇ ' ಎಂಬುದು ಅವನ ಮಾತುಗಳಲ್ಲಿ ಅಡಗಿತ್ತು.

ಇಂದಿರೆಯ ಹೃದಯದಲ್ಲಿ ನೂತನವಾದ ಒಂದು ಶಕ್ತಿಸಂಚಾರವಾಯಿತು. ಅವಳ ಕಣ್ಣು ಮಿನುಗಿತು. ತನ್ನ ಮಾತುಗಳಿಂದ ನಿರೀಕ್ಷಿಸಿದ್ದ ಪರಿಣಾಮವನ್ನು ರಾಜು ಅಲ್ಲಿ ಗುರುತಿಸಿದ.

## ೪೦

ಪಿತ್ರಾರ್ಜಿತ ಮನೆಯನ್ನು ಮಾರಿ ರಾಜು ತನ್ನ ಕಲಾಮಂದಿರವನ್ನು ಕಟ್ಟಿದ್ದ. ಮಂದಿರದ ಕಟ್ಟಡ ಮುಗಿದನಂತರ ಕೈಯಲ್ಲಿ ಸ್ವಲ್ಪ ಹಣ ಉಳಿದಿತ್ತು. ಅದರಿಂದ ಕೆಲವು ಹಳೆಯ ಸಾಲಗಳನ್ನು ತೀರಿಸಲು ಮನಸ್ಸುಮಾಡಿದ್ದ. ಅದು

ಕಾರ್ಯಗತವಾಗಲಿಲ್ಲ. ತನ್ನಲ್ಲಿದ್ದ ಹಣವನ್ನು ಬೇಗ ವೃದ್ಧಿಮಾಡಿಕೊಳ್ಳಲು ಕೆಲವು ಪಾಲುಗಾರಿಕೆಯ ಉದ್ಯಮಗಳಲ್ಲಿ ಹಾಕಿದ. ಆ ಉದ್ಯಮಗಳಲ್ಲಿ ಸೇರಿದ್ದ ಇತರ ಬಂಡವಾಳಗಾರರು ಅವನನ್ನು ವಂಚಿಸಿದರು. ಅನುಭವ, ಎಚ್ಚರಿಕೆ ಎರಡೂ ಇಲ್ಲದುದರಿಂದ ಅವನಿಗೆ ಆ ವ್ಯಾಪಾರಗಳಲ್ಲಿ ನಷ್ಟವಾಯಿತು. ಕೈಬಿಟ್ಟುಹೋದ ಬಂಡವಾಳದಲ್ಲಿ ಅರ್ಧಪಾಲೂ ಕೂಡ ಅವನ ಕೈಸೇರಲಿಲ್ಲ. ಆ ಸಂಬಂಧವಾಗಿ ಅವನು ಕೋರ್ಟಿನಲ್ಲಿ ವ್ಯಾಜ್ಯ ನಡೆಸಬೇಕಾಯಿತು. ಅವನಲ್ಲಿ ಉಳಿದಿದ್ದ ಅಷ್ಟಿಷ್ಟು ಹಣವೂ ವ್ಯಾಜ್ಯದ ವೆಚ್ಚಕಾಗಿ ಕೈಬಿಟ್ಟು ಹೋಯಿತು. ಕೊನೆಗೆ ಕೋರ್ಟಿನಲ್ಲಿ ದೊರೆತ ತೀರ್ಪಿನಿಂದಲೂ ಅವನಿಗೆ ಹೆಚ್ಚು ಉಪಯೋಗವಾಗಲಿಲ್ಲ. ಅವನು ಕೆಲವೆಡೆಗಳಲ್ಲಿ ಪುನಃ ಸಣ್ಣ ಸಣ್ಣ ಸಾಲಗಳನ್ನು ಮಾಡಿದ. ಎಲ್ಲ ಸೇರಿ ಮೊತ್ತದಲ್ಲಿ ಮತ್ತೆ ಸಾಲವು ಹೆಚ್ಚಾಯಿತು.

ರಾಜು ಕೈಹಾಕಿದ ಯಾವ ಕೆಲಸವೂ ಅವನು ನಿರೀಕ್ಷಿಸಿದ ರೀತಿಯಲ್ಲಿ ಕೊನೆಗಾಣಲಿಲ್ಲ. ಅವನು ಮತ್ತೊಂದು ಬಾರಿ ಧೈರ್ಯಮಾಡಿ ತನ್ನ ಅದೃಷ್ಟವನ್ನು ಪರೀಕ್ಷಿಸಿಕೊಂಡ. ಒಂದು ದೊಡ್ಡ ವ್ಯವಹಾರಕ್ಕೆ ಕೈಯಿಟ್ಟ. ಟೌನ್ ಹಾಲಿನಲ್ಲಿ ಪ್ರಖ್ಯಾತವಾದ ಒಂದು ನೃತ್ಯಮಂಡಲಿಯಿಂದ ನೃತ್ಯದ ವ್ಯವಸ್ಥೆಯಾಗಿತ್ತು. ಭರತನಾಟ್ಯಮಂದಿರದ ಸಹಾಯಾರ್ಥವಾಗಿ ಆ ನೃತ್ಯವನ್ನು ಏರ್ಪಡಿಸಿದ್ದರು. ಒಪ್ಪಿಗೆಯಂತೆ ನಾಟ್ಯಮಂದಿರಕ್ಕೆ ಒಂದು ಸಾವಿರ ರೂಪಾಯಿಗಳನ್ನು ಪಾವತಿ ಮಾಡಿ ರಾಜು ಆ ಕಾರ್ಯಕ್ರಮದ ಆಯವ್ಯಯದ ಜವಾಬ್ದಾರಿಯನ್ನೆಲ್ಲ ಸಂಪೂರ್ಣವಾಗಿ ವಹಿಸಿಕೊಂಡ. ಅದಕ್ಕಾಗಿ ಅವನು ಪೂರ್ತಿ ಹಣವನ್ನು ಸಾಲಮಾಡಿದ. ಕಾರ್ಯಕ್ರಮ ಫಲದಾಯಕವಾಗುವುದೆಂದು ಅವನು ದೊಡ್ಡ ಆಸೆಯನ್ನು ಕಟ್ಟಿಕೊಂಡ. ಅದರಿಂದ ಹುಟ್ಟಬಹುದಾದ ಹಣದಿಂದ ಸಣ್ಣ ಪುಟ್ಟ ಸಾಲಗಳನ್ನಾದರೂ ತೀರಿಸಿಕೊಂಡು ಮರ್ಯಾದೆಯನ್ನು ಉಳಿಸಿಕೊಳ್ಳಲು ಅವನು ಕಾತರನಾಗಿದ್ದ. ಅನೇಕ ಮಂದಿ ಮಿತ್ರರಿಗೆ ಮತ್ತು ಪರಿಚಿತರಿಗೆ ಅವನು ಗೌರವ ಪ್ರವೇಶಪತ್ರಗಳನ್ನು ಹಂಚಬೇಕಾಯಿತು. ಟಿಕೆಟ್ಟುಗಳು ಹೆಚ್ಚು ಮಾರಾಟವಾಗಿರಲಿಲ್ಲ. ಪ್ರಚಾರ ಚೆನ್ನಾಗಿ ನಡೆದಿದ್ದಿತು. ಅದಕ್ಕಾಗಿ ರಾಜು ಹೆಚ್ಚು ಪ್ರತಿಫಲದ ಆಸೆಯಿಂದ ಹಣವನ್ನು ಚೆಲ್ಲಿದ್ದ. ನೃತ್ಯಮಂದಿರ ಪ್ರೇಕ್ಷಕರಿಂದ ತುಂಬಿಹೋಗುವುದೆಂದು ರಾಜುವಿನ ಎಣಿಕೆ.

ಆ ನಿರೀಕ್ಷಣೆಯಲ್ಲಿ ಅವನು ಮೂರು ರಾತ್ರಿಗಳಿಂದ ನಿದ್ರೆಹೋಗಿರಲಿಲ್ಲ.

ಅಂದು ಭಾನುವಾರ. ಸಂಜೆ ಆರು ಗಂಟೆಗೆ ನೃತ್ಯ. ಆ ಉದ್ಯಮದಲ್ಲಿಯೂ ದುರ್ದೈವ ರಾಜುವಿನ ಬೆನ್ನು ಬಿಡಲಿಲ್ಲ. ಅದೇ ಸಂಜೆ ಅನಿರೀಕ್ಷಿತವಾಗಿ ಮುಗಿಲುಗಳೆದ್ದವು. ಆಕಾಶ ಒಂದು ಕಪ್ಪು ಬಟ್ಟಲಿನಂತೆ ಕಾಣುತ್ತಿತ್ತು. ಮಳೆ ಸುರಿಯಹತ್ತಿತ್ತು. ನೃತ್ಯವನ್ನು ನೋಡಲು ತಾರೀಖನ್ನೇ ಎದುರು ನೋಡುತ್ತಿದ್ದ ಬಹಳ ಮಂದಿ ಆ ಕಾರ್ಯಕ್ರಮುವನ್ನು ತಳ್ಳಿಹಾಕಿದರು. ಮಂದಿರದಲ್ಲಿ ನೆರೆದಿದ್ದವರಲ್ಲಿ ಬಹಳ ಮಂದಿ ಉಚಿತ ಪ್ರವೇಶವನ್ನು ಪಡೆದಿದ್ದ ಸ್ನೇಹಿತರೂ ಮತ್ತು ಪರಿಚಿತರೇ ಆಗಿದ್ದರು. ಪ್ರವೇಶದರವನ್ನು ಕೊಟ್ಟು ಬಂದಿದ್ದ ಮಂದಿಯ ಸಂಖ್ಯೆ ಅಲ್ಪವಾಗಿತ್ತು. ರಾಜುವಿನ ಕೊನೆಯ ಆಸೆಯೂ ಪೂರ್ತಿ ಭಂಗವಾಯಿತು. ಅವನು ತನ್ನ ದುರ್ದೈವದ ವಿಕಟಹಸ್ತವನ್ನು ಮತ್ತೆ ಶಪಿಸಿ ಕೊಂಡ. ದಂಡೆಯನ್ನು ಕಾಣದೆ ಈಜಿ ವ್ಯೆಸೋತವನು ಒಂದು ನೀರಿನ ದಂಟನ್ನು ಕಂಡರೂ ಆಶ್ರಯಿಸುವಂತೆ ರಾಜು ಆ ಕೊನೆಯ ಪ್ರಯತ್ನದ ಫಲವನ್ನು ಆಶ್ರಯಿಸಿದ್ದ. ಅದೂ ನಿರಾಶೆಯಲ್ಲಿ ಕೊನೆಗೊಂಡಿತು.

ಅದೇ ವಾರಾಂತ್ಯದಲ್ಲಿ ನಿರುಪಾಯನಾಗಿ ರಾಜು ಕುದುರೆಯ ಜೂಜು ಗಳಲ್ಲಿ ಸ್ಪರ್ಧಿಸಿದ. ಅಲ್ಲಿಯೂ ಸೋಲಾಯಿತು. ಆಕಾಶದಲ್ಲಿ ದೂರ ದೂರಕ್ಕೆ ಮಿನುಗುತ್ತಿದ್ದ ರಾಜುವಿನ ಪಾಲಿನ ಒಂದೆರಡು ಮಿಣುಕು ದೀವಟಿಕೆಗಳೂ ಆರಿಹೋದವು.

ತನ್ನ ಆರ್ಥಿಕಸ್ಥಿತಿ ಗತಿಗಾಣದಾಗುವ ತನಕ ರಾಜು ಅದನ್ನು ಚಿಂತಿಸಿರ ಲಿಲ್ಲ. ಮನಸ್ಸನ್ನು ಆ ಕಡೆಗೆ ಹರಿಸದೆ ದಿನಗಳನ್ನು ನೂಕುತ್ತಿದ್ದ. ಈಗ ಸ್ಥಿತಿ ತೀರ ಕೆಟ್ಟಿದ್ದರಿಂದ ದಿನಗಳನ್ನು ನೂಕುವುದೂ ಕಷ್ಟವಾಯಿತು. ಹಣವೆಂಬುದು ಮನುಷ್ಯನ ಪ್ರಗತಿ–ವಿಗತಿಗಳಲ್ಲಿ ಅಷ್ಟೊಂದು ಪ್ರಧಾನವಾದುದೆಂದು ಅವನು ಯೋಚಿಸಿರಲಿಲ್ಲ. ಅವನ ಆದರ್ಶ ಮುಗಿಲಿನೆತ್ತರದಿಂದ ನೆಲಕ್ಕೆ ಬಿದ್ದು ಹೋಯಿತು. ಜನರು ತನ್ನ ಕಲಾಕೃತಿಗಳನ್ನು ಒಗ್ಗೊರಲಿನಿಂದ ಮೆಚ್ಚಿದ್ದರು. ಅವರ ಅಭಿಜ್ಞತೆ ರಾಜುವಿಗೆ ಸಂತೋಷವನ್ನು ತಂದಿತು. ಆದರೆ ಅವನ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿರಲಿಲ್ಲ. ಅವನ ಉತ್ತಮ ಕೃತಿಗಳು ಯಾವುವೂ ಮಾರಾಟವಾಗಿರಲಿಲ್ಲ. ಕೇವಲ ಬದುಕಿಗಾಗಿ ಅವನು ಹೆಣಗಾಡಬೇಕಾಗಿತ್ತು.

ರಾಜು ಮುಂದರಿಯುದವನಾಗಿದ್ದ. ಅವನು ಮಧ್ಯಾಹ್ನ ತನ್ನ ಕೊಟಡಿ

ಯಲ್ಲಿ ಚಿಂತಿಸುತ್ತ ಸುಮ್ಮನೆ ಕುಳಿತಿದ್ದ. ಅವನ ಯೋಚನೆಗಳಲ್ಲಿ ಯಾವಾಗಲೂ ಇರುತ್ತಿದ್ದ ಕಲ್ಪನೆಯ ಅಮಲು ಕೆಲದಿನಗಳಿಂದ ಮಾಯವಾಗಿತ್ತು. ಯಾವ ಸ್ಫೂರ್ತಿಯೂ ಅವನಿಗಿರಲಿಲ್ಲ. ರೆಕ್ಕೆ ಕುದುರೆಯನ್ನೇರಿ ಗಗನವಿಹಾರ ಮಾಡುತ್ತಿದ್ದ ಅವನ ಮನಸ್ಸು ನಾಳೆ ಸಾಲಗಾರರ ಹಿಡಿತದಿಂದ ತಪ್ಪಿಸಿಕೊಳ್ಳುವುದು ಹೇಗೆ ಎಂದು ದಿಕ್ಕುಗಾಣದಾಗಿತ್ತು.

ರಾಜು ಸುತ್ತಲೂ ನೋಟವನ್ನು ತಿರುಗಿಸಿದ. ಎದುರಿಗಿದ್ದ ಚಿತ್ರ ಅವನ ಅಂತರಂಗದಲ್ಲಿ ಭಾವನಾತರಂಗಗಳನ್ನು ಸ್ಪಂದನಮಾಡಿತು. ಅವನಿಗೆ ತಕ್ಷಣ ಶಿಶುವಿಹಾರದ ವಾರ್ಷಿಕೋತ್ಸವದ ಆ ರಾತ್ರಿಯ ನೆನಪಾಯಿತು. ಇಂದಿರೆ ಅದೇ ಚಿತ್ರಪಟವನ್ನೇ ಅಂದು ನೋಡುತ್ತಿದ್ದುದು. ಅವಳ ಭಾವಾನುಭವವನ್ನು ರಾಜು ತಿಳಿಯಲಾರದೆಹೋಗಿದ್ದ. ಆದರೆ ಆ ಚಿತ್ರದಿಂದ ಅವಳ ಹೃದಯವನ್ನು ಅವನು ಗೆದ್ದುದು ನಿಶ್ಚಯವಾಗಿತ್ತು. ಊಹೆ ಅವನ ಮನಸ್ಸನ್ನು ಎಲ್ಲಿಯೋ ಹಾರಿಸಿಕೊಂಡುಹೋಗಿ ಅವನನ್ನು ಕೆಲ ಕ್ಷಣಗಳು ಮತ್ತನನ್ನಾಗಿ ಮಾಡಿತು. ಬೇರೆ ಭಾವ ಸ್ವಲ್ಪ ಹೊತ್ತಿನಲ್ಲಿ ಅವನ ಮುಖವನ್ನು ಮೋಡದಂತೆ ಮುಸುಕಿತು. ಆ ಭಾವವೂ ಇಂದಿರೆಯ ವಿಷಯಕವಾದುದೇ ಆಗಿತ್ತು. ಅನಿರ್ಧಾರಮನಸ್ಕತೆ ಅಲ್ಲಿ ತೆರೆತೆರೆಯಾಗಿ ಬಿದ್ದಿತು. ಯಾವುದೋ ಆಂತರ್ಯದ ಹೋರಾಟ ಆ ತೆರೆಯನ್ನು ಹರಡಿತ್ತು.

ರಾಜುವಿನ ಬಾಳ ತೇರು ಅನಿಷ್ಟದ ದಾರಿಗಳಲ್ಲಿ ದೂರ ದೂರ ಉರುಳುತ್ತಿತ್ತು. ಅವನಿಗೆ ಕೇಡು ಒಂದೊಂದು ಸಮಯದಲ್ಲಿ ಅನಿವಾರ್ಯವೆಂದೆನಿಸಿತು. ತಾನು ನಿರ್ಗತಿಕನಾಗಬಹುದು. ಆದರೆ ಅದರಿಂದ ತನಗೆ ಪ್ರೇಮಪಾತ್ರತೆ ಇಲ್ಲವೇ ಎಂದು ತನ್ನನ್ನೇ ಪ್ರಶ್ನಿಸಿಕೊಂಡ. ತಾನು ಮುಂದೆ ಇಂದಿರೆಗೆ ತೋರಬಹುದಾದ ಆಸೆಯಾದರೂ ಏನು ? ಬಹುಶಃ ಅವಳ ಬಾಳ ಬಟ್ಟಲನ್ನು ಕಣ್ಣೀರಿನಿಂದ ತುಂಬಬಹುದು. ಆ ಯೋಚನೆ ಮಾಡಿದಾಗ ಇಂದಿರೆಯ ಬದುಕಿನ ಬೆಳಕನ್ನೆಲ್ಲ ತಾನೇ ಅಳಿಸುತ್ತಿರುವಂತೆ ಅವನಿಗೆ ಭಾವನೆಯಾಯಿತು. ಸ್ವಚ್ಛವಾದ ಚಂದ್ರಬಿಂಬವನ್ನು ರಾಹು ಮುಸುಕುತ್ತಿರುವ ಚಿತ್ರ ಸುಳಿಯಿತು. ಆ ಚಿತ್ರದಲ್ಲಿ ಇಂದಿರೆಯೇ ಪೂರ್ಣಚಂದ್ರ ಮತ್ತು ತಾನೇ ರಾಹು ಎಂದು ಆಗ ಅವನಿಗೆ ತೋರಿತು.

ಕೂಡಲೆ ಆಶಾಭಾವನೆ ಇತರ ಭಾವನೆಗಳ ಮೇಲೆ ದಂಗೆಯೆದ್ದಿತು.

ರಾಜುವಿಗೆ ನೀತಿಬೋಧೆ ಬೇಡವೆನಿಸಿತು. ಇಂದಿರೆಯ ಆಸೆಯೊಂದೇ ಅವನ ಜೀವನಕ್ಕೆ ಚೇತನವನ್ನು ಕೊಟ್ಟಿದ್ದುದು. ಆ ಪೊಂವನ್ನು ಬಿದರೆ ಅವನಿಗೆ ಬಾಳು ಮರುಭೂಮಿಯಾಗಿ ಕಂಡಿತು.

ಎದುರಿಗಿದ್ದ ಚಿತ್ರವನ್ನು ರಾಜು ತಕ್ಷಣ ಕೈಗೆ ತೆಗೆದುಕೊಂಡ. ಅದನ್ನು ಮಾರಿಬಿಡುವುದಾಗಿ ನಿರ್ಧಾರ ಮಾಡಿದ. ಆ ಒಂದು ಚಿತ್ರವನ್ನು ಮಾತ್ರ ವಿಕ್ರಯಿಸಲು ಅವನಿಗೆ ಇಷ್ಟವಿರಲಿಲ್ಲ. ಮನಸ್ಸು ತೂಗಾಡಿತು. ಆಗ ಅವನಿಗೆ ಸರೋಜಳ ನೆನಪಾಯಿತು.

ಹಿಂದೆ ಎಷ್ಟೋ ಬಾರಿ ಸರೋಜ ರಾಜು ತೋರಿಸಿದ ಚಿತ್ರಗಳಿಗಾಗಿ ಇಷ್ಟಪಟ್ಟಿದ್ದಳು. ಸುಂದರರಾಯರು ಅವಳಿಗಾಗಿ ಚಿತ್ರಗಳನ್ನು ಕೊಂಡಿದ್ದರು. ಅಲ್ಲದೆ ವಾರ್ಷಿಕೋತ್ಸವದ ಸಮಯದಲ್ಲಿಯೇ ಸರೋಜ ಆ ಚಿತ್ರಕ್ಕೆ ಆಸೆ ಪಟ್ಟಿದ್ದಳು. ಗೆಳೆಯನಾದ ಆನಂದನಿಗೆ ಆ ಚಿತ್ರವನ್ನು ವಿಕ್ರಯಿಸಲು ಅವನ ಮನಸ್ಸು ಹೇಗೋ ಒಪ್ಪಿತು. ಗಂಟೆ ನಾಲ್ಕೂವರೆಯಾಯಿತು. ಉಡುಪು ಧರಿಸಿ ರಾಜು ಚಿತ್ರದೊಂದಿಗೆ ಆನಂದನ ಮನೆಗೆ ಹೊರಟ.

## ೪೧

ಆನಂದ ತನ್ನ ಮನಸ್ಸನ್ನು ಯಾರಿಗೂ ಹೇಳಿಕೊಳ್ಳುವಂತಿರಲಿಲ್ಲ. ಅವನೊಬ್ಬ ಅಂತರಂಗಜೀವಿಯಾಗಬೇಕಾಯಿತು. ಸಂಪಿಗೆಯ ಯೋಚನೆ ಅವನ ಶಾಂತಿಯನ್ನು ಕದಡಿತ್ತು. ರಂಗರಾಯರು ಹೇಗೋ ದಿನಗಳನ್ನು ನೂಕುತ್ತಿದ್ದರು. ನಾಳಿನ ಸುಖದ ಆಸೆ ಅವರಿಗಿರಲಿಲ್ಲ. ಅವರ ಸುಖ ಮರೀಚಿಕೆಯಾಗಿಯೇ ಉಳಿದುಹೋಯಿತು. ಅವರ ಅಪೇಕ್ಷೆಗಳಿಗೆ ಎಲ್ಲ ಮುಖಗಳಿಂದಲೂ ಭಂಗವಾಗಿತ್ತು. ನಾಗಮ್ಮನವರ ನಿತ್ಯಚಿಂತೆ ಅವರ ಬಾಳ ಸೊಡರಿನ ತೈಲವನ್ನು ನಿಧಾನವಾಗಿ ಇಂಗಿಸುತ್ತಿತ್ತು. ಆನಂದನ ಸುಖಕ್ಕೆ ತಾವೇ ಕಾರಣರೆಂಬ ಭಾವನೆ ಅವರ ಕರುಳನ್ನು ಚುಚ್ಚುತ್ತಿತ್ತು. ಪದ್ಮಳ ಬದುಕೂ ದುಃಖದಲ್ಲಿ ತಳಮಳಿಸುತ್ತಿದೆ ಎಂಬ ವರ್ತಮಾನ ಅವರ ಕಿವಿಯ ಮೇಲೆ ಪದೇ ಪದೇ ಬೀಳುತ್ತಿತ್ತು. ಆಗ ತಮ್ಮ ಸಮಗ್ರ ಕುಟುಂಬದ ನೌಕೆಯೇ ಬಿರುಗಾಳಿಯ ಪೆಟ್ಟಿನಿಂದ ಅಲ್ಲೋಲಕಲ್ಲೋಲವಾದ ಕಡಲಿನೆಡೆಗೆ ವೇಗವಾಗಿ ಓಡುತ್ತಿರುವಂತೆ ಭ್ರಾಂತಿಯಾಯಿತು.

ಆನಂದ ಅದನ್ನೆಲ್ಲ ಊಹಿಸಿಕೊಂಡು ಅಸಹಾಯನಾಗಿ ವ್ಯಥೆಪಡಬೇಕಾಗಿತ್ತು. ಅವನ ಬಾಹ್ಯಜೀವನದಲ್ಲಿ ಅಂತರಂಗದಲ್ಲಿಯ ನೋವನ್ನು ಯತ್ನದಿಂದ ಮುಚ್ಚಿಟ್ಟುಕೊಳ್ಳಬೇಕಾಗಿತ್ತು. ತನ್ನ ದುರ್ದೈವಕ್ಕಾಗಿ ರೋದಿಸುವ ಸ್ವತಂತ್ರವೂ ಇಲ್ಲದೆ ಹೋಯಿತು, ಅವನ ಬದುಕಿನ ಬಿಕ್ಕಟ್ಟಿನಲ್ಲಿ. ಅವನ ಮನಸ್ಸು ಯಾವಾಗಲೂ ಬಗೆಬಗೆಯ ಧ್ಯೇಯಗಳ ಒಂದು ಕದನಕ್ಷೇತ್ರವಾಗಿರುತ್ತಿತ್ತು. ಬದುಕೊಂದು ಜಾಗರೂಕತೆಯ ಹೊರೆಯಾಗಿತ್ತು.

ಒಂದು ಸಂಜೆ ಆನಂದ ಹರ್ಷಚಿತ್ತನಾಗಿದ್ದ. ಅಂತಹ ಸಂಜೆಗಳು ಅವನ ಜೀವನದಲ್ಲಿ ವಿರಳವಾಗಿದ್ದವು. ಅವನು ಸರೋಜಳೊಡನೆ ಕೈತೋಟದಲ್ಲಿ ಮನೆಯ ಮುಂದೆ ಕುಳಿತಿದ್ದ. ಅದೊಂದು ಸುಂದರವಾದ ಸಂಜೆ. ರಕ್ತವರ್ಣದ ಮಂದ ಕಾಂತಿಯಿಂದ ಗುಲಾಬಿ ಹೂವುಗಳು ತಂಗಾಳಿಗೆ ಬಿಂಕದಿಂದ ತಲೆದೂಗುತ್ತಿದ್ದವು. ಮೇಲೆ ಹಬ್ಬಿದ್ದ ಮಲ್ಲಿಗೆಚಪ್ಪರದಲ್ಲಿ ಅಲ್ಲಲ್ಲಿ ಅರಳಿದ ಧವಳ ಪುಷ್ಪಗಳು ಹಸುರೆಲೆಗಳ ನಡುವೆ ಇಣುಕುಹಾಕುತ್ತಿದ್ದವು. ಅವು ಬೀರುತ್ತಿದ್ದ ಕಂಪು ಗಾಳಿಯ ಬೆನ್ನೇರಿ ಪಸರಿಸುತ್ತಿತ್ತು. ಶೃಂಗಾರಕ್ಕಾಗಿ ನೆಟ್ಟಿದ್ದ ಗಿಡಗಳಲ್ಲಿ ವರ್ಣಪತ್ರಗಳು ಬಣ್ಣಕಟ್ಟಿ ನಿಂತಿದ್ದವು. ಆ ಸೊಬಗಿನ ಮೇಲೆ ಸೂರ್ಯನ ಸಂಜೆಯ ಕಿರಣಗಳು ನರ್ತಿಸುತ್ತಿದ್ದವು. ಆನಂದನ ಮನಸ್ಸು ಆಗ ಶಾಂತಿಯಿಂದ ಉಯ್ಯಾಲೆಯಾಡುತ್ತಿತ್ತು.

ಆನಂದನ ಮತ್ತು ಸರೋಜಳ ಮಾತುಗಳು ಗುರಿಯರಿಯದೆ ನಡೆದವು. ಹಿತವಾದ ಭಾವನೆಗಳು ಅವರಿಬ್ಬರ ಹೃದಯಗಳಿಗೆ ಸೇತುವೆಯನ್ನು ಕಟ್ಟಿದ್ದವು.

ಸರೋಜಳ ಕತ್ತಿನಲ್ಲಿ ಮೆರುಗುತ್ತಿದ್ದ ಮುತ್ತಿನ ಮಾಲೆಯನ್ನು ಆನಂದ ದೃಷ್ಟಿಸಿ ನೋಡಿದ. ಅವನ ಮುಖದಲ್ಲಿ ತೃಪ್ತಿ ಮೂಡಿತು. ಸಂಪಿಗೆಯಿಂದ ಬಂದಮೇಲೆ ಅದನ್ನು ಸರೋಜಳಿಗಾಗಿ ಅವನೇ ತಂದುಕೊಟ್ಟಿದ್ದ. ಸರೋಜಳ ಕೊರಳಿನಲ್ಲಿ ಹೊರಹೊಮ್ಮುತ್ತಿದ್ದ ಚೆಲುವು ಸೀರೆಯ ಪ್ರಕರಣದ ನೆನಪನ್ನು ತಂದಿತು. ಸುಂದರರಾಯರ ಮನೆಯಲ್ಲಿ ಆಗ ಅವಳು ಬೇರೆ ಭಂಗಿಯನ್ನು ಪ್ರಕಟಿಸಿದ್ದಳು. ಅಂದು ಅವನ ಮನಸ್ಸಿಗೆ ಗಾಸಿಯಾಯಿತು. ಆದರೆ ಇಂದು ಆ ಪ್ರಕರಣದ ನೆನಪು ಆನಂದನ ಸಂತೋಷವನ್ನು ಹೆಚ್ಚಿಸಿತು.

ಸಂಭಾಷಣೆ ವಿಷಯದಿಂದ ವಿಷಯಕ್ಕೆ ಹಾರಿ ರಾಜುವಿನ ವಿಚಾರವನ್ನು ಬಳಸಿತು.

" ರಾಜುವಿನ ಹೊಸ ಚಿತ್ರ ನೋಡಿದಿರಾ ? "

" ಇಲ್ಲ, ಸಂಪಿಗೆಯಿಂದ ಒಂದವೇಲೆ ಅವನನ್ನು ನಾನು ನೋಡಿಯೇ ಇಲ್ಲ."

" ಚಿತ್ರ ಅದ್ಭುತವಾಗಿದೆ."

" ನನ್ನ ಗೆಳೆಯರೂ ಆ ಚಿತ್ರವನ್ನು ಹೊಗಳಿದರು."

" ಆ ಚಿತ್ರದಿಂದ ರಾಜುವಿನ ಕಲಾನಿಪುಣತೆ ಎಂತಹದು ಎಂದು ಊಹಿಸಬಹುದು."

" ಅವನ ಕಲಾಮಂದಿರಕ್ಕೆ ಒಂದು ಸಂಜೆ ಹೋಗೋಣ."

" ಈ ಭಾನುವಾರ ಹೋಗೋಣವೆ ? "

" ಹೋಗೋಣ."

ಆನಂದ ರಾಜುವಿನ ವಿಚಾರವಾಗಿ ಮಾತನ್ನು ಮುಂದುವರಿಸಿದ.

" ರಾಜುವಿನ ಕಲಾನಿಪುಣತೆಯೇನೋ ನಿರ್ವಿವಾದವಾದದ್ದು. ಆದರೆ ಅವನ ನಡತೆಯಲ್ಲಿ ಒಂದು ಸಂಯಮವಿಲ್ಲ. ಅಳತೆ ಮೀರಿದ ಆಸೆಗೆ ಕೈಚಾಚಿ ಪೆಟ್ಟು ತಿನ್ನುವುದೇ ಹೆಚ್ಚು. ವ್ಯವಹಾರದಲ್ಲಿ ಬಹಳ ತೂಕ ತಪ್ಪುತ್ತಾನೆ."

" ಮಾತನ್ನೆತ್ತಿದ್ದು ಅವನ ಕಲೆಯ ವಿಷಯವಾಗಿ; ವ್ಯಕ್ತಿಯ ವಿಚಾರ ನಮಗೇಕೆ ? " ಸರೋಜಳ ಮಾತು ರಾಜುವಿನ ಪರವಾಗಿ ಸ್ವಲ್ಪ ಬಾಗಿತು.

" ಅವನ ಕಲೆಗೆ ನನ್ನ ಮೆಚ್ಚಿಗೆ ಇದೆ. ಆದರೆ ಅದರಲ್ಲಿ ನ್ಯೂನತೆ ಇಲ್ಲ ಎಂದು ನಾನು ಹೇಳಲಾರೆ."

" ಏನು ನ್ಯೂನತೆ ? "

" ಅವನ ಚಿತ್ರಗಳಲ್ಲಿ ಪಾಶ್ಚಿಮಾತ್ಯ ಚಿತ್ರಕಲೆಯ ಅನುಕರಣೆ ಕಾಣುತ್ತೆ. ಚಿತ್ರಗಳಲ್ಲಿ ಸೌಂದರ್ಯವನ್ನು ರಚಿಸುವಾಗ ಕಾಮಪಿಪಾಸೆಯನ್ನೇ ತುಂಬಿದ್ದಾನೆ. ಶೃಂಗಾರ ಅಶ್ಲೀಲವಾಗಬಾರದು. ಅಂದರೆ ಭಾರತೀಯ ಚಿತ್ರಕಲೆಯಲ್ಲಿ ಅವನ ಶಕ್ತಿ ಕಡಿಮೆ ಎಂದು ನಾನು ಹೇಳುತ್ತಿಲ್ಲ."

" ಸ್ವಲ್ಪ ವಿಶಾಲ ದೃಷ್ಟಿಯಿಂದ ಯೋಚನೆ ಮಾಡಿ. ರಾಜು ಕುಂಚದಿಂದಲೇ ಬದುಕನ್ನು ನಡೆಸಬೇಕಾಗಿದೆ. ಕಲೆ ಅವನ ಆದರ್ಶ, ನಿಜ. ಆದರೆ ಅದು ಅವನ ಜೀವನೋಪಾಯವೂ ಆಗಿದೆ. ಜನರ ಅಭಿರುಚಿಯನ್ನು ಸೆಳೆಯುವ ಕಲೆಯನ್ನು ಅವನು ಸೃಷ್ಟಿಸಬೇಕಾಗಿದೆ. ಅವನ ಕಲೆ ಮಟ್ಟದಲ್ಲಿ

ಇಳಿದಿದ್ದರೆ ಅದು ಜನರ ಅಭಿರುಚಿಯ ಮಟ್ಟವನ್ನು ಸೂಚಿಸುತ್ತದೆ. ಅದಕ್ಕಾಗಿ ಕಲಾವಿದರನ್ನು ಹಳಿಯುವುದು ಸರಿಯಲ್ಲ."

"ನೀನು ಹೇಳುವ ಮಾತಿನಲ್ಲಿ ನಿಜ ಇದೆ" ಎನ್ನಬೇಕಾಯಿತು ಆನಂದ.

ಕಲಾವಿದನಿಗೂ ಕರೆಗೂ ಮಧ್ಯೆ ಬದುಕಿನ ಸಮಸ್ಯೆಯೊಂದಿದೆ ಎಂಬುದನ್ನು ರಾಜು ಸರೋಜಳಿಂದ ತಿಳಿಯಬೇಕಾಯಿತು.

ಇಬ್ಬರೂ ಬೇರೆ ಮಾತೆತ್ತಿದರು. ಆಗ ಅವರಿಬ್ಬರ ನೋಟಗಳೂ ಒಂದು ದೃಶ್ಯದ ಮೇಲೆ ಕೂಡಿದವು. ಪ್ಯೆ ಅರಳಿದ ಎರಡು ಗುಲಾಬಿ ಹೂವುಗಳು ಮಂದಮಾರುತದಿಂದ ಓಲಾಡುತ್ತ ಒಂದನ್ನೊಂದು ಮುತ್ತಿಡುತ್ತಿದ್ದವು. ಸರೋಜ ಆ ಹೂವುಗಳ ಕಡೆಗೆ ಬೆರಳು ತೋರಿಸಿದಳು. ಇಬ್ಬರೂ ನಗೆಯ ಹೊನಲಿನಲ್ಲಿ ತೇಲಾಡುತ್ತಿದ್ದರು.

ನಗು ಕೇಳುತ್ತಿರುವಂತೆ ರಾಜು ಹೆಬ್ಬಾಗಿಲನ್ನು ಹೊಕ್ಕ.

"ವಿಷಯ ಏನು?" ಎನ್ನುತ್ತ ರಾಜು ಒಳಗೆ ಪ್ರವೇಶಿಸಿದ.

"ನಿನ್ನ ವಿಷಯವೇ."

"ನಾಲ್ಕು ಮಂದಿಯನ್ನು ನಗಿಸುವುದೂ ಒಂದು ಪುಣ್ಯ ಅಲ್ಲವೆ?"

"ಇಲ್ಲ ಎಂದವರಾರು? ಆದರೆ ಆ ಪುಣ್ಯ ನಿನ್ನದಲ್ಲ."

ಸರೋಜಳ ತುಟಿಯ ಮೇಲೆ ಆ ಹಾಸ್ಯದ ಕುಡಿ ಮಿಂಚಿಹೋಯಿತು. ಮೂವರೂ ಗಟ್ಟಿಯಾಗಿ ನಕ್ಕರು.

"ನೀವು ನೋಡಬೇಕೆಂದು ಆಸೆಪಟ್ಟ ಚಿತ್ರ ತಾನಾಗಿ ನಿಮ್ಮ ಬಳಿಗೆ ಬಂದಿದೆ" ಎಂದಳು ಸರೋಜ, ರಾಜುವಿನ ಕೈಲಿದ್ದ ಚಿತ್ರಪಟವನ್ನು ನೋಡಿ.

ರಾಜು ಆಸನದ ಮೇಲೆ ಕುಳಿತುಕೊಳ್ಳುತ್ತಿರುವಂತೆ ಆನಂದ ಅವನ ಕೈಯಿಂದ ಚಿತ್ರಪಟವನ್ನು ತೆಗೆದುಕೊಂಡ. ಅವನ ದೃಷ್ಟಿ ಅಲ್ಲಿ ಲೀನವಾಯಿತು. ಆನಂದನ ರಸಾಭಿಜ್ಞತೆ ಸಂತುಷ್ಟಗೊಂಡಿತು. ಆ ಚಿತ್ರವನ್ನು ರಚಿಸಿದಾಗ ಮೂಡಿಹೋದ ಕಲಾವಿದನ ಭಾವಗಳ ಜಾಡು ಊಹೆಗೆ ಸಿಗುವಂತಿರಲಿಲ್ಲ. ಆನಂದನಿಗೆ ಅದು ತನ್ನ ಜೀವನದ ಚಿತ್ರಪಟವೆಂದೆನಿಸಿತು. ಅವನು ಸ್ವಲ್ಪ ಹೊತ್ತು ನಿಶ್ಚೇಷ್ಟಿತನಾಗಿ ಕುಳಿತ.

"ಚಿತ್ರ ಅದ್ಭುತವಾಗಿದೆ" ಎಂದು ಆನಂದ ಮೆಚ್ಚಿ ಹೇಳಿದ.

ಸರೋಜ ತನ್ನ ಆಸೆಯನ್ನು ಪ್ರಕಟಿಸಿದಳು :

" ಆ ಚಿತ್ರಕ್ಕೆ ನಾನು ಆಸೆಪಟ್ಟಿದ್ದೇನೆ." ಬಿಂಕದಿಂದ ನುಡಿದು ಒಳಗೆ ಹೊರಟಳು.

" ನನಗೆ ಕಾಫಿ ಬೇಡಿ " ಎಂದು ಹಾಸ್ಯದ ದನಿಯಲ್ಲಿ ರಾಜು ಹೇಳಿದ.

" ನಮಗೆ ಬೇಕು " ಎಂದಳು ಸರೋಜ.

ಸರೋಜಳ ನಿಲುವನ್ನು ಕಂಡು ಆನಂದನ ಮುಖ ಅರಳಿತು. ಆದರೆ ಅವಳ ಕಣ್ಣು ರಾಜುವಿನ ಕಡೆಗೆ ತಿರುಗಿತ್ತು.

ಆತ್ಮೀಯ ವಿಚಾರಗಳನ್ನೆಲ್ಲ ರಾಜು ಆನಂದನಿಗೆ ತಿಳಿಸಿದ.

" ಕೋರ್ಟಿನ ವ್ಯಾಜ್ಯ ಕೊನೆಗೂ ಪ್ರಯೋಜನವಾಗಲಿಲ್ಲ. ನನ್ನ ಹೆಚ್ಚು ಹಣ ಅದರಲ್ಲಿ ಮುಳುಗಿಹೋಯಿತು. ಭಾನುವಾರ ನೃತ್ಯಪ್ರದರ್ಶನದಲ್ಲೂ ನಷ್ಟವಾಯಿತು. ಮನೆ ಮಾರಿಯಾಯಿತು. ಕಲಾಮಂದಿರವೂ ಉಳಿಯುವ ಹಾಗೆ ಕಾಣುವುದಿಲ್ಲ."

ಆನಂದ ರಾಜುವಿಗಾಗಿ ಮರುಕಪಟ್ಟ. ಅವನಿಗೆ ಒಂದು ಯೋಚನೆ ಹೊಳೆಯಿತು. ಸರೋಜ ಅವನ ಚಿತ್ರಕ್ಕೆ ಆಸೆಪಟ್ಟಿದ್ದಳು. ಆ ಚಿತ್ರವನ್ನು ರಾಜು ಹೇಳಿದ ಬೆಲೆಗೆ ಕೊಂಡರೆ ಅವನಿಗೆ ಅದರಿಂದ ಸಹಾಯವಾಗುವುದೆಂದು ತಿಳಿದ. ಆ ಆಲೋಚನೆಯಲ್ಲಿ ಅವನ ಸ್ವಾರ್ಥವೂ ಇತ್ತು. ನಿಜವಾಗಿ ಅವನೂ ಆ ಚಿತ್ರಕ್ಕೆ ಆಸೆಪಟ್ಟಿದ್ದ.

" ರಾಜು, ಈ ಕಲಾಕೃತಿ ನಮ್ಮ ಸ್ನೇಹದ ಸಂಕೇತವಾಗಿ ನಮ್ಮ ಮನೆಯಲ್ಲೇ ಇರಬೇಕು. ಅದಕ್ಕಾಗಿ ನೀನು ಹೇಳಿದ ಬೆಲೆಯನ್ನು ನಾನು ಕೊಡುತ್ತೇನೆ."

ರಾಜು ನೇರವಾಗಿ ತನ್ನ ಮನಸ್ಸನ್ನು ಹೊರಗೆಡಹಲಿಲ್ಲ.

" ಈ ಚಿತ್ರವನ್ನು ನಾನು ಮಾರಾಟಕ್ಕೋಸ್ಕರ ರಚಿಸಲಿಲ್ಲ " ಎಂದ.

" ವ್ಯಾಪಾರದ ದೃಷ್ಟಿಯಿಂದ ನಾನು ಅದನ್ನು ಕೇಳಲಿಲ್ಲ, ರಾಜು. ಅದಕ್ಕಾಗಿ ಸರೋಜ ಆಸೆಪಟ್ಟಿದ್ದಾಳೆ. ಸ್ನೇಹದ ಕಾಣಿಕೆಯಾಗಿ ನೀನು ಅದನ್ನು ನಮಗೆ ಕೊಡಬೇಕು " ಎಂದು ಕೇಳಿದ.

ಆ ಮಾತನ್ನು ಕೇಳುತ್ತಾ ಸರೋಜ ಕಾಫಿ ತಂದಳು.

" ನಿಮ್ಮಿಷ್ಟ " ಎನ್ನುವಂತೆ ರಾಜು ಕಲಾವಿದನ ನಗುವನ್ನು ನಕ್ಕ. ಆ ನಗು ಸರೋಜಳ ಎದೆಯನ್ನು ಬ್ಬಿಸಿತು.

೪೨

ಪದ್ಮಳ ಒಂದು ವರ್ಷದ ದಾಂಪತ್ಯಜೀವನ ದೇವನಹಳ್ಳಿಯಲ್ಲಿ ಸಾಗಿತ್ತು. ಸಂಪಿಗೆಯಲ್ಲಿ ತಂದೆಯ ಮನೆ ಯಾವಾಗಲೂ ಚಿಂತೆಯ ಕುಲುಮೆ ಯಾಗಿರುತ್ತಿತ್ತು. ಆದರೆ ಅವಳಿಗೆ ಆ ಮನೆಯಲ್ಲಿ ಕರುಳಿನ ವಿಶ್ವಾಸ ಬೇಕಾ ದಷ್ಟಿತ್ತು. ತಂದೆತಾಯಿಗಳ ಪ್ರೀತಿ, ಪರಿಸ್ಥಿತಿಗಳ ಮುಳ್ಳುಹಾಸಿಗೆಯನ್ನೂ ಹತ್ತಿಯ ಹಾಸಿಗೆಯನ್ನಾಗಿ ಮಾಡಿತ್ತು.

ತನ್ನ ಮದುವೆಯ ವಿಚಾರದಲ್ಲಿಯೇ ಎಲ್ಲರೂ ಮುಳುಗಿಹೋಗಿದ್ದ ಆ ದಿನಗಳ ನೆನಪಾಗಿ ಪದ್ಮಳ ಮನಸ್ಸಿನಲ್ಲಿ ಯೋಚನೆಗಳು ಅಲೆದಾಡುವುವು. ಅಲೆ ದಾಟವೆಲ್ಲ ಮುಗಿದ ಮೇಲೆ ಆ ಯೋಚನೆಗಳು ರೆಕ್ಕೆ ತಾಳಿ ಸಂಪಿಗೆಯ ಕಡೆಗೇ ಹಾರುವುವು. ದೈವ ಅವಳನ್ನು ಕಚ್ಚಿಕೊಂಡು ಹೋಗಿ ದೇವನಹಳ್ಳಿಯಲ್ಲಿ ನಾಣಿ ಮನೆಯನ್ನು ಸೇರಿಸಿದೆ. ಒಂದು ವರ್ಷದ ದಿನಗಳನ್ನು ಅವಳು ಅಲ್ಲಿಯೇ ನೂಕಿದ್ದಾಳೆ. ಆ ಮನೆ ಅವಳ ಪಾಲಿಗೆ ವಿಧಿ ತಂದೊಡ್ಡಿದ ಕರುಣಾಶೂನ್ಯ ವಾದ ಒಂದು ಪಂಜರವಾಗಿದೆ. ಸಂಪಿಗೆಗೆ ಒಂದು ಬಾರಿಯಾದರೂ ಹೋಗಿ ಬರಬೇಕೆಂಬ ಅವಳ ಬಹುದಿನದ ಹಂಬಲ ಕನಸಾಗಿಯೇ ಉಳಿದಿದೆ.

ಪದ್ಮ ತನ್ನ ಜೀವನದ ವಿಷಯವಾಗಿ ಕಟ್ಟಿಕೊಂಡಿದ್ದ ಸ್ವಪ್ನಮಂದಿರ ಗಳೆಲ್ಲ ನುಚ್ಚಾಗಿದ್ದವು. ಮನೆ ಗೋಳಿನ ಬೀಡಾಗಿದ್ದಿತು. ವೆಂಕಮ್ಮನವರು ನಿಷ್ಕರುಣಿಗಳಾಗಿ ಅವಳನ್ನು ಕಾಣುತ್ತಿದ್ದರು. ನಾಣಿಯ ಮನಸ್ಸು ಅವರ ಕೈಯ ಲ್ಲಿಯ ಮೇಣವಾಗಿತ್ತು. ಅಗ್ನಿಸಾಕ್ಷ್ಯದಲ್ಲಿ ಪದ್ಮಳಿಗಾಗಿ ಒಪ್ಪಿಕೊಂಡಿರುವ ತನ್ನದೊಂದು ಕರ್ತವ್ಯವಿದೆ ಎಂಬುದನ್ನು ಅರಿಯದ ಅಸಂಸ್ಕೃತನಾಗಿದ್ದ, ನಾಣಿ. ಅವನು ವಾರದಲ್ಲಿ ಹೆಚ್ಚು ದಿನಗಳು ಊರಿನಲ್ಲಿಯೇ ಇರುತ್ತಿರಲಿಲ್ಲ. ವೆಂಕಮ್ಮ ನವರೇ ಮನೆಯಲ್ಲಿ ಸರ್ವಾಧಿಕಾರಿಗಳು.

ಪದ್ಮಳಿಗೆ ಜೀವನವೊಂದು ಹೆಣಗಾಟವಾಗಿದೆ. ಸಿಹಿನೀರಿನ ಬಾವಿ ಮನೆ ಯಿಂದ ಅರ್ಧ ಮೈಲಿಗೆ ಮಿಕ್ಕು ದೂರದಲ್ಲಿದೆ. ದಿನಕ್ಕೆ ಎರಡು ಬಾರಿ ಆ ದಾರಿಯನ್ನು ಅವಳು ತುಳಿಯಬೇಕು. ಭಾರವಾದ ಕೊಡಗಳನ್ನು ಪಾತಾಳದಲ್ಲಿ ನಿಂತಿರುವ ನೀರಿನಿಂದ ಮೇಲಕ್ಕೆ ಸೆಳೆಯಬೇಕು. ಮೈ ಸೋತುಹೋಗುವುದು. ತೋಳುಗಳು ಕತ್ತರಿಸುವುವು. ಇತರ ಹೆಂಗಸರು ಅವಳಿಗಾಗಿ ಮರುಕ ತೋರಿಸು ತ್ತಾರೆ. ಮರುಕದ ಮಾತು ಅವಳ ನೊಂದ ಹೃದಯವನ್ನು ಮತ್ತೂ ಉಮ್ಮಳಿಸುವುದು.

ಬಟ್ಟೆಗಳನ್ನು ಶುಚಿಮಾಡಲು ಕೆರೆಗೆ ಹೋಗಬೇಕು. ಆಗ ಮಧ್ಯಾಹ್ನದ ಸಮಯವಾಗುವುದು. ಸೂರ್ಯನ ಉರಿಯ ಕಿರಣಗಳು ಮಲಿನವಾದ ಕೆನ್ನೀರಿನಲ್ಲಿ ಬಿದ್ದು ಬೆಳ್ಳಿಯ ರೇಕುಗಳು ಬೆಳಗುವುವು. ನೀರೂರಿರುವ ಪದ್ಮಳ ಕಣ್ಣಿಗೆ ನೀರಿನಲ್ಲಿ ಅಲುಗಾಡುತ್ತಿರುವ ಸೂರ್ಯನು ಮತ್ತೂ ಅಸ್ಪಷ್ಟವಾಗಿ ಮಿನುಗುತ್ತಾನೆ. ದೂರದ ಮೈದಾನದಲ್ಲಿ ಅಲ್ಲಲ್ಲಿ ಮೇಯುತ್ತಿರುವ ಮೂಕಪ್ರಾಣಿಗಳ ವಿನಾ ಯಾರೂ ಅವಳಿಗೆ ಸಂಗ ಕೊಡುವವರಿಲ್ಲ. ಏನೋ ಭಾವನೆ ಮಿಂಚಿ ಬಂದು ಅವಳಿಗೆ ಉಗುಳನ್ನು ನುಂಗುವಂತಾಗುತ್ತದೆ. ಬಿಟ್ಟ ಉದ್ದವಾದ ಉಸಿರು ಯಾವ ತಡೆಯೂ ಇಲ್ಲದೆ ಬಿಸಿಯಾದ ವಾತಾವರಣದಲ್ಲಿ ಸೇರಿಹೋಗುತ್ತದೆ. ಬಂಡೆಯ ಮೇಲೆ ಬಟ್ಟೆಯನ್ನಪ್ಪಳಿಸಿದಾಗ ಏಳುವ 'ಧಪ್, ಧಪ್....' ಶಬ್ದ ದೂರ ದೂರ ಎಲ್ಲಿಯೋ ತೂರಿಹೋಗುವುದು. ಒಂದೊಂದು ದಿನ ಬಹಳ ಕಾಲ ಚಿಂತಾಮಗ್ನಳಾಗಿ ಸುಮ್ಮನೆ ಕುಳಿತುಬಿಡುವಳು. ದೂರದವರೆಗೆ ಹಬ್ಬಿರುವ ನೀರನ್ನು ಕಂಡು ಒಂದೊಂದು ವೇಳೆ ಅವಳಿಗೆ ಏನೋ ಅರಿವಾಗುವುದು. ಬದುಕಿನ ಸಮಸ್ಯೆಯನ್ನು ಬಿಡಿಸಿಕೊಳ್ಳುವವಳಂತೆ ಬಗೆಯುತ್ತಾಳೆ. ಆಗ ಅವಳ ಕಣ್ಣಿನಿಂದ ಕಿಡಿಯೊಂದು ಸಿಡಿದುಹೋಗುವುದು. ಹೊತ್ತು ಬಹಳ ಆಗಿಹೋಗುವುದು. ಮನೆಯಲ್ಲಿ ಅತ್ತೆ ಚುಚ್ಚಿ ನುಡಿಯುವರೆಂದು ಬೇಗ ಬೇಗ ಮನೆಗೆ ಹೆಜ್ಜೆಹಾಕುತ್ತಾಳೆ. ಉದ್ದವಾದ ಆ ಹಾದಿ ಬಿಸಿಲಿನಿಂದ ಕೆಂಡಗೊಂಡಿರುತ್ತದೆ, ಅವಳ ಬಾಳಿನ ಹಾದಿಯಂತೆ. ಕಂಗಾಲಾಗಿ ಮನೆ ಸೇರುತ್ತಾಳೆ. ಅವಳು ಊಹಿಸಿದ ನಾಟಕ ನಡೆದೇ ನಡೆಯುತ್ತದೆ. ಕತ್ತಲ ತೆರೆ ಬೀಳುವ ವರೆಗೂ ಅವಳ ಕೆಲಸಗಳು ಮುಗಿಯುವಂತಿಲ್ಲ. ಆಲೋಚನೆ ಮಾಡುತ್ತ ನಿದ್ರೆ ಬಾರದೆ ರಾತ್ರಿ ಜಾರಿಹೋಗುವುದು. ಕತ್ತಲು ಕರಗುತ್ತಿರುವಂತೆಯೇ ಪದ್ಮಳ ಪಾಲಿನ ಜಗತ್ತು ನಿದ್ದೆ ತಿಳಿದೆದ್ದಿರುತ್ತದೆ. ಅವಳ ಕರ್ಮಚಕ್ರ ಸತತವಾಗಿ ಸುತ್ತಲೇಬೇಕು. 'ಸಾಕು ಈ ಬದುಕು' ಎನ್ನುತ್ತದೆ ಅವಳ ಮೂಕಜೀವ.

ದಣಿದು ಪದ್ಮ ಪದೇ ಪದೇ ರೋಗಗ್ರಸ್ತಳಾಗುತ್ತಾಳೆ. ಆಗ ವೆಂಕಮ್ಮನವರು ಅವಳ ಪಾಲಿನ ಕೆಲಸಕ್ಕೆ ಹೆಗಲನ್ನು ಕೊಡಬೇಕು. ಆಗ ಮನೆಯಲ್ಲಿ ಬೇಸರದ ಬಯ್ಗಳು. ನಾಣಿಯ ಮನಸ್ಸನ್ನು ಪದ್ಮಳ ವಿಷಯ ಮತ್ತೂ ಬೇಸರಪಡಿಸುತ್ತಾರೆ. ಅವನು ಅವಳ ಅಸ್ವಸ್ಥ ದಿವಸಗಳಲ್ಲಿ ಮನೆಯನ್ನೇ ಸೇರುವುದಿಲ್ಲ.

೪೩

ಸಂಪಿಗೆಯಿಂದ ರಂಗರಾಯರು ಬರೆದಿದ್ದ ಕಾಗದಗಳೊಂದೂ ಪದ್ಮಳ ಕೈಸೇರಿರಲಿಲ್ಲ. ದುರದೃಷ್ಟದ ತೆಕ್ಕೆಯಲ್ಲಿದ್ದ ತಂದೆತಾಯಿಗಳ ಬದುಕು ಅವಳ ಪಾಲಿಗೆ ಒಂದು ಅಜ್ಞಾತ ವಿಷಯವಾಗಿ ಉಳಿಯಿತು. ಆನಂದನೂ ದೇವನ ಹಳ್ಳಿಗೆ ಪತ್ರಗಳನ್ನು ಬರೆದಿದ್ದ. ಅವುಗಳ ತಿಳಿವಳಿಕೆಯೂ ಇಲ್ಲದೆ ಪದ್ಮಳ ಹೃದಯ ಕುಗ್ಗಿದ್ದಿತು.

ತನ್ನವರಿಂದ ಪತ್ರಗಳು ಬಂದಿದ್ದರೂ ಅವು ತನ್ನ ಕೈಸೇರಿರಲಿಲ್ಲವೆಂದು ಪದ್ಮಳಿಗೆ ತಿಳಿಯಿತು. ಅದನ್ನು ತಿಳಿದು ಅವಳು ಏನೂ ಮಾಡುವಂತಿರಲಿಲ್ಲ. ಅದು ಅವಳಿಗೆ ಮತ್ತೂ ನೋವನ್ನು ಮಾಡಿತು.

ಒಂದು ಸಂಜೆ ಪದ್ಮ ಅನಿರೀಕ್ಷಿತವಾಗಿ ಮೇಜಿನ ಮೇಲೆ ಬಿದ್ದಿದ್ದ ಒಂದು ಪತ್ರವನ್ನು ನೋಡಿದಳು. ಆ ಪತ್ರವನ್ನು ಬಿಚ್ಚಿ ಓದಿಕೊಂಡಳು. ಅದು ಅವಳ ಹೃದಯದ ತಂತಿಗಳನ್ನೆಲ್ಲಾ ಏಕಕಾಲದಲ್ಲಿ ಮಿಾಟಿತು. ಪತ್ರ ರಂಗರಾಯರಿಂದ ಬಂದಿದ್ದಿತು. ವಿಳಾಸವನ್ನು ತಲಪಿ ನಾಲ್ಕು ದಿವಸವಾಗಿತ್ತು. ಪತ್ರದಲ್ಲಿಯ ಸಮಾಚಾರಗಳನ್ನು ತಿಳಿದು ಕಣ್ಣಿನಲ್ಲಿ ಹನಿಕೂಡಿತು. ರಂಗರಾಯರು ನಾಲ್ಕು ಪತ್ರಗಳನ್ನು ಬರೆದಿದ್ದರೂ ನಾಣಿಯಿಂದ ಉತ್ತರವಿಲ್ಲದೆ ನಿರಾಶರಾಗಿದ್ದರು. ನಾಗಮ್ಮನವರ ದೇಹಸ್ಥಿತಿ ಕೆಟ್ಟದ್ದಿತು. ಪದ್ಮಳ ವಿಷಯವಾಗಿ ಏನೂ ಕೇಳದೆ ಚಿಂತೆಗೊಳಗೊಂಡಿದ್ದರು. ತಮ್ಮ ಬದುಕಿನ ಎಲ್ಲ ಮುಖಗಳಲ್ಲಿಯೂ ನೋವನ್ನೇ ಕಂಡು ಕ್ಲೇಶಗೊಂಡಿದ್ದರು. ಇಷ್ಟನ್ನೆಲ್ಲ ನಾಣಿಗೆ ತಿಳಿಸಿ ಒಂದು ಪತ್ರವನ್ನು ಬರೆದು ಮನಸ್ಸಿಗೆ ಶಾಂತಿಭಿಕ್ಷೆಯನ್ನು ನೀಡುವಂತೆ ಅವನನ್ನು ಪ್ರಾರ್ಥಿಸಿದ್ದರು. ಪದ್ಮಳ ರೋಷ ಒಮ್ಮೆ ಉಕ್ಕಿ ಸಿಡಿಯಿತು. ಆದರೆ ಅಸಹಾಯಕತೆಯಲ್ಲಿ ಅದು ಕೊನೆಗಾಣದಾಯಿತು. ಯಾವುದೋ ನಾಟಕಮಂಡಲಿಯ ಜೊತೆಯಲ್ಲಿ ನಾಣಿ ಹೊರಟುಹೋಗಿದ್ದ. ಅವನು ದೇವನಹಳ್ಳಿಯನ್ನು ಬಿಟ್ಟು ಮೂರು ದಿನ ವಾಗಿತ್ತು.

ಆ ದಿನ ಪದ್ಮಳ ಸಮಾಧಾನವೆಲ್ಲ ಚೂರುಚೂರಾಗಿದ್ದಿತು. ಹೊತ್ತು ಬಹಳವಾದರೂ ಅವಳು ಕೆರೆಯಿಂದ ಹಿಂತಿರುಗಲಿಲ್ಲ. ಆ ದಿನ ವೆಂಕಮ್ಮನವರ ಶರೀರ ಸ್ವಸ್ಥತೆಯೂ ಕೆಟ್ಟದ್ದಿತು. ಅವರು ಪದ್ಮಳಿಗಾಗಿ ದಾರಿ ಕಾದು ಕೆಂಡ ಗೊಂಡಿದ್ದರು. ತಮ್ಮ ರೋಷವನ್ನು ಕಾರಲು ಮೊರೆಯುತ್ತಿದ್ದರು. ಅದು

ಪದ್ಮಳ ಗೃಹಜೀವನದ ಒಂದು ಸಾಮಾನ್ಯ ದೃಶ್ಯ.

ಪದ್ಮ ಕೆರೆಯ ದಂಡೆಯ ಮೇಲೆ ಅಷ್ಟು ಹೊತ್ತು ಎಂದೂ ಕುಳಿತಿರಲಿಲ್ಲ. ಬಿಸಿಲಿನ ಝಳ ದೂರದ ಹಸುರು ನಿಸರ್ಗವನ್ನು ನೀರಿನಲ್ಲಿ ತೊಯ್ಸಿದಂತೆ ಭ್ರಾಮಕವಾಗಿ ನರ್ತಿಸುತ್ತಿತ್ತು. ಅಲ್ಲಿಂದ ನೀರಿನ ಮೇಲೆ ಬೀಸಿ ಬಂದ ಬಿಸಿಗಾಳಿ ಅಲೆಗಳನ್ನು ಗುಂಪುಗುಂಪಾಗಿ ಉರುಳಿಸಿಕೊಂಡು ತಂದು ದಂಡೆಯನ್ನು ಮುಟ್ಟಿಸುತ್ತಿತ್ತು. ಬೆವರೂರಿದ ಅವಳ ಮೈಮೇಲೆ ಆಗ ತಂಪಾದ ಮಂದ ಮಾರುತ ಒಂದು ಕ್ಷಣ ತೇಲಿಹೋಗುತ್ತಿತ್ತು. ಆದರೆ ಪದ್ಮಳ ತಲೆಯಲ್ಲಿ ಹೊಯ್ದಾಡುತ್ತಿದ್ದ ಯೋಚನೆಗಳು ದಂಡೆ ಕಾಣದೆ ಅಲೆದಾಡುತ್ತಿದ್ದವು. ದೂರದ ಬಿಸಿಲುಗುದುರೆಯನ್ನೇ ನೋಡುತ್ತ ಮೈಮರೆತು ಕುಳಿತಳು. ಕಾಲದ ಅರಿವಿರಲಿಲ್ಲ. ಎಚ್ಚೆತ್ತಾಗ ಎದುರಿಗೆ ರಾಶಿಯಾಗಿದ್ದ ಬಟ್ಟೆಗಳ ಮೇಲೆ ನೋಟ ಬಿದ್ದಿತು.

ನಾಣಿಯ ಒಂದು ಕವಚ ಮಾತ್ರ ಶುಭ್ರವಾಗದೆ ಉಳಿದಿದ್ದಿತು. ಅವನ್ನು ಅವಳು ತೊಯ್ಸಲು ತೆಗೆದುಕೊಂಡಾಗ ಕಿಸೆಯಲ್ಲಿ ಕೆಲವು ಪತ್ರಗಳು ಕಂಡವು. ಆತುರದಿಂದ ಅವುಗಳನ್ನು ಹೊರಗೆ ತೆಗೆದಳು. ಆ ಪತ್ರಗಳಲ್ಲಿ ಅವಳಿಗಾಗಿ ಆನಂದ ಕಳುಹಿಸಿದ್ದ ಒಂದು ಮನಿಯಾರ್ಡರ್ ರಶೀತಿಯಿತ್ತು. ವಾರದ ಹಿಂದೆ ಅವನು ಪದ್ಮಳಿಗಾಗಿ ನಾಣಿಯ ವಿಳಾಸಕ್ಕೆ ಐವತ್ತು ರೂಪಾಯಿಗಳನ್ನು ಕಳುಹಿಸಿದ್ದ. ರಶೀತಿಯ ಅಡಿಯಲ್ಲಿದ್ದ ಮಾತುಗಳನ್ನೋದಿದಾಗ ಅವಳ ಕಣ್ಣೀರು ಕಟ್ಟೆಯೊಡೆಯಿತು. ತಾಯಿಯ ಪರಿಸ್ಥಿತಿ ಚಿಂತಾಜನಕವಾಗಿದೆಯೆಂದು ಅವನು ವಿಷಾದಪಟ್ಟು, ಪದ್ಮಳನ್ನು ನೋಡಬೇಕೆಂದು ಅವರು ಪ್ರತಿ ಕ್ಷಣವೂ ಹಂಬಲಿಸುತ್ತಿರುವುದಾಗಿ ತಿಳಿಸಿದ್ದ. ಅವಳನ್ನು ಎರಡು ದಿನ ಸಂಪಿಗೆಗೆ ಕಳುಹಿಸುವಂತೆ ನಾಣಿಯನ್ನು ಪ್ರಾರ್ಥಿಸಿದ್ದ. ನಾಣಿಯ ಹೃದಯವನ್ನು ಆ ಪ್ರಾರ್ಥನೆ ಮುಟ್ಟಿರಲಿಲ್ಲ. ಆನಂದ ಕಳುಹಿಸಿದ್ದ ಹಣವನ್ನೆಲ್ಲ ಪದ್ಮಳ ತಿಳಿವಳಿಕೆ ಇಲ್ಲದೆ ತಾನೇ ಬಳಸಿಕೊಂಡಿದ್ದ. ಸುಮಾರು ವಾರದ ಹಿಂದೆ ನಾಣಿ ಹಣಕ್ಕಾಗಿ ಪೇಚಾಡುತ್ತಿದ್ದುದೂ, ಹಠಾತ್ತನೆ ಸಮಾಧಾನಚಿತ್ತನಾದುದೂ ಪದ್ಮಳಿಗೆ ನೆನಪಾಯಿತು. ಆ ಸಮಾಧಾನಕ್ಕೆ ಕಾರಣ ಅವಳಿಗೆ ಈಗ ಸ್ಪಷ್ಟವಾಯಿತು.

೪೪

ರಾಜುವಿನ ಆರ್ಥಿಕ ಪರಿಸ್ಥಿತಿ ಮುಗ್ಗಟ್ಟಿಗಿಟ್ಟುಕೊಂಡಿತು. ಪರಿಸ್ಥಿತಿಯ ಪ್ರವಾಹ ಅವನನ್ನು ಹೇಗೆ ನಡೆಸಿದರೆ ಹಾಗೆ ನಡೆಯಲು ಸಿದ್ಧನಾದ. 'ಮುಂದೇನು?' ಎಂದು ಚಿಂತಿಸಿದಾಗ ಏನೂ ತೋಚದೆ ದಿಙ್ಮೂಢನಾಗುತ್ತಿದ್ದ. ತನ್ನ ದುರ್ಗತಿಯನ್ನು ಸಮಾಜದ ಕಣ್ಣಿನಿಂದ ಮುಚ್ಚಿಡಲು ಎಲ್ಲ ಪ್ರಯತ್ನಗಳನ್ನೂ ಮಾಡಿದ. ತನ್ನ ಸಾಮರ್ಥ್ಯದಲ್ಲಿ ತನಗೇ ನಂಬಿಕೆ ಸಡಿಲವಾಯಿತು. ರಾತ್ರಿಯಲ್ಲಿ ನಿದ್ರೆಹತ್ತುತ್ತಿರಲಿಲ್ಲ. ನಿದ್ರೆ ಸ್ವಲ್ಪ ಮುಸುಕಿದರೂ ಮನಸ್ಸಿನಲ್ಲಿ ತಾಂಡವವಾಡುತ್ತಿದ್ದ ಭವಿಷ್ಯದ ಕರಾಳ ಯೋಚನೆಗಳು ಕಣ್ಣೆವೆಯನ್ನು ತೆರೆಯುತ್ತಿದ್ದವು.

ತನ್ನ ಚಿಂತೆಯನ್ನು ಮರೆಯಲು ರಾಜು ಕೃತಕ ಆಸಕ್ತಿಗಳನ್ನು ಹೆಚ್ಚಿಸಿಕೊಂಡ. ಪ್ರತಿದಿನವೂ ಅವನು ಚಲನಚಿತ್ರಗಳನ್ನು ನೋಡಬೇಕು. ಒಂಟಿಯಾಗಿದ್ದರೆ ಚಿತ್ರಮಂದಿರದಲ್ಲಿಯೂ ಚಿಂತೆ ಅವನನ್ನು ಸುತ್ತುತ್ತದೆ. ಸ್ನೇಹಿತರ ಸಂಗದಲ್ಲಿಯೂ ಸಮಾಧಾನವಿಲ್ಲ. ಹತ್ತಿರವಾಗುತ್ತಿದ್ದ ಪರಿಸ್ಥಿತಿಯ ಬಿರುಗಾಳಿಯಿಂದ ಪಾರಾಗುವ ಆಸೆ ದೂರವಾಗುತ್ತಿತ್ತು. ಆ ಬಿರುಗಾಳಿಯ ದಿನವನ್ನು ಆದಷ್ಟು ಮುಂದೆ ದೂಡಲು ಅವನು ಯತ್ನಿಸುತ್ತಿದ್ದ. ತನ್ನ ಕಲಾಶಾಲೆಯನ್ನು ವಿಕ್ರಯಿಸಿದರೂ ಸಾಲ ಪೂರ್ತಿಯಾಗಿ ಕರಗುವಂತಿರಲಿಲ್ಲ. ಇತ್ತೀಚೆಗೆ ಹೆಚ್ಚಿನ ಆಸೆಯಿಂದ ಅವನು ಕುದುರೆಯ ಜೂಜಿಗೆ ಚೆಲ್ಲಿದ ಹಣವನ್ನು ಉಳಿಸಿಕೊಂಡಿದ್ದರೂ ಸದ್ಯದ ಪರಿಸ್ಥಿತಿ ಸ್ವಲ್ಪ ಸುಧಾರಿಸುತ್ತಿತ್ತು. ಆ ಮನೋಗತಿಯಲ್ಲಿ ಅವನು ಇಂದಿಯನ್ನು ಪದೇ ಪದೇ ಕಾಣಲು ಬಯಸುತ್ತಿದ್ದ. ಅವಳ ಸಂಗದಲ್ಲಿ ಅವನಿಗೆ ಏನೋ ಹರ್ಷಾನುಭವವಾಗುತ್ತಿತ್ತು.

ಇಂದಿರೆಯ ಮನಸ್ಸು ಚಂಚಲವಾಗುತ್ತಿತ್ತು. ಕರಗಿದ ಮೇಣದಂತೆ ಅದು ಬೇರೆ ಆಕಾರಗಳನ್ನು ತಾಳುತ್ತಿತ್ತು. ಆಗಾಗ್ಗೆ ರಾಜು ತನ್ನನ್ನು ನೋಡಲು ಬರುತ್ತಿದ್ದುದು ಅವಳಿಗೆ ಒಂದು ಬಗೆಯ ಆಂತರಿಕ ತೃಪ್ತಿಯನ್ನು ಕೊಟ್ಟದ್ದಿತು. ಅವಳೇ ಕೆಲವು ಸಲ ರಾಜುವಿನ ದಾರಿಯನ್ನು ಕಾಯುತ್ತಿದ್ದುದೂ ಉಂಟು. ರಾಜು ಅವಳ ನಿರೀಕ್ಷಣೆಯನ್ನು ಯಾವಾಗಲೂ ಭಂಗಮಾಡಿರಲಿಲ್ಲ.

ಇಂದಿರೆಯಲ್ಲಿ ಹೊರಗಾಣುತ್ತಿದ್ದ ಇತ್ತೀಚಿಗಿನ ಬದಲಾವಣೆಗಳು ಸುಶೀಲಾಬಾಯಿಯ ದೃಷ್ಟಿಯಿಂದ ಮರೆಯಾಗಿರಲಿಲ್ಲ. ಆಕೆಯ ಸೂಕ್ಷ್ಮ

ನೋಟ ಎಂತಹ ರಹಸ್ಯವನ್ನೂ ಇಣುಕುವಂತಹದು. ಶಾಲೆಯ ಕಾರ್ಯಗಳಲ್ಲಿ ತೋರುತ್ತಿದ್ದ ಇಂದಿರೆಯ ಅನಾಸಕ್ತಿ ಈಗ ಯಾವ ಆಸಕ್ತಿಯಲ್ಲಿ ಬೇರುಬಿಟ್ಟಿದೆ ಎಂಬುದನ್ನು ಆಕೆ ತರ್ಕಿಸಿದ್ದಳು. ಆಕೆಯ ಸಂಶಯದೃಷ್ಟಿ ಇಂದಿರೆ–ರಾಜು ಇಬ್ಬರ ಸ್ನೇಹದ ಮೇಲೆ ಬಿದ್ದಿದ್ದಿತು. ಬಯಸಿದ ಹಣ್ಣು ಸಿಗದೆ ಬೇಡನ ಬಲೆಗೆ ರೆಕ್ಕೆ ಬೀಸಿ ಹಾರುತ್ತಿರುವ ಹಕ್ಕಿಯ ಗತಿಯಾಯಿತು, ಇಂದಿರೆಯ ಗತಿ.

ಕೆಲದಿನಗಳಲ್ಲಿ ನಡೆದ ಒಂದು ಪ್ರಸಂಗ ಸುಶೀಲಾಬಾಯಿಯ ಮನಸ್ಸನ್ನು ಕಲಕಿತು.

ಒಂದು ದಿನ ಮಧ್ಯಾಹ್ನ ಇಂದಿರೆಗೆ ತಲೆಶೂಲೆ ಬಂದಿತ್ತು. ಸುಶೀಲಾಬಾಯಿಯನ್ನು,

" ನನಗೆ ತಲೆಶೂಲೆ, ಮನೆಗೆ ಹೋಗಲೆ ? " ಎಂದು ಇಂದಿರೆ ಕೇಳಿದಳು.

ಅದಕ್ಕೆ ಉತ್ತರವಾಗಿ ಸುಶೀಲಾಬಾಯಿ ಅನುಕಂಪದಿಂದ ಅನುಮತಿ ಕೊಟ್ಟರು. ಗಂಟೆ ಮೂರಾಗಿತ್ತು. ಮಲ್ಲೇಶ್ವರದ ಬಸ್ ಹತ್ತಲು ಇಂದಿರೆ ಶಿಶುವಿಹಾರದ ಹೆಬ್ಬಾಗಿಲಿನಿಂದ ಹೊರಬಿದ್ದಳು. ರಾಜು ಅವಳನ್ನೇ ಕಾಣುವ ಉದ್ದೇಶದಿಂದ ಅದೇ ಕ್ಷಣ ಅವಳಿಗೆ ಎದುರಾಗಿ ಬಂದ. ಅವನನ್ನು ಕಂಡು ಇಂದಿರೆ ಚಿಗುರು ನಗೆಯನ್ನು ಬೀರಿದಳು. ರಾಜು,

" ಎಲ್ಲಿಗೆ ಹೊರಟಿದ್ದೀರಿ ? " ಎಂದು ಮಾತೆತ್ತಿದ.

" ಮನೆಗೆ."

" ಇಷ್ಟು ಬೇಗ ಮನೆಗೆ ! "

" ಹೋಗುತ್ತೇನೆ, ಬಸ್ಸಿನ ಸಮಯವಾಯಿತು."

" ಏಕೆ ಹೀಗೆ, ಮೈಯಲ್ಲಿ ಸ್ವಸ್ಥವಿಲ್ಲವೇ ? "

" ಸ್ವಲ್ಪ ತಲೆನೋವು."

" ನಿಮಗೆ ಕೆಲಸದ ಬೇಸರವಿರಬಹುದು."

" ಒಬ್ಬ ಉಪಾಧ್ಯಾಯಿನಿ ಶಾಲೆಯಿಂದ ನಿವೃತ್ತರಾಗಿದ್ದಾರೆ. ಅವರ ಕೆಲಸವನ್ನು ನಾವೇ ಹಂಚಿಕೊಳ್ಳಬೇಕಾಗಿದೆ. ಅದರಿಂದ ಕೆಲಸವೂ ಸ್ವಲ್ಪ ಹೆಚ್ಚೇ."

" ಈಗ ಒಂದು ಚಲನಚಿತ್ರವನ್ನಾದರೂ ನೋಡಬಹುದಲ್ಲಾ."

" ನನಗೆ ಈಗ ಏನೂ ಬೇಡವಾಗಿದೆ. ನನಗೆ ಬೇಕಾದದ್ದು ವಿಶ್ರಾಂತಿ."

"'ರೆಕ್ಸ್'ದಲ್ಲಿ ಈ ಹೊತ್ತು ಲಾರೆಲ್–ಹಾರ್ಡಿ ಚಿತ್ರವಿದೆ. ಸ್ವಲ್ಪ ಹೊತ್ತು ವಿನೋದವಾಗಿ ಕಳೆಯಬಹುದು. ಮನಸ್ಸು ಹಗುರಾಗುತ್ತೆ."

ಇಂದಿರೆಗೆ ಚಲನಚಿತ್ರವನ್ನು ನೋಡುವ ಉದ್ದೇಶವಿರಲಿಲ್ಲ. ಆದರೂ ರಾಜುವಿನ ಮಾತು ಅವಳ ಮನಸ್ಸನ್ನು ಅಲುಗಾಡಿಸಿತು. ಅನಿರ್ಧಾರದಲ್ಲಿ ತೂಗಾಡಿತು.

ರಾಜು ಮಾತನ್ನು ಮುಂದುವರಿಸಿದ :

" ಹೊರಡೋಣವೆ ? ರಸೆಲ್ ಮಾರ್ಕೆಟ್ ಬಸ್ ನಿಂತಿದೆ."

ಮಾತನ್ನಾಡುತ್ತಿರುವಂತೆಯೇ ರಾಜು ನಿಲ್ದಾಣದ ಕಡೆಗೆ ಹೆಜ್ಜೆ ಹಾಕಿದ.

" ನನ್ನ ಉತ್ತರವನ್ನೇ ನಿರೀಕ್ಷಿಸದೆ ನಡೆಯುತ್ತಿದ್ದೀರಲ್ಲಾ ? "

" ನಿಮ್ಮ ನಿರುತ್ತರವನ್ನೇ ನಾನು ಒಪ್ಪಿಗೆಯೆಂದು ಅರ್ಥಮಾಡಿ ಕೊಂಡಿದ್ದೇನೆ."

ಇಂದಿರೆಯ ಹಸನ್ಮುಖದಲ್ಲಿ ಒಪ್ಪಿಗೆ ವ್ಯಕ್ತವಾಯಿತು. ಇಬ್ಬರೂ ಬಸ್ ಹತ್ತಿದರು. ತನ್ನ ಸಲಹೆಗೆ ಇಂದಿರೆ ಒಪ್ಪುವಳೋ ಇಲ್ಲವೋ ಎಂಬ ಸಂದೇಹ ಇಬ್ಬರೂ ಬಸ್ ಹತ್ತುವವರೆಗೂ ಅವನನ್ನು ಕಾಡುತ್ತಿತ್ತು. ಬಸ್ ಮುಂದಕ್ಕೆ ಉರುಳಿತು.

'ಇನ್ನು ಇಂದಿರೆ ಬಸ್ಸಿನಿಂದ ಹಾರಿಹೋಗುವಂತಿಲ್ಲ' ಎಂದು ಅವನ ಮನಸ್ಸಿಗೆ ಸಮಾಧಾನವಾಯಿತು.

ಆ ದಿನ ಚಿತ್ರಮಂದಿರದಲ್ಲಿ ಹೆಚ್ಚು ಗದ್ದಲವಿರಲಿಲ್ಲ. ಮೇಲಿನ ಅಂತಸ್ತಿನಲ್ಲಿ ರಾಜು ಎರಡು ಸೀಟುಗಳನ್ನು ಚುನಾಯಿಸಿದ. ಅಲ್ಲಿ ಬಹಳ ಸೀಟುಗಳು ಬರಿದಾಗಿದ್ದವು. ರಾಜುವಿನ ಸಂತೋಷ ಹಾಲಿನಂತೆ ಉಕ್ಕಿತು.

ಇಬ್ಬರೂ ಎರಡು ಗಂಟೆ ಹಾಸ್ಯದ ಕಡಲಿನಲ್ಲಿ ತೇಲಾಡಿದರು. ಚಿತ್ರ ಮುಕ್ತಾಯವಾಯಿತು. ಇಂದಿರೆಯ ಮನಸ್ಸು ನಿಜವಾಗಿಯೂ ಹಗುರಾಗಿತ್ತು. ಇಬ್ಬರೂ ಚಿತ್ರಮಂದಿರದ ಹೆಬ್ಬಾಗಿಲಿನಿಂದ ಹೊರಬೀಳುತ್ತಿದ್ದರು. ಆ ಕ್ಷಣದಲ್ಲಿ ಆಕಸ್ಮಿಕವಾಗಿ ಸುಶೀಲಾಬಾಯಿ ಅದೇ ರಸ್ತೆಯಲ್ಲಿ ಚೌಕದ ಕಡೆಗೆ ಹೋಗು ತ್ತಿದ್ದರು. ಆಕೆಯ ನೋಟ ನೇರವಾಗಿ ಅವರಿಬ್ಬರ ಮೇಲೂ ಬಿದ್ದಿತು. ಆಕೆಯ ಮುಖದಲ್ಲಿ ಕೋಪದ ಕಿಡಿ ಮೂಡಿತು. ಬಸ್ಸಿಗಾಗಿ ಆಕೆ ಚೌಕದಲ್ಲಿ ಕಾದು ನಿಂತರು. ರಾಜು, ಇಂದಿರೆ ಪ್ರಪಂಚವನ್ನೇ ಮರೆತಿದ್ದರು. ಅವರು ಯಾರನ್ನೂ

ಗಮನಿಸದೆ ಮಹಾತ್ಮಾ ಗಾಂಧಿ ರಸ್ತೆಯ ಕಡೆಗೆ ಕಾಲುಹಾಕಿದರು.

ಸುಶೀಲಾಬಾಯಿಯ ಸಂಶಯ ಮತ್ತೂ ಹೆಚ್ಚಿತು. ಇಂದಿರೆ ಆ ಮಧ್ಯಾಹ್ನ ತಮ್ಮೊಡನೆ ತಲೆಶೂಲೆಯೆಂದು ಸುಳ್ಳು ಹೇಳಿ ಮಧ್ಯಾಹ್ನವನ್ನು ರಾಜುವಿನ ಸಂಗದಲ್ಲಿ ಕಳೆಯಲು ಹೊಂಚುಹಾಕಿದ್ದಳೆಂದು ಆಕೆ ಭಾವಿಸಿದರು. ಆ ಸಂಜೆ ಆಕೆ ಕಂಟೋನ್‌ಮೆಂಟಿಗೆ ಹೋಗಿದ್ದ ಕೆಲಸವೂ ಫಲಕಾರಿಯಾಗಿರಲಿಲ್ಲ. ಮನಸ್ಸು ಆ ಎಲ್ಲ ಕಾರಣಗಳಿಂದ ಬೇಸರಗೊಂಡಿತು.

೪೫

ಚಿತ್ರ ಮುಗಿಯುತ್ತಲೂ ರಾಜು ಮತ್ತು ಇಂದಿರೆ ಮಹಾತ್ಮಾ ಗಾಂಧಿ ರಸ್ತೆಯಲ್ಲಿ ಸ್ವಲ್ಪ ದೂರ ನಡೆದಿದ್ದರು. ಹೊರಗೆ ಮಳೆ ಸುರಿದು ರಸ್ತೆ ತೊಯ್ದು ಹೋಗಿತ್ತು. ಅವರಿಬ್ಬರ ಚಿತ್ತಗಳೂ ಹರ್ಷದಲ್ಲಿ ತೊಯ್ದುಹೋಗಿದ್ದವು.

" ತಲೆನೋವು ಹೇಗಿದೆ ? "

" ಕಡಿಮೆಯಾಗಿದೆ."

" ನನ್ನ ಕಾರ್ಯಕ್ರಮದಿಂದ ನಿಮ್ಮ ತಲೆನೋವು ಹೆಚ್ಚಲಿಲ್ಲವಲ್ಲಾ ! "

" ತಲೆನೋವು ಬಂದಾಗಲೆಲ್ಲ ನಿಮ್ಮನ್ನೇ ಮದ್ದು ಕೇಳಬೇಕು ! "

" ವಿಶ್ವಾಸವಿದ್ದರೆ ಮದ್ದಿನ ಪರಿಣಾಮ."

" ಮನೋವಿಜ್ಞಾನಿಯಂತೆ ಮಾತನಾಡುತ್ತೀರಲ್ಲಾ."

" ತಲೆನೋವಿಗೆ ನನ್ನ ಮದ್ದನ್ನು ಹೇಳಲೆ ? "

" ಮತ್ತೆ ಹೇಳಬೇಕೆ ? "

" ಏನು ಹೇಳಿ."

" ತಲೆನೋವಿಗೆ ನಿಮ್ಮ ಮದ್ದು ಮನೋರಂಜನೆಯೊಂದೇ ! "

" ಮನೆಯಲ್ಲವಲ್ಲಾ ! "

ಇಬ್ಬರೂ ಮೆಜೆಸ್ಟಿಕ್ ಬಸ್ ಹತ್ತಿದರು.

ರಾಜು ರಾತ್ರಿಯನ್ನು ಸ್ವಪ್ನಾವಸ್ಥೆಯಲ್ಲಿ ನೂಕಿದ. ರಾತ್ರಿಯ ಒಂದೊಂದು ಗಂಟೆಯೂ ನಿಧಾನವಾಗಿ ಬಡಿದುಹೋಗುತ್ತಿದ್ದುದು ರಾಜುವಿನ ಕಿವಿಯ ಮೇಲೆ ಬೀಳುತ್ತಿತ್ತು. ನಿದ್ರೆ ಹತ್ತದೆ ರಾತ್ರಿಗಳನ್ನು ಕಳೆಯುವುದು ಅವನಿಗೆ ಅಭ್ಯಾಸವಾಗಿದ್ದುದರಿಂದ ಗಂಟೆಗಳ ತಾಡನ ಅವನ ಮನಸ್ಸಿನಲ್ಲಿ

ಸಂಚರಿಸುತ್ತಿದ್ದ ಆಲೋಚನೆಗಳಿಗೆ ಭಂಗವನ್ನುಂಟುಮಾಡಲಿಲ್ಲ.

ರಾಜು ಮುಂಜಾನೆ ಎದ್ದು ಕಲಾಶಾಲೆಯಲ್ಲಿ ಕೆಲಸಕ್ಕೆ ತೊಡಗಿದ್ದ. ಅವನು ಅಷ್ಟು ಉತ್ಸಾಹದಿಂದ ನಸುಬೆಳಕಿಗೇ ಹಾಸಿಗೆ ಬಿಟ್ಟು ಕೆಲಸಕ್ಕೆ ಕೈಹಚ್ಚಿದುದು ಚಂದ್ರುವಿಗೆ ಆಚ್ಚರಿಯನ್ನುಂಟುಮಾಡಿತು. ಕಾಫಿಯನ್ನು ಸಿದ್ಧ ಪಡಿಸಿ ಅವನು ರಾಜುವಿನ ಮುಂದಿರಿಸಿದ. ಆ ಹೊತ್ತಿಗೆ ರಾಜು ಅನೇಕ ರೇಖೆ ಗಳನ್ನು ಚಿತ್ರಪತ್ರದ ಮೇಲೆ ಗುರುತುಮಾಡಿದ್ದ. ಅದೊಂದು ಅತಿ ಚೆಲುವೆಯ ಸ್ತ್ರೀರೂಪವೆಂದು ಚಂದ್ರುವಿಗೆ ಗೋಚರವಾಯಿತು. ರಾಜುವಿನ ಕಲ್ಪನೆ ಅವನ ಕೈಯಲ್ಲಿದ್ದ ಕುಂಚಕ್ಕಿಂತ ಹೆಚ್ಚು ಪ್ರಚಲಿತವಾಗಿತ್ತು. ಅವನ ಕಣ್ಣಿ ನಲ್ಲಿ ಭಾವಗಳ ಮಿಂಚು ಮಿನುಗುತ್ತಿತ್ತು. ಮೇಜಿನ ಮೇಲಿದ್ದ ಕಾಫಿ ಆರಿ ತಣ್ಣಗಾಗಿತ್ತು. ಮತ್ತೆ ಅದನ್ನು ಬಿಸಿಮಾಡಿ ತರಲು ಚಂದ್ರುವಿಗೆ ಹೇಳಿದ.

ಇಂದಿರೆ ಎಂದಿನಂತೆ ಶಿಶುವಿಹಾರದ ಪ್ರತಿದಿನದ ಕಾರ್ಯಕ್ರಮದಂತೆ ಅಂದೂ ತೊಡಗಿದಳು. ಸುಶೀಲಾಬಾಯಿಗೆ ಇಂದಿರೆಯೊಂದು ಸಮಸ್ಯೆಗಳ ಕಂತೆಯಾದಳು. ಆಕೆಯ ದೃಷ್ಟಿಗೆ ಅವಳು ಹಿಂದೆ ಎಷ್ಟು ಸರಳವಾಗಿದ್ದಳೋ ಈಗ ಅಷ್ಟೂ ಸಂಕೀರ್ಣವಾದಳು. ರಾಜು–ಇಂದಿರೆಯರ ಸ್ನೇಹದ ವಿಚಾರ ಅವರು ಮುಂದುಗಾಣದವರಾಗಿದ್ದರು. ಅವರು ಇಂದಿರೆಯನ್ನು ಸಂಧಿಸುತ್ತಲೆ,

" ಈಗ ನಿನ್ನ ಆರೋಗ್ಯ ಹೇಗಿದೆ ? " ಎಂದು ಕೇಳಿದರು.

ಆ ಪ್ರಶ್ನೆಯನ್ನು ಕೇಳುತ್ತಲೆ ಇಂದಿರೆಯ ಮುಖದಲ್ಲಿ ಕೆಂಪು ಮೂಡಿತು. ಹಿಂದಿನ ಮಧ್ಯಾಹ್ನ ತಲೆನೋವು ಎಂದು ಹೇಳಿ ರಾಜುವಿನ ಜೊತೆ ವಿನೋದ ಕ್ಕಾಗಿ ಚಿತ್ರಮಂದಿರಕ್ಕೆ ಹೋದುದು ನೆನಪಾಯಿತು. ಆದರೂ ಸಂಕೋಚದ ಭಾವನೆಯನ್ನು ಮುಚ್ಚಿಟ್ಟುಕೊಂಡು ಮಾತನಾಡಿದಳು.

" ಆರೋಗ್ಯಕ್ಕೇನು ? ನಿನ್ನೆ ದಿನ ಸ್ವಲ್ಪ ತಲೆನೋವಿತ್ತು, ಅಷ್ಟೆ."

ಸುಶೀಲಾಬಾಯಿಯ ನೋಟದಲ್ಲಿ ಒಪ್ಪಿಗೆ ಕಾಣಲಿಲ್ಲ. ಸುಮ್ಮನೆ ಹೊರಟುಹೋದರು. ಇಂದಿರೆಯ ಮನಸ್ಸು ಮತ್ತೆ ಹಿಂದಿನ ಮಧ್ಯಾಹ್ನದ ಪ್ರಸಂಗದ ಕಡೆಗೆ ಓಡಿತು. ಅವಳಿಗೆ ಸಮಾಧಾನವುಂಟಾಯಿತು.

' ಸುಶೀಲಾಬಾಯಿಗೆ ನಮ್ಮ ಚಲನಚಿತ್ರದ ಕಾರ್ಯಕ್ರಮ ತಿಳಿಯುವು ದಾದರೂ ಹೇಗೆ ? ' ಎಂಬ ಯೋಚನೆ ಪ್ರಬಲವಾಯಿತು.

ರಾಜು ದಿನವನ್ನೆಲ್ಲಾ ಕಲಾಮಂದಿರದಲ್ಲಿಯೇ ಕಳೆದ. ಸಂಜೆ ವಿಾಂ

ಮಬ್ಬು ಮೂಡುತ್ತಿದ್ದರೂ ಕುಂಚವನ್ನು ಕೆಳಗಿಡಲಿಲ್ಲ. ಚಿತ್ರವನ್ನು ಪೂರ್ಣವಾಗಿ ಎಳೆದು ಸಂಜೆಯ ನಸುಗತ್ತಲಿನಲ್ಲಿ ಕೊಟಡಿಯನ್ನು ಬಿಟ್ಟು ಹೊರಹೊರಟ. ಅವನು ರಾತ್ರೆ ಮತ್ತೆ ಯಾವಾಗ ಬಂದನೆಂಬುದೂ ಚಂದ್ರುವಿಗೆ ನೆನಪಿರಲಿಲ್ಲ. ನಸುಗತ್ತಲಲ್ಲಿ ಹಾಸಿಗೆಯಿಂದೆದ್ದು ಪಿನ್ನ್ಯಾದ್ದೀಪದಲ್ಲಿ ರಾಜು ಆ ಚಿತ್ರವನ್ನು ಮತ್ತೆ ತಿದ್ದುತ್ತಿದ್ದ. ನಿದ್ದೆ ಹರಿಯದೆ ಚಂದ್ರು ಇನ್ನೂ ಮಲಗಿದ್ದ. ಅವನನ್ನು ಎಚ್ಚರಿಸಿ ಕಾಫಿಯನ್ನು ಸಿದ್ಧಮಾಡಲು ಹೇಳಿದ. ಕಾಫಿಯನ್ನು ಕುಡಿದು ಮತ್ತೆ ಕೆಲಸದಲ್ಲಿ ತೊಡಗಿದ. ಮಧ್ಯಾಹ್ನ ಮೀರುವ ಹೊತ್ತಿಗೆ ಆ ವರ್ಣಚಿತ್ರ ಪೂರ್ಣಗೊಂಡಿತು. ರಾಜುವಿನ ಮನಸ್ಸು ಚಿತ್ರದಲ್ಲಿ ಲೀನವಾಯಿತು. ರೆಪ್ಪೆ ಬಡಿಯದೆ ಅದನ್ನು ನೋಡಿದ. ಅವನಿಗೆ ತೃಪ್ತಿಯಾಯಿತು. ಚಿತ್ರದಲ್ಲಿ ಮೂರ್ತಿಮತ್ತಾಗಿದ್ದ ಆ ಕಾಮಿನಿಯ ಹಾವಭಾವಗಳು ಅವನ ಮನಸ್ಸನ್ನೇ ತಿರುಗಿಸುವಂತಿದ್ದವು.

ಆ ಚಿತ್ರವನ್ನು ಸರೋಜಳಿಗೆ ವಿಕ್ರಯಮಾಡಲು ರಾಜು ಮೊದಲೇ ನಿರ್ಧರಿಸಿದ್ದ. ಕೂಡಲೇ ಅವನಿಗೆ ಹಣ ಬೇಕಾಗಿತ್ತು. ಚಲನಚಿತ್ರವನ್ನು ನೋಡುವುದಕ್ಕೂ ಅವನಲ್ಲಿ ಹಣವಿರಲಿಲ್ಲ. ಅವಳಲ್ಲಿ ತನ್ನ ಬಗೆಗಿದ್ದ ಔದಾರ್ಯವನ್ನು ಅವನು ತಿಳಿದಿದ್ದ. ಅವನಿಗೆ ಹಣ ಬೇಕಾದಾಗ ಸರೋಜಳೊಡನೆ ನಡೆಸಿದ ಯಾವ ವ್ಯವಹಾರವೂ ನಿಷ್ಫಲವಾಗಿರಲಿಲ್ಲ. ಸರೋಜಳನ್ನು ಒಲಿಸಿಕೊಂಡರೆ ತನ್ನ ಕಾರ್ಯಸಾಧನೆಯಾಗುವುದು ನಿಶ್ಚಯವೆಂದು ಅವನು ಅನುಭವದಿಂದ ನಂಬಿದ್ದ.

೪೬

ರಾಜು ಆನಂದನ ಮನೆಯ ಕಡೆಗೆ ಹೊರಟ. ಆಗ ಸಂಜೆ. ಕಾಲುದಾರಿಯಲ್ಲಿ ರಾಜು ನಡೆಯುತ್ತಿದ್ದ. ಅದೇ ಸಮಯದಲ್ಲಿ ಆನಂದ ಸೈಕಲ್ಲಿನ ಮೇಲೆ ಕೆಂಪೇಗೌಡ ರಸ್ತೆಯಲ್ಲಿ ಹೋಗುತ್ತಿದ್ದುದನ್ನು ರಾಜುವಿನ ಹದ್ದಿನ ಕಣ್ಣು ಕಂಡಿತು. ಆನಂದ ಮನೆಯಿಂದಲೇ ಹೊರಟಿರಬಹುದೆಂದು ಅವನು ಊಹಿಸಿದ. ಅದರಿಂದ ಅವನಿಗೆ ಸಂತೋಷವೇ ಆಯಿತು. ಸರೋಜಳ ಮನಸ್ಸನ್ನು ಗೆದ್ದು ಹಣವನ್ನು ತರುವುದು ಅವನಿಗೆ ಸುಲಭದ ಸಮಸ್ಯೆಯಾಗಿ ಕಂಡಿತು.

ರಾಜು ಆನಂದನ ಮನೆಯನ್ನು ತಲಪಿದಾಗ ಸರೋಜ ಹೂತೋಟದಲ್ಲಿ ಆಸನದ ಮೇಲೆ ಕುಳಿತಿದ್ದಳು. ಅವಳೊಬ್ಬ ವನದೇವತೆಯಂತೆ ಕಂಡಳು. ತೋಟದ ಕಿರುಬಾಗಿಲನ್ನು ತೆರೆದು ರಾಜು ಒಳಗೆ ಪ್ರವೇಶಿಸಿದ.

"ಒಳಗೆ ಬರಬಹುದೇ?" ಎಂದು ರಾಜು ಕೇಳಿದ.

"ಇಷ್ಟು ದೂರ ಒಳಗೆ ಬಂದಮೇಲೆ, ಒಳಗೆ ಬರಬಹುದೇ ಎಂದು ಕೇಳುತ್ತಿದ್ದೀರಿ" ಎಂದಳು ಸರೋಜ. ರಾಜುವಿನ ಪ್ರವೇಶದಿಂದ ಅವಳ ಮುಖ ನಲಿವಿನ ಬುಗ್ಗೆಯಾಯಿತು.

"ಆನಂದ ಮನೆಯಲ್ಲಿಲ್ಲವೆ?"—ಪ್ರಶ್ನೆ ಅವನ ಅಂತರಂಗಕ್ಕೆ ಕಪಟವಾಗಿತ್ತು.

"ಚಿಕ್ಕಪೇಟೆಗೆ ಹೋಗಿದ್ದಾರೆ."

"ನಾನು ಪುನಃ ಬರುತ್ತೇನೆ" ಎಂದು ಹೊರಡಲು ತನಗೆ ಇಷ್ಟವಿಲ್ಲದಿದ್ದರೂ ವ್ಯವಹಾರಕ್ಕೆ ಕಟ್ಟುಬಿದ್ದು ಹೇಳಿದ.

"ಕುಳಿತುಕೊಳ್ಳಿ, ಈಚೆಗೆ ನೀವು ಅಪರೂಪವಾದಿರಿ. ಬಂದ ಉದ್ದೇಶ ಕೇಳಬಹುದೆ?"

"ಮಂದಿರದಲ್ಲಿ ಕೆಲಸ ಹೆಚ್ಚು, ಹೊತ್ತು ಸಿಗಲಿಲ್ಲ...." ಎಂದು ತಾನು ಅಪರೂಪವಾಗಲು ಸುಳ್ಳು ಕಾರಣವನ್ನು ಹೇಳುತ್ತಿರುವಂತೆಯೇ ಸರೋಜ ಅವನ ಕೈಲಿದ್ದ ಹೊಸ ಚಿತ್ರವನ್ನು ನೋಡಿ ತಕ್ಷಣ ಕೇಳಿದಳು :

"ಹೊಸ ಚಿತ್ರವನ್ನು ಬರೆದಿರುವಂತಿದೆ?"

"ನೋಡಿ" ಎಂದು ಚಿತ್ರವನ್ನು ರಾಜು ಮೇಜಿನ ಮೇಲಿರಿಸಿದ.

ಸರೋಜ ಚಿತ್ರವನ್ನು ನೋಡಿ ಯಾವ ವಿಮರ್ಶೆಯನ್ನೂ ಮಾಡಲಿಲ್ಲ. ಅದನ್ನು ಮತ್ತೆ ಮೇಜಿನ ಮೇಲಿಟ್ಟಳು. ಚಿತ್ರ ಅವಳ ಮನಸ್ಸನ್ನು ಆಕರ್ಷಿಸಲಿಲ್ಲವೇನೋ ಎಂಬ ಸಂದೇಹವಾಯಿತು ರಾಜುವಿಗೆ.

"ಹೇಗಿದೆ ಚಿತ್ರ?" ಎಂದ.

ಆ ಪ್ರಶ್ನೆಗೆ ಸರೋಜ ತಕ್ಷಣ ಉತ್ತರವನ್ನು ಕೊಡಲಾರದವಳಾದಳು. ರಾಜುವಿಗೆ ಉತ್ಸಾಹಭಂಗವನ್ನುಂಟುಮಾಡಲು ಇಷ್ಟಪಡದೆ,

"ಚೆನ್ನಾಗಿದೆ" ಎಂದಳು.

"ನಾನು ಈ ಚಿತ್ರವನ್ನು ಈಗ ಮಾರಬೇಕಾಗಿದೆ."

ಸರೋಜ ಸಮ್ಮತಿಯ ನೋಟವನ್ನು ಬೀರಿ ಸುಮ್ಮನಾದಳು. ರಾಜು ತನ್ನ ಉದ್ದೇಶವನ್ನು ಮತ್ತಷ್ಟು ಹೊರಗೆಡಹಿದ.

"ಈ ಚಿತ್ರಕ್ಕೆ ಎಂದಾದರೂ ಬೆಲೆ ಇದ್ದೇ ಇದೆ. ಆದರೆ ಸಧ್ಯ ನನಗೆ ಹಣ ಬೇಕಾಗಿದೆ."

ಸರೋಜ ರಾಜುವಿನ ಮನಸ್ಸನ್ನು ತಿಳಿದಳು. ಅವನ ಇಕ್ಕಟ್ಟು ಅರ್ಥವಾಯಿತು. ಮರುಕವೂ ಮೂಡಿತು ಆದರೆ ಕಾಮುಭಾವಗಳನ್ನು ಮಾತ್ರ ಪ್ರಚೋದಿಸುತ್ತಿದ್ದ ಆ ಚಿತ್ರವನ್ನು ಕೊಳ್ಳಲು ಅವಳು ಇಷ್ಟಪಡಲಿಲ್ಲ. ಅಲ್ಲದೆ ಆನಂದ ಆ ಚಿತ್ರವನ್ನು ಖಂಡಿತ ಒಪ್ಪುವುದಿಲ್ಲವೆಂದು ತಿಳಿದಿದ್ದಳು. ಕ್ಷಣದಲ್ಲಿ ಬೇರೆ ವಿಚಾರ ಮಥನವಾಯಿತು. ರಾಜು ಹಣಕಾಸಿನ ಕಷ್ಟದಲ್ಲಿ ಸಿಕ್ಕಿರಬಹುದು. ಆಸೆಯನ್ನು ಕಟ್ಟಿಕೊಂಡು ತನ್ನ ಬಳಿಗೆ ಬಂದಿದ್ದಾನೆ ಚಿತ್ರವನ್ನು ಕೊಳ್ಳುವಂತೆ ಕೇಳಿಕೊಳ್ಳುತ್ತಿದ್ದಾನೆ. ಸಮಯದಲ್ಲಿ ಅವನಿಗೆ ಸಹಾಯವನ್ನು ಮಾಡಿದಂತಾಗುತ್ತದೆ. ಈ ಯೋಚನೆಗಳಲ್ಲಿ ಸರೋಜ ಚಿತ್ರವನ್ನು ಕೊಳ್ಳಲು ನಿರ್ಧರಿಸಿದಳು. ಅವಳ ಅರಿವು ಇಲ್ಲದೆ ರಾಜುವಿನ ಪರವಾಗಿ ಅವಳ ವಿಚಾರ ಚಕ್ರ ಸುತ್ತಿತು. ಆಗ ರಾಜು ಕೇಳಿದ :

"ನೀವು ಇದನ್ನು ಕೊಂಡರೆ ನನಗೆ ಈಗ ಸಹಾಯವಾಗುತ್ತದೆ. ನನಗೆ ಹಣ ಬೇಕಾಗಿದೆ."

"ಬೆಲೆ ?"

"ಅದರ ಬೆಲೆ ನೂರು ರೂಪಾಯಿಗಳು. ನೀವು ಅರ್ಧ ಬೆಲೆಯನ್ನು ಕೊಟ್ಟರೂ ಸಾಕು."

ಸರೋಜ ಕೊಟಡಿಗೆ ಹೋಗಿ ಐವತ್ತು ರೂಪಾಯಿಗಳನ್ನು ತಂದು ರಾಜುವಿಗೆ ಕೊಟ್ಟಳು.

ಹಣ ಕೈಸೇರುತ್ತಲೂ ರಾಜು ಹೊರಡಲು ಸಮಯ ಕಾಯತೊಡಗಿದ. ಆನಂದ ಹಿಂತಿರುಗುವುದಕ್ಕೆ ಮುಂಚೆಯೇ ತಾನು ಹೊರಟುಹೋಗಲು ಯೋಚನೆ ಮಾಡಿದ.

"ನಾನು ನಿಮಗೆ ಯಾವಾಗಲೂ ಕೃತಜ್ಞ."

ಆ ಮಾತು ಸರೋಜಳಲ್ಲಿ ಭಾವನೆಗಳನ್ನೆಬ್ಬಿಸಿತು.

"ನಿಮಗೆ ನಾನೇನು ಸಹಾಯ ಮಾಡಿದೆ ?"

" ಆ ಸಹಾಯವನ್ನು ನಾನು ಮರೆಯುವಂತಿಲ್ಲ."

" ಅದು ನಿಮ್ಮ ಭಾವನೆ."

" ನಾನು ಹೊರಡಲೆ ? "

" ಆಗಲಿ " ಎಂದರೂ ' ಇನ್ನೂ ಸ್ವಲ್ಪ ಹೊತ್ತು ಇರಿ ' ಎನ್ನುವಂತಿತ್ತು ಸರೋಜಳ ನೋಟ.

" ಪುನಃ ಯಾವಾಗ ಬರುತ್ತೀರಿ ? "

" ಬರಬೇಕಾಗಿದೆ, ಖಂಡಿತವಾಗಿ ಬರುತ್ತೇನೆ."

ರಾಜು ಹೊರಟುಹೋಗಿ ಒಂದು ಗಂಟೆಯಾಗಿತ್ತು. ಸರೋಜಳ ಮನಸ್ಸು ಅವನಿಂದ ಇನ್ನೂ ವಿಮುಖವಾಗಿರಲಿಲ್ಲ. ಆನಂದ ಹೊರಗಡೆ ಸೈಕಲ್ ಗಂಟೆಯ ಶಬ್ದಮಾಡಿದ. ಮುಗಿಲಿನ ಎತ್ತರದಲ್ಲಿ ಹಾರಾಡುತ್ತಿದ್ದ ಅವಳ ಮನಸ್ಸು ನೆಲಕ್ಕಿಳಿದಂತಾಯಿತು.

ಸರೋಜ ಕಾಫಿಯನ್ನು ತಂದು ಆನಂದನ ಮುಂದಿರಿಸಿದಳು. ಅವಳ ಮುಖದ ಮೇಲೆ ಏನೋ ಸಂಶಯದ ತೆರೆ ಅಲುಗಾಡುತ್ತಿತ್ತು. ಆನಂದನಿಗೆ ಅದು ಅಸ್ಪಷ್ಟವಾಗಿ ತೋರಿತು. ಯಾವುದೋ ವಿಚಾರವನ್ನು ಮಾತನಾಡಲು ಅವಳು ಸಮಯ ಕಾಯುತ್ತಿರಬಹುದೆಂದು ಅವನು ಊಹಿಸಿದ.

" ರಾಜು ಬಂದಿದ್ದರು " ಎಂದು ಮಾತನ್ನು ಆರಂಭಿಸಿದಳು.

" ಏನು ವಿಷಯ ? "

ಆನಂದನ ದನಿಯಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ಕೆಲವು ಕ್ಷಣಗಳ ಹಿಂದೆ ಸರೋಜಳ ಮುಖದ ಮೇಲೆ ಮೆರುಗುತ್ತಿದ್ದ ನಲಿವು ನಂದಿಹೋಯಿತು.

" ಒಂದು ಚಿತ್ರವನ್ನು ಮಾರಾಟಕ್ಕೆ ತಂದಿದ್ದರು."

ಹಿಂದೆ ಒಂದು ಬಾರಿ ತನಗೆ ಬೇಡವಾದ ಚಿತ್ರವನ್ನು ರಾಜು ಬಲಾತ್ಕಾರದಿಂದ ಅವನಿಗೆ ಕಟ್ಟಿಹೋಗಿದ್ದ ಪ್ರಸಂಗ ನೆನಪಾಯಿತು. ಅಂದೂ ಸರೋಜಳ ಮಾತಿಗೆ ಅವನು ಮಣಿಯಬೇಕಾಗಿ ಬಂದಿದ್ದಿತು.

" ಸರಿ. ಮಾರಾಟವಾಗದ ಅವನ ಚಿತ್ರಗಳಿಗೆಲ್ಲ ನಮ್ಮ ಮನೆಯೇ ಮಾರ್ಕೆಟ್ಟು " ಎಂದು ಬೇಸರದಿಂದ ನುಡಿದ.

ತಕ್ಷಣ ಆಡಿದ ಆ ಮಾತು ಸರೋಜಳ ಮನಸ್ಸನ್ನು ಚುಚ್ಚಿತು.

" ಚಿತ್ರವನ್ನು ನಾನು ಕೊಂಡಿದ್ದೇನೆ. ಅದರ ಬೆಲೆಯನ್ನೂ ಕೊಟ್ಟಿದೆ."

ಅವಳ ಮಾತಿನಲ್ಲಿ ದೃಢತೆಯಿತ್ತು. ಚಿತ್ರವನ್ನು ಆನಂದನ ಮುಂದೆ ಇರಿಸಿದಳು. ಅವನು ಚಿತ್ರವನ್ನು ನೋಡಿದ. ಮುಖ ವಿವರ್ಣವಾಯಿತು. ಸರೋಜಳಿಗೆ ಅವನ ಭಾವನೆ ಅರ್ಥವಾಗಲಿಲ್ಲ. ಅವನ ಮುಖದಿಂದ ಹಾರಿದ ಕಿಡಿನೋಟ ಸರೋಜಳ ಮುಖವನ್ನು ತಿವಿಯಿತು.

ಚಿತ್ರವನ್ನು ನೋಡುತ್ತಿರುವಂತೆಯೇ ಆನಂದನ ಸ್ಮರಣೆಗಳೆಲ್ಲ ಜೀವಂತ ವಾದ ಒಬ್ಬ ವ್ಯಕ್ತಿಯನ್ನು ಆವರಿಸಿದವು. ಆ ವ್ಯಕ್ತಿಯ ಜೀವನದ ಆಗು ಹೋಗುಗಳನ್ನು ಆನಂದನ ಬದುಕು ಒಂದು ಗತ್ಯಂತರವಿಲ್ಲದ ಪ್ರವಾಹದಲ್ಲಿ ತೇಲಿಬಿಟ್ಟಿದ್ದಿತು. ಒಂದು ಕಾಲವಲ್ಲಿ ಅವನ ಪ್ರೇಮದ ಕೂಗಿಗೆ ಆ ವ್ಯಕ್ತಿಯ ಹೃದಯದಲ್ಲಿ ಮರುಮಿಡಿತ ಹುಟ್ಟಿತು. ಆ ಮಿಡಿತ ಅಲ್ಲಿಯೂ ಪ್ರೇಮದ ಕೂಗನ್ನೆಬ್ಬಿಸಿತು. ಆ ಎರಡು ಕೂಗುಗಳೂ ಬೆರೆತು ಒಂದು ಜೋಡಿ ಜೀವನದ ಮಧುರ ಗಾನವಾಗುವುದೆಂದು ಎರಡು ಅಂತರಂಗಗಳಲ್ಲಿಯೂ ಆಶಾಂಕುರ ಹುಟ್ಟಿತು. ಆದರೆ ಹತೋಟಿಮೀರಿದ ಕೈಯೊಂದು ಎರಡು ಹೃದಯಗಳನ್ನೂ ದೂರಮಾಡಿ ಜೀವನದ ಗಾನವನ್ನು ವಿರಾಗಮಾಡಿತು. ಹಾಗೆ ನಿರಾಶೆಗೊಂಡ ಮತ್ತೊಬ್ಬ ವ್ಯಕ್ತಿಯೇ ರೂಪತಾಳಿ ಅವನೆದುರು ನಿಂತಿರುವಂತೆ ಆನಂದನಿಗೆ ಭಾಸವಾಯಿತು. ಇಂದಿರೆಯ ರೂಪರೇಖೆಗಳು ಆ ಚಿತ್ರದಲ್ಲಿ ಪಡಿಯಚ್ಚಾ ಗಿದ್ದವು.

ಆನಂದ ಇಂದಿರೆಗಾಗಿ ಕಸವಿಸಿಪಟ್ಟುಕೊಂಡ. ಅವನ ದೃಷ್ಟಿಯಲ್ಲಿ ಅವಳೊಬ್ಬ ಆದರ್ಶ ನಾರಿಯಾಗಿದ್ದಳು. ಆ ದಿನಗಳಲ್ಲಿ ಅವನು ಆದರ್ಶದ ಉಪ್ಪರಿಗೆಗಳನ್ನು ಕಟ್ಟಿಕೊಂಡಿದ್ದ. ಈಗ ಅವೆಲ್ಲ ಕಡಿದುಹೋಗಿವೆ. ಇಂದಿರೆ ತನ್ನ ಕಲ್ಪನಾಮಂದಿರದಲ್ಲಿ ಆಗಾಗ ವಿಹಾರಮಾಡುವ ಕನಸಿನ ಮೂರ್ತಿಯಾಗಿ ಉಳಿದಿದ್ದಾಳೆ. ಆದರೂ ಅವಳ ವಿಷಯವಾಗಿ ಆನಂದ ಕಟ್ಟಿಕೊಂಡಿದ್ದ ಉತ್ತಮ ಭಾವನೆಗಳು ಅಚ್ಚಳಿಯದೆ ಇವೆ.

ಇತ್ತೀಚೆ ರಾಜುವಿನ ಆಸಕ್ತಿ ಇಂದಿರೆಯ ಕಡೆಗೆ ಹರಿದಿದ್ದುದು ಆನಂದನಿಗೆ ಅರಿವಾಗಿತ್ತು. ಅವನ ಕುಂಚ ಅವಳ ರೂಪವನ್ನು ಅಶ್ಲೀಲವೆನ್ನಬಹುದಾದ ರೇಖೆಗಳಲ್ಲಿ ಗ್ರಹಿಸಲು ಪ್ರಯತ್ನಿಸಿದ್ದುದನ್ನು ಆನಂದ ತಿಳಿದ. ಸೌಂದರ್ಯವನ್ನು ಕಾಮೋದ್ರೇಕಕ್ಕಾಗಿ ಉಪಯೋಗಿಸುವುದು ರಾಜುವಿನ ಕಲೆಗೆ ಹೊಸದಾಗಿರ ಲಿಲ್ಲ. ಆ ಚಿತ್ರವೊಂದು ಪಾಶ್ಚಿಮಾತ್ಯ ಅಶ್ಲೀಲ ಚಿತ್ರಕಲೆಯ ಅನುಕರಣ

ವಾಗಿತ್ತು, ಆನಂದನ ಅಭಿಪ್ರಾಯದಲ್ಲಿ.

'ರಾಜು ಇಂದಿರೆಯಲ್ಲಿ ಕಂಡದ್ದು ಅಷ್ಟೇ' ಎಂದೆನಿಸಿತು ಅವನಿಗೆ.

ಮರುಕ್ಷಣದಲ್ಲಿ ಇಂದಿರೆಗಾಗಿ ಅವನು ಮರುಕಪಟ್ಟ.

'ಇಂದಿರೆಯ ಗತಿ ಈ ಮಟ್ಟಕ್ಕೆ ಇಳಿಯಬಾರದಾಗಿತ್ತು' ಎಂದು ನೊಂದುಕೊಂಡ.

ಕೆಲನಿಮಿಷಗಳು ಕಳೆದುಹೋದರೂ ಆನಂದ ಏನನ್ನೂ ಹೇಳದಿದ್ದುದರಿಂದ ಸರೋಜಳ ಮನಸ್ಸು ಗಾಸಿಗೊಂಡಿತು. ಅನಂತರ ಅವನಾಡಿದ ಮಾತು ಅವಳನ್ನು ಕೆರಳಿಸಿತು.

"ನನಗೆ ಈ ಚಿತ್ರ ಬೇಡವಾಗಿದೆ."

"ನಾನು ಅವನ್ನು ಮೆಚ್ಚಿ ಕೊಂಡುಕೊಳ್ಳಲಿಲ್ಲ."

"ಮೆಚ್ಚದಿದ್ದರೆ ಕೊಂಡದ್ದಾದರೂ ಏಕೆ?"

"ನನಗೆ ಕೊಳ್ಳಬೇಕು ಎನಿಸಿತು."

"ಮೆಚ್ಚಿಗೆ ಇಲ್ಲದಿದ್ದರೂ ಕೊಳ್ಳಬೇಕು ಎನಿಸಿತೆ?"

ಆ ಪ್ರಶ್ನೆಯನ್ನು ಉತ್ತರಿಸುವುದು ಸರೋಜಳಿಗೆ ಕಠಿಣವಾಗಿ ತೋರಿತು.

"ರಾಜು ಹಣಕಾಸಿನ ಕಷ್ಟ ಹೇಳಿಕೊಂಡರು. ಏನೋ ಸಮಯವಂತೆ. ಅದರಿಂದ ಕೊಂಡೆ."

"ಪ್ರಪಂಚದ ಕಷ್ಟಗಳನ್ನೆಲ್ಲ ಬಗೆಹರಿಸುವುದಕ್ಕೆ ಪ್ರಯತ್ನಮಾಡುವುದು ಅವಿವೇಕ."

"ಈ ಚಿಕ್ಕ ವಿಷಯಕ್ಕಾಗಿ ಅಷ್ಟೊಂದು ದೊಡ್ಡ ಮಾತೇಕೆ?"

"ಆ ಚಿತ್ರ ನನಗೆ ಒಪ್ಪಿಗೆಯಾಗಿಲ್ಲ. ಅದಕ್ಕಾಗಿ ಹಣ ಚೆಲ್ಲುವುದು ನನಗೆ ಬೇಡವಾಗಿತ್ತು. ಚಿತ್ರದ ಬೆಲೆ ಎಷ್ಟು?"

"ಐವತ್ತು ರೂಪಾಯಿ."

"ಐವತ್ತು ರೂಪಾಯಿಗೆ ಬೆಲೆಯಿಲ್ಲವೆ?"

"ನನಗೆ ಬೇಕೆನಿಸಿದ್ದಕ್ಕಾಗಿ ಅಷ್ಟು ಹಣವನ್ನು ಖರ್ಚುಮಾಡುವ ಸ್ವಾತಂತ್ರ್ಯ ನನಗಿಲ್ಲವೆ?"

ಆನಂದ ಅಷ್ಟು ನೇರವಾದ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲ.

"ನನಗೆ ಬೇಡವಾದ್ದನ್ನು ಮಾಡುವ ಸ್ವಾತಂತ್ರ್ಯವನ್ನು ನೀನು ಕೇಳು

ತ್ತಿದ್ದೀ." ಉತ್ತರ ತಕ್ಷಣ ಜಾರಿಹೋಯಿತು.

"ಒಬ್ಬರಿಗೆ ಬೇಕಾದ್ದು ಮತ್ತೊಬ್ಬರಿಗೆ ಬೇಡವಾಗಬಹುದು. ಅದರಿಂದ ನಮ್ಮ ಅಲ್ಪ ಸಂತೋಷಕ್ಕೂ ಅಡ್ಡಿಯಾಗುವುದು."

"ಮುಖ್ಯವಾಗಿ ಮನಸ್ಸುಗಳ ಹೊಂದಾಣಿಕೆ ಇರಬೇಕು. ಅದಿಲ್ಲದಿದ್ದರೆ ಯಾವಾಗಲೂ ಅಸಂತೋಷವೇ."

"ನನ್ನ ಕಾರ್ಯ ನಿಮಗೆ ಅಷ್ಟೊಂದು ಅಸಂತೋಷವಾದರೆ ಅದರಿಂದ ನಷ್ಟವಾದ ಐವತ್ತು ರೂಪಾಯಿಗಳನ್ನು ನಾನು ಅಪ್ಪನಿಂದ ಕೊಡಿಸುತ್ತೇನೆ?"

ಸರೋಜಳ ತುಟಿ ಆವೇಗದಿಂದ ಅಲುಗುತ್ತಿತ್ತು.

ಆನಂದನಿಗೆ ಮುಂದೆ ಮಾತು ತೋರದಾಯಿತು. ರೋಷ ಕೆರಳಿದ್ದರೂ ಮೌನವಾಗಿ ಕುಳಿತ. ತಾನು ಹತೋಟಿ ಮೀರಿದರೆ ಪರಿಸ್ಥಿತಿ ವಿಕೋಪಕ್ಕಿಟ್ಟು ಕೊಳ್ಳುವುದೆಂದು ಅರಿತ. ಕೆಲ ನಿಮಿಷಗಳನಂತರ ದನಿಯನ್ನಿಳಿಸಿ ಮಾತ ನಾಡಿದ.

"ನನ್ನ ಮನಸ್ಸು ನಿನಗೆ ಅರ್ಥವಾಗಲಿಲ್ಲ, ಸರೋಜ."

"ನನಗೆ ಅರ್ಥವಾಗಲಿಲ್ಲ!"—ಸರೋಜ ನಿಧಾನವಾಗಿ ಹೇಳಿದಳು.

'ನಿಮ್ಮ ಮನಸ್ಸು ನನಗೆ ಎಂದಿಗೂ ಅರ್ಥವಾಗುವಂತೆಯೇ ಇಲ್ಲ' ಎಂಬ ಧ್ವನಿ ಆ ಮಾತಿನಲ್ಲಿತ್ತು.

## ೪೭

ರಾಜುವಿನ ಬಹಳ ದಿನಗಳ ಒಂದು ಹಂಬಲ ಕಾರ್ಯರೂಪಕ್ಕೆ ತಿರುಗುವ ದಿವಸ ನಿಶ್ಚಯವಾಯಿತು. ಅವನು ಅಜಂತದ ಕಲಾಕೃತಿಗಳನ್ನು ಅದ್ಭುತ ವಾದ ಪ್ರತಿಭೆಯಿಂದ ಚಿತ್ರಿಸಿದ್ದ. ಆ ಚಿತ್ರಗಳು ಅವನಿಗೆ ಅಮರಕೀರ್ತಿಯನ್ನು ತರುವಂತಿದ್ದವು. ತನ್ನ ಭವಿಷ್ಯವನ್ನು ನಿರಾಶೆ ಮುಸುಕುತ್ತಿದ್ದ ಗಳಿಗೆಗಳಲ್ಲಿ ರಾಜು ಒಬ್ಬಂಟಿಗನಾಗಿ ಆ ಚಿತ್ರಸಮೂಹದ ಮಧ್ಯೆ ಕುಳಿತು ಮೈಮರೆಯು ತ್ತಿದ್ದ. ಆಗ ಅನೇಕ ಭಾವನೆಗಳು ಉದಯವಾಗಿ ಅವನ ಮನಸ್ಸು ಚಿಟ್ಟೆಯಂತೆ ದಿಕ್ಕಿನ ಕಟ್ಟೆಯನ್ನು ಮೀರಿ ವಿಹರಿಸುತ್ತಿತ್ತು. ಆ ಸಮಯದಲ್ಲಿ ಅವನಿಗೆ ಅನಿಸುತ್ತಿತ್ತು: 'ನನ್ನ ಆಯುಷ್ಯ ವ್ಯರ್ಥವಾಗಿಲ್ಲ' ಎಂದು.

ಅಜಂತದಲ್ಲಿ ತಾನು ಸಂದರ್ಶಿಸಿದ ಸುಂದರವಾದ ಶಿಲ್ಪಕಲೆಯನ್ನು ತನ್ನ

ಜೀವಿತದಲ್ಲಿ ಚಿತ್ರಗ್ರಹಣ ಮಾಡಬೇಕೆಂಬುದು ಅವನ ಆಕಾಂಕ್ಷೆಗಳಲ್ಲಿ ಒಂದಾಗಿತ್ತು. ತನ್ನ ಜೀವನದ ವಿವಿಧ ಪ್ರಕರಣಗಳಲ್ಲಿ, ಪರಿಸ್ಥಿತಿಗಳ ವಿಷಮ ಪ್ರವಾಹದಲ್ಲಿ, ಏಳುಬೀಳುಗಳಲ್ಲಿ ರಾಜುವಿನದೊಂದು ಆಕಾಂಕ್ಷೆ ಸಚೇತನ ವಾಗಿ ಉಳಿದಿತ್ತು. ಅವನ ಸಾಧನೆ ಆ ಮುಖವಾಗಿ ಬಹಳ ದೂರ ಹರಿದಿತ್ತು. ಅವನು ರಚಿಸಿದ್ದ ಅಜಂತ ಚಿತ್ರಗಳು ಒಬ್ಬ ಉತ್ತಮ ಕಲೋಪಾಸಕನ ಆಜನ್ಮ ಸಾಧನೆಯ ಅಮೂಲ್ಯ ಫಲಗಳಾಗಿದ್ದವು.

ಒಂದು ವಿಶೇಷ ಉತ್ಸವವನ್ನು ಏರ್ಪಡಿಸಿ, ಆ ಸಮಯದಲ್ಲಿ ಅಜಂತ ಚಿತ್ರಗಳನ್ನು ಪ್ರದರ್ಶಿಸಬೇಕೆಂದು ರಾಜುವಿನ ಹಿರಿಯಾಸೆಯಾಗಿತ್ತು. ಆ ಚಿತ್ರ ಸಮೂಹವೇ ತಾನು ಕಲಾಪ್ರಪಂಚಕ್ಕೆ ನೀಡುವ ಒಂದು ಪವಿತ್ರ ಕಾಣಿಕೆ ಎಂದು ಅವನು ಭಾವಿಸಿದ್ದ. ಆ ದಿನವನ್ನು ಅವನು ಎದುರುನೋಡುತ್ತಿದ್ದ. ಆ ಆಸೆಯೊಂದು ನಡೆದುಹೋದರೆ ಆಯುಷ್ಯದಲ್ಲಿ ತನಗೆ ಇನ್ನು ಯಾವ ಉದ್ದೇಶವೂ ಉಳಿದಿರುವುದಿಲ್ಲವೆಂದು ಅವನು ನಂಬಿದ್ದ.

ಕೆಲವು ಮಂದಿ ಸಿರಿವಂತರ ಬೆಂಬಲದಿಂದ ರಾಜು ಅಜಂತ ದಿನೋತ್ಸವ ವನ್ನು ನಿಶ್ಚಯ ಮಾಡಿದ. ಉತ್ಸವ ಮೂರು ದಿನ ಉಳಿದಿದ್ದಿತು. ಭಾರತದ ಪ್ರಾಚೀನ ಶಿಲ್ಪಕಲೆ, ಚಿತ್ರಕಲೆಗಳಲ್ಲಿ ವಿಶ್ವಾಸವುಳ್ಳ ಅನೇಕ ಮಂದಿ ತಮ್ಮ ಪ್ರೋತ್ಸಾಹವನ್ನು ತೋರ್ಪಡಿಸಿದರು.

ಉತ್ಸವದ ಆಹ್ವಾನಪತ್ರಗಳನ್ನು ತಲಪಿಸುವ ಕಾರ್ಯ ಚಂದ್ರುವಿನದು. ಪಟ್ಟಣದ ಗಣ್ಯವ್ಯಕ್ತಿಗಳಿಗೆಲ್ಲ ಆಹ್ವಾನ ತಲಪಿದ್ದಿತು. ಚಂದ್ರುವಿನ ಮನಸ್ಸಿನ ಒಂದು ಯೋಚನೆ ಮಾತ್ರ ಬಗೆಹರಿಯುವಂತಿರಲಿಲ್ಲ. ಸ್ನೇಹಿತರ ಸಮೂಹದಲ್ಲಿ ರಾಜು ಹರ್ಷಚಿತ್ತನಾಗಿ ಕಂಡರೂ ಏಕಾಂತದಲ್ಲಿ ಅವನ ಮುಖ ಪೆಚ್ಚಾಗಿರು ತ್ತಿತ್ತು. ಅದಕ್ಕೆ ಕಾರಣ ಅವನ ಹಣಕಾಸಿನ ದುರ್ದೆಶೆಯೆಂಬುದನ್ನು ಚಂದ್ರು ನಿಸ್ಸಂದೇಹವಾಗಿ ತಿಳಿದಿದ್ದ. ಒಂದೊಂದು ವೇಳೆ ರಾಜು ನಿದ್ದೆಯಲ್ಲಿ ಮೈಮರೆ ತಾಗ ಅವನ ಮನಸ್ಸಿನ ಯೋಚನೆಗಳು ಎಚ್ಚರ ಜಾರಿ ತೊದಲಿನಲ್ಲಿ ಹೊರ ಬೀಳುತ್ತಿದ್ದವು. ಆ ತೊದಲಿನಲ್ಲಿ ದಾರಿಗಾಣದ ಮನಸ್ಸು ತೊಳಲುತ್ತಿತ್ತು. ಎಚ್ಚರದಲ್ಲಿ ಚಂದ್ರು ಅದನ್ನು ಕೇಳಿದಾಗ ಅವನ ಧೈರ್ಯವೂ ಕುಸಿದು ಹೋಗುತ್ತಿತ್ತು. ತೈಲವೆಲ್ಲ ಮುಗಿದುಹೋಗಿ ಕಡೆಯ ಮಿನುಗಿನಿಂದ ಉಜ್ವಲಿಸಿ ಕಮರಿಹೋಗುವ ಸೊಡರಿನ ಗತಿಯಂತಿತ್ತು, ರಾಜುವಿನ ಗತಿ. ಅವನು

ಉದ್ದವಾದ ಬಿಸಿಯುಸಿರನ್ನು ಬಿಡುತ್ತಿದ್ದ. ಆ ಉಸಿರಿನಲ್ಲಿ ಯಾವುದೋ ನಿರ್ಧಾರವಿತ್ತು. ಆ ನಿರ್ಧಾರ ನಿರಾಶೆಯಲ್ಲಿ ನೆಟ್ಟಿತ್ತು.

೪೮

ಮಲ್ಲಿಗೆಹಳ್ಳಿ ದೇವನಹಳ್ಳಿಯಿಂದ ನಾಲ್ಕು ಮೈಲಿ ದೂರ. ಪ್ರತಿ ವರ್ಷ ಅಲ್ಲಿ ಗೋಪಾಲಕೃಷ್ಣನ ಉತ್ಸವ ವಿಜೃಂಭಣೆಯಿಂದ ನಡೆಯುತ್ತಿತ್ತು. ಮೂರು ದಿನಗಳ ಆ ಜಾತ್ರೆಯ ಕಾಲದಲ್ಲಿ ದೇವನಹಳ್ಳಿಯ ಎಲ್ಲ ಜನರೂ ಅಲ್ಲಿ ನೆರೆಯುತ್ತಿದ್ದರು. ಎತ್ತುಗಳ ಜಾತ್ರೆಯೂ ಆಗ ನಡೆಯುತ್ತಿತ್ತು.

ಹಳ್ಳಿಯ ಮೂಲೆಯಲ್ಲಿ ಗೋಪಾಲಕೃಷ್ಣನ ಸುಂದರಮೂರ್ತಿಯ ಒಂದು ದೇವಾಲಯವಿದೆ. ಉತ್ಸವಮೂರ್ತಿಯನ್ನು ಅಮೃತಶಿಲೆಯಿಂದ ಕಡೆದಿದೆ. ವರ್ಷವೆಲ್ಲ ನಿರ್ಜನವಾಗಿರುತ್ತಿದ್ದ ಆ ಆವರಣ ಜಾತ್ರೆಯ ಸಮಯದಲ್ಲಿ ಜನರಿಂದ ಕಿಕ್ಕಿರಿಯುತ್ತಿತ್ತು. ಕೃಷ್ಣನ ಮನಮೋಹಕ ಮೂರ್ತಿಯಿಂದ ಒಪ್ಪುತ್ತಿದ್ದ ರಥ ಅಮರಲೋಕದಿಂದ ಇಳಿದುಬಂದಂತೆ ಕಾಣುತ್ತಿತ್ತು.

ಮಲ್ಲಿಗೆಹಳ್ಳಿಯಲ್ಲಿ ಕೆಲವು ಮಂದಿ ಹೂವಾಡಿಗರು ಮಾತ್ರ ವಾಸಿಸುತ್ತಿದ್ದರು. ಉಳಿದ ದಿನಗಳಲ್ಲಿ ಆ ಹಳ್ಳಿ ಜನರಿಲ್ಲದ ಒಂದು ಬನದಂತೆ ಕಾಣುವುದು. ಒಂದೊಂದು ಕುಟೀರದ ಸುತ್ತಲೂ ಮಲ್ಲಿಗೆಯ ತೋಟವಿರುವುದು. ತೋಟದಲ್ಲಿ ಬಳ್ಳಿಗಳು ತುಂಬಿ ಬೆಳೆದು ಹೂವಿನ ಹೊದಿಕೆಯಲ್ಲಿ ಓಲಾಡುತ್ತಿರುವುವು. ಅಷ್ಟೊಂದು ಹೂವು ಮಾರಾಟವಾಗುವುದು ಹೇಗೆ, ಬಳಸುವವರಾರು? ಯಾರೂ ಬಿಡಿಸದೆ ಮುದಿಯಾಗಿ ಉಳಿದ ಹೂವುಗಳು ಭೂಮಿಯ ಕಡೆಗೆ ಮುಖಬಾಗಿಸಿರುವುವು. ತೋಟಗಳಲ್ಲಿ ಇತರ ಹೂವುಗಳನ್ನೂ ಬೆಳೆಯುವರು. ಆದರೆ ಮಲ್ಲಿಗೆ ಅರಳುವಂತೆ ಆ ನೆಲದಲ್ಲಿ ಬೇರೆ ಯಾವ ಹೂವೂ ಅರಳಲಾರದು. ಆ ಕಾರಣದಿಂದಲೇ ಹಿಂದಿನ ಜನ ಹಳ್ಳಿಗೆ ಆ ಹೆಸರನ್ನಿಟ್ಟಿರಬೇಕು. ಗೋಪಾಲಕೃಷ್ಣನ ಜಾತ್ರೆಯ ಸಮಯದಲ್ಲಿ ಮಲ್ಲಿಗೆಯ ದರ ಏರಿಹೋಗುವುದು. ಭಕ್ತಾದಿಗಳು ಪುಷ್ಪ ಪ್ರಿಯ ಕೃಷ್ಣನ ದೇವಾಲಯವನ್ನೇ ಮಲ್ಲಿಗೆಯಿಂದ ಮುಚ್ಚುವರು. ಮುಡುಪು ಹೊತ್ತ ಜನರು ಕೃಷ್ಣನ ರಥದ ಹಾದಿಯಲ್ಲಿ ಮಲ್ಲಿಗೆಯ ಹಾಸಿಗೆಯನ್ನು ಹಾಸುತ್ತಾರೆ. ಸುಮಂಗಲೆಯರು ಉತ್ಸವ ಸಮಯದಲ್ಲಿ ತಲೆಕೂದಲಿನ ಕಪ್ಪು ಕಾಣದಂತೆ ಮಲ್ಲಿಗೆಯ ಅಲಂಕಾರವನ್ನು ಮಾಡಿಕೊಳ್ಳುತ್ತಾರೆ.

ದೇವಾಲಯದ ಒಂದು ಪಾರ್ಶ್ವದಲ್ಲಿ ಒಂದು ಸುಂದರವಾದ ಕೊಳವಿದೆ. ಜಾತ್ರೆಯ ದಿನದ ನಡುರಾತ್ರಿಯಲ್ಲಿ ಅಲ್ಲಿ ತೆಪ್ಪದ ಉತ್ಸವ ನಡೆಯುವುದು. ಬೆಂಡಿನ ಹಲಗೆಗಳ ಮೇಲೆ ಮಲ್ಲಿಗೆಯ ಬಳ್ಳಿ, ಎಲೆ, ಹೂವುಗಳಿಂದಲೇ ಆ ತೆಪ್ಪವನ್ನು ಕಟ್ಟುತ್ತಾರೆ. ತುಪ್ಪದ ಸಾವಿರ ಸೊಡರುಗಳಿಂದ ಬೆಳಗುವ ಕೃಷ್ಣನ ಪುಷ್ಪಮಂಟಪ ರಾತ್ರಿಯೆಲ್ಲಾ ಕೊಳದ ದಂಡೆಯ ಮೇಲೆ ಸುತ್ತಾಡುವುದು. ಆಗ ಬಗೆಬಗೆಯ ಮದ್ದು ಸುಡುತ್ತಾರೆ. ಕೊಳದ ತಿಳಿನೀರಿನ ಮೇಲೆ ಮನೋರಂಜಕವಾದ ರಂಗುಗಳು ನರ್ತನ ಮಾಡುವುವು. ಕೃಷ್ಣನು ಗೋಪಿಕಾ ಸ್ತ್ರೀಯರೊಡನೆ ಆ ಕೊಳವಲ್ಲಿ ರಾಸಕ್ರೀಡೆಯಾಡಿದನೆಂದು ಹಳ್ಳಿಯ ವಯೋವೃದ್ಧರು ಹೇಳುತ್ತಾರೆ. ಜಾತ್ರೆಯ ಕಾಲದಲ್ಲಿ ಮಲ್ಲಿಗೆಹಳ್ಳಿ ಒಂದು ಶೃಂಗಾರದ ಬೀಡಾಗಿರುವುದು. ಯಾವುದೋ ಲೋಕದ ಮಾಯೆ ಇಳಿದುಬಂದು ಹಳ್ಳಿಯನ್ನು ತುಂಬಿಕೊಳ್ಳುವುದು.

ಅಲಂಕಾರಪ್ರಿಯ ಗೋಪಾಲಕೃಷ್ಣನ ವಿಗ್ರಹ ರಥದಲ್ಲಿ ಮಂಡಿಸಿತ್ತು. ಪುಷ್ಪಗಳ ಸುಗಂಧ ಬೀದಿಗಳನ್ನೆಲ್ಲ ತುಂಬಿದ್ದಿತು. ಮಂಗಳವಾದ್ಯಗಳು ಮೊಳಗುತ್ತಿದ್ದವು. ಸಾವಿರಾರು ಮಂದಿ ಕೇಕೆ ಹಾಕುತ್ತ ರಥವನ್ನೆಳೆಯಲು ಸಿದ್ಧರಾಗಿದ್ದರು.

ಆ ಸಮಯದಲ್ಲಿ ನಡುವಯಸ್ಸಿನ ಒಬ್ಬ ಹೆಂಗಸು ಬೀದಿಯ ಪಕ್ಕದಲ್ಲಿ ನಿಧಾನವಾಗಿ ನಡೆಯುತ್ತಿದ್ದಳು. ಅವಳ ಕಾಲು ಸಿತ್ರಾಣದಿಂದ ಸೋತಿತ್ತು. ಅಲ್ಲಲ್ಲಿ ಅವಳು ಕುಸಿದು ಕುಳಿತುಕೊಳ್ಳುತ್ತಿದ್ದಳು. ಜಾತ್ರೆಯ ಸಡಗರ ಅವಳಿಗೆ ಬೇಕಾದಂತೆ ತೋರಲಿಲ್ಲ. ಸ್ವಲ್ಪ ದೂರದಲ್ಲಿ ಕೇಳಿಬರುತ್ತಿದ್ದ ಕೋಲಾಹಲ ಕಿವಿಯ ಮೇಲೆ ಬಿದ್ದು ಅವಳನ್ನು ನಲಿಸಲಾರದೆ ಹಿಂದಿರುಗುತ್ತಿತ್ತು. ಅವಳಿಗೆ ಆವರಣದ ಜ್ಞಾನವೇ ಇರಲಿಲ್ಲ. ಎದುರಿಗಿದ್ದ ದಾರಿಯನ್ನೂ ಕಾಣದೆ ತಪ್ಪು ಹೆಜ್ಜೆಯನ್ನು ಹಾಕುತ್ತಿದ್ದಳು. ಮುಖ ಕೆಂಪೇರಿತ್ತು. ಬೆವರೂರಿ ಗಲ್ಲದಿಂದ ತೊಟ್ಟುಗಳು ತೂಗಾಡುತ್ತಿದ್ದವು.

ಜಾನಕಿ ದೇವನಹಳ್ಳಿಯ ಶಾಸ್ತ್ರಿಗಳ ಮಗಳು. ಆರು ವರ್ಷದ ಅವಳ ತಮ್ಮ ಆಗತಾನೆ ಜಾತ್ರೆಯ ಗುಂಪಿನಲ್ಲಿ ತಪ್ಪಿಸಿಕೊಂಡಿದ್ದ. "ಸೀನೂ, ಸೀನೂ...." ಎಂದು ಕೂಗುತ್ತ ಜಾನಕಿ ಅಲ್ಲಿ ಇಲ್ಲಿ ಅವಸಿಗಾಗಿ ಸುತ್ತಾಡುತ್ತಿದ್ದಳು. ಆಗ ಅವಳು ಆ ಬಳಲಿದ ಹೆಂಗಸನ್ನು ಸಂಧಿಸಿದಳು. ಜಾನಕಿಗೆ

ಅವಳು ಯಾರೆಂದು ಗುರುತಿಸುವುದೇ ಕಷ್ಟವಾಯಿತು. ಅವಳ ಮನಸ್ಸು ಕರಗಿ ಹೋಯಿತು.

"ಏಕೆ ಪದ್ಮ, ಇಷ್ಟೊಂದು ಮೈ ತೆಗೆದುಹೋಗಿದೆ?" ಎಂದು ಜಾನಕಿ ಕೇಳಿದಳು.

ಪದ್ಮ ನಿರುತ್ತರಳಾಗಿ ನಿಂತಳು.

"ಏಕೆ, ಮೈ ನಡುಗುತ್ತಿದೆ?"

ಪದ್ಮಳಿಗೆ ಮಾತನಾಡಲು ಉಸಿರಿರಲಿಲ್ಲ.

"ಎರಡು ದಿನದಿಂದ ಜ್ವರ, ಬಹಳ ನಿತ್ರಾಣ."

ಜಾನಕಿ ಪದ್ಮಳ ಸಮವಯಸ್ಕ ಗೆಳತಿ. ಪದ್ಮ ದೇವನಹಳ್ಳಿಗೆ ಬಂದ ವರ್ಷವೇ ಅವಳೂ ಗಂಡನ ಮನೆಗೆ ಹೊರಟುಹೋದಳು. ಕೆಲವೇ ತಿಂಗಳಲ್ಲಿ ಅವರಿಬ್ಬರ ಸ್ನೇಹ ಬೆಳೆದಿದ್ದಿತು. ಜಾನಕಿ ಜಾತ್ರೆಗಾಗಿ ಮಲ್ಲಿಗೆಹಳ್ಳಿಗೆ ಬಂದಿದ್ದಳು.

ಜಾನಕಿ ಪದ್ಮಳ ಮೈ ಮುಟ್ಟಿ ನೋಡಿದಳು. ಮೈ ಸುಡುತ್ತಿತ್ತು.

"ಈ ಜ್ವರದಲ್ಲಿ ಜಾತ್ರೆಗೇಕೆ ಬಂದೆ, ಪದ್ಮ?"

"ಜ್ವರ ಬಂದದ್ದು ಮನೆಯಲ್ಲಿ ಯಾರಿಗೂ ಗೊತ್ತೇ ಇಲ್ಲ."

"ಅಯ್ಯೋ! ಹೇಳಲೇ ಇಲ್ಲವೆ?"

"ಯಾಕೆ ಹಾಗೆ ಕೇಳುತ್ತೀ, ಜಾನಕಿ? ನನ್ನ ಬದುಕು ನಿನಗೆ ಗೊತ್ತಿಲ್ಲವೆ? ಮನೆಯಲ್ಲಿ ನನ್ನ ಕಷ್ಟವನ್ನು ತಿಳಿಸಿ ಪ್ರಯೋಜನವೇನು? ಜಾತ್ರೆಗೆ ನಾನೇಕೆ ಅಡ್ಡಿಯಾಗಲಿ?"

ಜಾನಕಿ ಪದ್ಮಳ ಗೃಹಜೀವನವನ್ನು ತಿಳಿದಿದ್ದಳು. ವೆಂಕಮ್ಮನವರ ಕಾಠಿಣ್ಯ ಹಳ್ಳಿಯಲ್ಲಿ ಎಲ್ಲರಿಗೂ ತಿಳಿದಿದ್ದಿತು. ನಾಣಿ ತಪ್ಪುದಾರಿಯನ್ನು ಹಿಡಿದಿದ್ದನೆಂದು ಜಾನಕಿ ಹತ್ತು ನಾಲಗೆಗಳಿಂದ ಕೇಳಿದ್ದಳು. ಜೂಜು, ನಾಟಕಗಳಲ್ಲಿ ಅವನು ಕುಟುಂಬಜೀವನವನ್ನೇ ಮರೆತಿದ್ದ. ಅದೆಲ್ಲ ಹಳ್ಳಿಯಲ್ಲಿ ಹಳೆಯ ಮಾತು.

"ಸಂಪಿಗೆಯಿಂದ ಕಾಗದ ಬಂದಿತ್ತೆ, ಪದ್ಮ?"

"ಕಾಗದ ಬಂದರೂ ಅದು ನನ್ನ ಕೈಸೇರಬೇಕಲ್ಲಾ."

"ಎರಡು ದಿನ ಕರೆದುಕೊಂಡು ಹೋಗಿ ಎಂದು ನೀನಾದರೂ ಒಂದು

ಕಾಗದ ಹಾಕೆ." ಆ ಮಾತನ್ನಾಡಿದಾಗ ಜಾನಕಿಯ ಕಣ್ಣು ಒದ್ದೆಯಾಯಿತು.

"ನಾನೆಲ್ಲಿ ಕಾಗದ ಹಾಕುವುದು, ಜಾನಕಿ?" ಎಂದು ನಿಟ್ಟುಸಿರು ಬಿಟ್ಟಳು.

ಆ ಬಿಸಿಯುಸಿರು ಜಾನಕಿಯ ಮುಖಕ್ಕೆ ಬಡಿಯಿತು.

"ಇಲ್ಲೇ ಇರು, ಪದ್ಮ. ಒಂದು ಅಂಚೆ ಕವರನ್ನು ತಂದುಕೊಡುತ್ತೇನೆ. ಈಗಲೇ ಸಂಪಿಗೆಗೆ ಒಂದು ಕಾಗದ ಬರೆ. ಸಂಕೋಚ ಇಲ್ಲದೆ ನಿನ್ನ ಸ್ಥಿತಿಯನ್ನೆಲ್ಲ ಅವರಿಗೆ ತಿಳಿಸಿಬಿಡು" ಎಂದು ಪಕ್ಕದ ಹಾದಿಗೆ ತಿರುಗಿದಳು ಜಾನಕಿ.

ಸ್ವಲ್ಪ ಹೊತ್ತಿನಲ್ಲಿ ಜಾನಕಿ ಹಿಂತಿರುಗಿದಳು. ಒಂದು ಅಂಗಡಿಯ ನೆರಳಿನಲ್ಲಿ ಪದ್ಮಳನ್ನು ಕುಳ್ಳಿರಿಸಿ ಲೇಖನಿಯನ್ನೂ, ಕಾಗದವನ್ನೂ ಸಜ್ಜು ಮಾಡಿಕೊಟ್ಟಳು. ಪದ್ಮಳ ಕೈ ಜ್ವರದಿಂದ ನಡುಗುತ್ತಿತ್ತು. ಬಹಳ ಶ್ರಮದಿಂದ ಅವಳು ಎರಡು ಪುಟದ ಕಾಗದವನ್ನು ಬರೆದಳು. ತನ್ನ ಎದೆಯಲ್ಲಿನ ದುಗುಡವನ್ನೆಲ್ಲ ತೋಡಿಕೊಂಡಳು. ಮುಂದೆ ಕೈ ನಡೆಯದೆ ಅವಳು ಕಾಗದವನ್ನು ಮುಗಿಸಿದಳು. ಸುರಿದ ಕಣ್ಣೀರು ಬಿಸಿಯಾದ ಕೆನ್ನೆಯ ಮೇಲೆ ಇಂಗಿ ಹೋಯಿತು.

ಕವರಿನ ಮೇಲೆ ರಂಗರಾಯರ ವಿಳಾಸವನ್ನು ಜಾನಕಿಯೇ ಬರೆದಳು. ಹತ್ತಿರದಲ್ಲಿಯೇ ದೇವಸ್ಥಾನ ಇದ್ದಿತು. ಪದ್ಮಳನ್ನು ಆ ಕಡೆಗೆ ನಡೆಸಿ ತಾನು ಅಂಚೆಗೆ ಕಾಗದವನ್ನು ಹಾಕಲು ಹೊರಟಳು.

"ದೇವರೇ ನಿನ್ನನ್ನು ಜಾಗ್ರತೆ ಕರೆಸಿದ, ಜಾನಕಿ. ನಿನ್ನ ಉಪಕಾರವನ್ನು ಉಸಿರಿರುವವರೆಗೂ ನಾನು ಮರೆಯುವ ಹಾಗಿಲ್ಲ."

"ಹಾಗೆಲ್ಲ ಮಾತನಾಡಬೇಡ, ಪದ್ಮ. ನಿನಗೋಸ್ಕರ ನಾನೇನು ಮಾಡಿದೆ?" ಎಂದು ಜಾನಕಿ ಹೊರಟುಹೋದಳು.

ಜಾತ್ರೆಯ ಸಮಯದಲ್ಲಿ ಒಂದು ವಿಶೇಷವಾದ ಅಂಚೆಯ ವ್ಯವಸ್ಥೆಯಾಗಿತ್ತು. ಜಾನಕಿ ಅಂಚೆಪೆಟ್ಟಿಗೆಯಲ್ಲಿ ಕಾಗದವನ್ನು ಹಾಕಿ ಹಿಂದಿರುಗುತ್ತಿದ್ದಳು. ಆಗ ಸೀನು ಒಂದು ಪೀಪಿಯನ್ನೂದುತ್ತ ಎದುರಿಗೆ ಓಡಿಬಂದ. ಅವನನ್ನು ಜಾನಕಿ ಅಪ್ಪಿಕೊಂಡಳು. ರಥವನ್ನು ಎಳೆಯುವ ಸಮಯವಾಗಿತ್ತು. ಇಬ್ಬರೂ ದೇವಸ್ಥಾನಕ್ಕೆ ಬೇಗ ಬೇಗ ನಡೆದರು.

ಮಲ್ಲಿಗೆಹಳ್ಳಿಯ ಜಾತ್ರೆ ಮುಗಿಯಿತು. ಎಲ್ಲರೂ ಊರಿಗೆ ಹಿಂತಿರುಗಿ

ದರು. ಪದ್ಮ ಹಾಸಿಗೆ ಹಿಡಿದಳು.

“ ಸರಿ, ಇವಳಿಗೆ ಬಂತು ಇನ್ನು ರೋಗ.” ವೆಂಕಮ್ಮನವರು ಅಸಹನೆಯ ಮಾತನ್ನಾಡಿದರು.

ನಾಣಿಗೆ ಏನೂ ಬೇಕಾಗಿರಲಿಲ್ಲ. ಜಾತ್ರೆಯ ಸಮಯದಲ್ಲಿ ಅವನು ಒಂದು ನಾಟಕವನ್ನು ಏರ್ಪಡಿಸಿದ್ದ. ಸಾಮಾನ್ಯವಾಗಿ ನಾಟಕದಿಂದ ಅವನ ಕೈಯಿಂದಲೇ ಹಣ ಬಿಟ್ಟುಹೋಗುತ್ತಿತ್ತು. ಆದರೆ ಈ ಬಾರಿ ಸ್ವಲ್ಪ ಹಣ ಕೈಸೇರಿತು. ಅದರಿಂದ ಅವನ ಉತ್ಸಾಹ ಉಕ್ಕಿದೆ. ನಾಟಕಗಳಿಗಾಗಿ ಅಷ್ಟಿಷ್ಟು ಹಲವು ಕಡೆಗಳಲ್ಲಿ ಸಾಲವಾಗಿದ್ದುದು ಅವನ ಗಮನವನ್ನು ಸೆಳೆದಿರಲಿಲ್ಲ. ಪುನಃ ಅವನು ಕೆಲದಿನ ಊರನ್ನು ಬಿಡುವುದರಲ್ಲಿದ್ದ.

ಹಳ್ಳಿಯ ಜನರು ಪದ್ಮಳಿಗಾಗಿ ಕರುಣೆಯನ್ನು ತಾಳಿದರು. ಅನೇಕರು ಬಂದು ಅವಳನ್ನು ಮಾತನಾಡಿಸಿದರು. ಎಲ್ಲರೂ ಮೂದಲಿಸಿದುದರಿಂದ ನಾಣಿ ಪಕ್ಕದ ಊರಿನಿಂದ ಪದ್ಮಳ ದೇಹಸ್ಥಿತಿಯನ್ನು ಪರೀಕ್ಷಿಸಲು ಒಬ್ಬ ಡಾಕ್ಟರನ್ನು ಕರೆತಂದ.

“ ಇದು ವಿಷಮಶೀತಜ್ವರ. ಇಷ್ಟು ದಿನಗಳು ಈ ಜ್ವರವನ್ನು ನೀವು ನಿರ್ಲಕ್ಷಿಸಿದ್ದು ತಪ್ಪು. ಚಿಕಿತ್ಸೆಯನ್ನೇನೋ ನಡೆಸೋಣ ” ಎಂದು ಡಾಕ್ಟರ್ ಗಂಭೀರವಾಗಿ ಹೇಳಿದರು.

ಇಂಜಕ್ಷನ್ ಚುಚ್ಚಿ ಮದ್ದನ್ನು ಕೊಟ್ಟರು. ಮರುದಿನ ಮತ್ತೆ ಬಂದು ನೋಡುವುದಾಗಿ ಹೇಳಿ ಹೊರಟುಹೋದರು.

ಪದ್ಮಳಿಗೆ ವಿಷಮಶೀತಜ್ವರವೆಂದು ಕೇಳಿ ವೆಂಕಮ್ಮನವರ ಹೃದಯಕ್ಕೂ ಗಾಸಿಯಾಯಿತು. ನಾಣಿಯ ಮನಸ್ಸಿಗೂ ಯೋಚನೆ ತಾಕಿತು. ಅವನು ತನ್ನ ಪ್ರಯಾಣವನ್ನು ನಿಲ್ಲಿಸಿದ.

## ೪೯

ಆನಂದ ಸಂಪಿಗೆಗೆ ಬಂದುಹೋದನಂತರ ರಂಗರಾಯರ ಮನಸ್ಸಿಗೆ ಸ್ವಲ್ಪ ಸಮಾಧಾನ ಸಿಕ್ಕಿದ್ದರೂ ಆ ಸಮಾಧಾನದಲ್ಲಿ ತಿರುಳಿರಲಿಲ್ಲ. ಅವರ ಅಂತ ರಂಗದಲ್ಲಿ ನೋವಿದ್ದೇ ಇತ್ತು. ಅದಕ್ಕೆ ಮುಖ್ಯವಾಗಿ ಎರಡು ಕಾರಣಗಳಿದ್ದವು. ಮೊದಲನೆಯದು ಆನಂದನ ಬದುಕಿಗೆ ಬೇವು ಹಿಂಡಿದವರು ತಾವೇ ಎಂಬ ಅವರ

ತಿಳಿವಳಿಕೆ. ಎರಡನೆಯದು ಆನಂದನ ಪ್ರೇಮದ ಆಹುತಿಯಿಂದಲೂ ಪದ್ಮಳ ಬದುಕು ಸುಖವಾಗಿರುವ ಸೂಚನೆ ಕಂಡುಬರದಿದ್ದುದು. ಅವರ ಮನಸ್ಸಿಗೆ ನಂಜು ಮುಸುಕಿಕೊಂಡಿದ್ದಿತು.

ನಾಗಮ್ಮನವರ ಆರೋಗ್ಯ ಕ್ಷೀಣಗತಿಯಲ್ಲಿತ್ತು. ಅದು ಸವೆದ ಜೀವ. ಆನಂದ ಸಂಪಿಗೆಗೆ ಬಂದುಹೋದನಂತರ ಅವರ ಮನಸ್ಸು ಸಂಶಯಗಳಿಂದ ತುಂಬಿತು. ಆನಂದನ ಅನಾಸಕ್ತಿ, ವಿಮನಸ್ಕತೆ, ಪೆಚ್ಚು ಮೋರೆ—ಎಲ್ಲವನ್ನೂ ಅವರು ಗಮನಿಸಿದ್ದರು. ಅವನ ಮೈ ಸೊರಗಿತ್ತು. ಮುಖದಲ್ಲಿ ಗೆಲುವಿರಲಿಲ್ಲ. ಅವರ ಪ್ರಶ್ನೆಗಳಿಗೆಲ್ಲ ಅವನು ಮೋಟಕಾದ ಉತ್ತರಗಳನ್ನು ಕೊಟ್ಟಿದ್ದ.

'ಅದನ್ನೆಲ್ಲ ನೀನೇಕೆ ಹಚ್ಚಿಕೊಳ್ಳುತ್ತೀ' ಎಂಬ ಧ್ವನಿಯಿರುತ್ತಿತ್ತು ಅವನ ಮಾತಿನಲ್ಲಿ.

ಪದ್ಮಳ ವಿಷಯವಾಗಿ ನಾಗಮ್ಮನವರು ಯಾರನ್ನು ಪ್ರಶ್ನಿಸಿದರೂ ನೇರವಾದ ಉತ್ತರವೇ ಬರುತ್ತಿರಲಿಲ್ಲ. ವಿಚಾರವನ್ನು ಬದಲಾಯಿಸಿ ಅವರು ಬೇರೆ ಮಾತನ್ನೆತ್ತುತ್ತಿದ್ದರು. ಸಮಯಗಳಲ್ಲಿ ರಂಗರಾಯರು ತಾಳ್ಮೆ ಮೀರಿ, 'ಯಾರ ಗತಿ ಏನಾದರೂ ಆಗಲಿ. ನೀನೇಕೆ ಸುಮ್ಮನೆ ಹಚ್ಚಿಕೊಳ್ಳುತ್ತೀ. ಡಾಕ್ಟರ್ ನಿತ್ಯ ಅದನ್ನೇ ಹೇಳುತ್ತಾರೆ' ಎಂದುಬಿಡುತ್ತಿದ್ದರು. ಆಗ ನಾಗಮ್ಮನವರ ಸಂಶಯಗೊಂಡ ಮನಸ್ಸು ಸುತ್ತಿ ಸುತ್ತಿ ತೊಳಲುತ್ತಿತ್ತು. ಕುಟುಂಬದಲ್ಲಿ ಏನೋ ವ್ಯತ್ಯಸ್ತವಾಗಿದೆಯೆಂಬ ಅವರ ಚಿಂತೆ ಆಗ ಪ್ರಬಲವಾಗುತ್ತಿತ್ತು.

'ಬೇಗ ಈ ಹಣ್ಣೆಲೆ ಕಳಚಿಹೋದರೆ ಸಾಕು' ಎನ್ನುತ್ತಿದ್ದರು.

ಅಡಿಗೆ, ಮನೆಗೆಲಸ ಮತ್ತು ನಾಗಮ್ಮನವರ ಸೇವೆಗಳಿಗಾಗಿ ಒಬ್ಬ ಸೇವಕಿಯಿದ್ದಾಳೆ. ಅವಳು ಶಾಮರಾಯರ ದೂರದ ಸಂಬಂಧಿ. ಅವಳನ್ನು ಶಾಮರಾಯರೇ ಗೊತ್ತುಮಾಡಿಕೊಟ್ಟಿದ್ದಾರೆ.

ರಂಗರಾಯರು ದಿನದ ಬಹಳ ಹೊತ್ತನ್ನು ಹೊಲಗದ್ದೆಗಳ ನಡುವೆ ಕಳೆಯುತ್ತಾರೆ. ಒಂದು ದಿನ ಬೆಳಗ್ಗೆ ಗದ್ದೆಯ ಅಂಚಿನಲ್ಲಿ ಕುಳಿತಿದ್ದಾರೆ. ತಲೆಯ ಮೇಲೆ ಹೊಂಗೆಯ ಚಿಗುರು ಚೆಲ್ಲಾಟವಾಡುತ್ತಿದೆ. ಅಲುಗಾಡುತ್ತಿರುವ ಎಲೆಗಳ ನಡುವೆ ನೀಲಾಕಾಶ ಛಿದ್ರಛಿದ್ರವಾಗಿ ಕಾಣುತ್ತಿದೆ. ಆಕಾಶದ ಒಂದು ಮೂಲೆಯಲ್ಲಿ ತಂಡತಂಡವಾಗಿ ಓಡುತ್ತಿರುವ ತಿಳಿಮುಗಿಲುಗಳ ಕಡೆಗೆ ಅವರ ನೋಟ ಬಿದ್ದಿದೆ. ಆ ಮುಗಿಲುಗಳೆಲ್ಲ ಒಂದುಗೂಡಿ ಗಗನಾಂಗಣವನ್ನು ಮಸಕುಮಾಡು

ತ್ತಿವೆ. ಗದ್ದೆಯ ತುಂಬು ಬೆಳೆ ಹೊನ್ನಿನ ರಸದಲ್ಲಿ ತೊಯ್ದು ನಿಂತಿದೆ. ಆ ಬೆಳೆಯಂತೆ ತಮ್ಮ ಬಾಳೂ ಹಣ್ಣಾಗಿರುವ ಭಾವನೆ ಅವರ ಮನಸ್ಸಿನಲ್ಲಿ ಮೂಡಿ ಕಣ್ಣಿನ ರೆಪ್ಪೆ ಅಲುಗಿದೆ. ಬಹುಶಃ ಆಗ ಅವರಿಗೆ ಕಾಲನ ಕೊಡಲಿಯ ನೆನಪು ಆಗಿರಬಹುದು. ಆದರೆ ಅವರು ಅದಕ್ಕಾಗಿ ಅಂಜುವ ಸಮಯ ಉರುಳಿ ಹೋಗಿದೆ. ಕಣ್ಣೆಟಕುವವರೆಗೆ ಹಬ್ಬಿರುವ ಹೊನ್ನ ಗದ್ದೆಯನ್ನು ಕಂಡು ಎದೆ ಉಬ್ಬುತ್ತದೆ. ಮರುಕ್ಷಣ ಕಣ್ಣು ಅಶ್ರುಪೂರಿತವಾಗುತ್ತದೆ. ಆನಂದ, ಪದ್ಮ ಅವರ ನೆನಪನ್ನು ಹೊಗುವರು.

ಸ್ವಲ್ಪ ದೂರದಲ್ಲಿ ಶಾಮರಾಯರು ತಮ್ಮ ಕಡೆಗೇ ಬರುತ್ತಿದ್ದುದನ್ನು ರಂಗರಾಯರು ಕಂಡರು. ಪಕ್ಕದಲ್ಲಿ ಹರಿಯುತ್ತಿದ್ದ ಕಾಲುವೆಯ ನೀರಿನಲ್ಲಿ ಮುಖ ತೊಳೆದುಕೊಂಡರು. ಆವರೂ ಅವರ ಕಣ್ಣಿನ ಕೆಂಪು ತಿಳಿಯಾಗಲಿಲ್ಲ.

" ಏನು ರಂಗೂ, ಬಹಳ ಯೋಚನೆ ಮಾಡುತ್ತಿದ್ದೀ ? "

" ನನಗೆ ಯೋಚನೆ ಇಲ್ಲದೆ ಇರುವುದು ಯಾವಾಗ ? ಅದು ನನ್ನ ಜನ್ಮಕ್ಕೆ ಹತ್ತಿದ್ದು."

" ಅಷ್ಟೊಂದು ಹಚ್ಚಿಕೊಳ್ಳಬೇಡ, ರಂಗೂ. ಯಾವಾಗಲೂ ತಳಮಳ ಪಡುತ್ತಾ ಇರುತ್ತೀ. ನಿನ್ನ ಆರೋಗ್ಯದ ಗತಿಯೇನು ? "

" ನಮ್ಮ ಬದುಕಿಗೇನೋ ಸಂಜೆ ಬಂತು. ಅದರ ತಳಮಳ ಇಲ್ಲ ನನಗೆ. ಮಕ್ಕಳ ದಾರಿ ಹೀಗಾಯಿತಲ್ಲಾ ಎನ್ನುವುದೇ ನನ್ನ ಯೋಚನೆ."

" ಇಂದಲ್ಲ ನಾಳೆ ಎಲ್ಲವೂ ಸರಿಹೋದೀತು. ಸ್ವಲ್ಪ ಸಮಾಧಾನ ತಂದುಕೊ."

" ಎಲ್ಲ ಸರಿಹೋಗುವುದು ಒಂದು ಕನಸು, ಅಷ್ಟೆ. ದೇವನಹಳ್ಳಿಯ ಗೌಡ ಬಂದು ಪದ್ಮಳ ಗತಿಯನ್ನೆಲ್ಲ ಹೇಳಲಿಲ್ಲವೆ ? "

" ದೇವನಹಳ್ಳಿಯ ಜಾತ್ರೆಗೆ ಹೋಗಿ ಪದ್ಮಳನ್ನು ಸಂಪಿಗೆಗೆ ಎರಡು ದಿನ ಕರೆದುಕೊಂಡು ಬರಬಹುದಾಗಿತ್ತು."

" ಆಗ ನಾಗೂ ದೇಹಸ್ಥಿತಿ ತೀರಾ ಕೆಟ್ಟಿತ್ತು. ಊರು ಬಿಟ್ಟು ಹೋಗ ಕೂಡದು ಎಂದು ಡಾಕ್ಟರ್ ಖಂಡಿತವಾಗಿ ಹೇಳಿದ್ದರು."

ಶಾಮರಾಯರು ಪರಿಸ್ಥಿತಿಯನ್ನು ತಿಳಿದಿದ್ದರು. ರಂಗರಾಯರು ಸಿಟ್ಟಿನಿಂದ ಮಾತನಾಡಿದರು.

" ನಾಣಿಗೆ ನಾನು ನಾಲ್ಕು ಕಾಗದಗಳನ್ನು ಬರೆದೆ. ಅವನಿಂದ ಒಂದು ಕಾಗದವೂ ಇಲ್ಲ. ಪದ್ಮಳ ಆರೋಗ್ಯಸಮಾಚಾರವೇ ಗೊತ್ತಿಲ್ಲ. ವೆಂಕಮ್ಮನ ಕಾಟವನ್ನು ಆ ಮಗು ಹೇಗೆ ಸಹಿಸಿಕೊಂಡಿದೆಯೋ. ನನ್ನ ಕಾಗದಗಳನ್ನೆಲ್ಲ ನಾಣಿ ಕಸದ ಬುಟ್ಟಿಗೆ ಎಸೆದಿದ್ದಾನೆ. ಈ ಸಲ ಪದ್ಮಳನ್ನು ಕರೆದುಕೊಂಡು ಬಂದು ಅವನಿಗೆ ಸರಿಯಾದ ಪಾಠವನ್ನು ಕಲಿಸುತ್ತೇನೆ" ಎಂದು ಬಿಗಿಯಾಗಿ ಹೇಳಿದರು.

ಹೊತ್ತು ಅಪರಾಹ್ನವಾಯಿತು. ರಂಗರಾಯರು ಮೇಲೇಳಹೋದರು. ಏಕೋ ಅವರ ಮೈ ನಿತ್ರಾಣವಾಗಿತ್ತು. ಮಂಡಿಯೂರಿ ಪುನಃ ಕುಳಿತರು. ಶಾಮರಾಯರು ಅವರ ತೋಳನ್ನೆತ್ತಿ ನಿಲ್ಲಿಸಿದರು.

" ಏಕೆ ರಂಗೂ, ಮೈ ಸುಡುತ್ತಿದೆ ? "

ರಂಗರಾಯರು ನಿರುತ್ತರರಾಗಿ ಉದ್ದವಾದ ಉಸಿರನ್ನು ಬಿಟ್ಟರು. ಜ್ವರ ಏರಿರುವುದನ್ನು ತಿಳಿದು ಶಾಮರಾಯರು ಅವರನ್ನು ನಿಧಾನವಾಗಿ ನಡೆಸಿಕೊಂಡು ಮನೆಗೆ ಹೊರಟರು.

" ನಿನ್ನ ಪ್ರಕೃತಿ ಕೆಡುತ್ತಿದೆ. ಈ ದಿನವೇ ಮದ್ದು ತೆಗೆದುಕೋ."

" ನನಗೇಕೆ ಮದ್ದು—ಮಣ್ಣಿಗೆ ! "

ಮನೆಯನ್ನು ಸೇರುವ ವೇಳೆಗೆ ನಾಗಮ್ಮನವರು ಅರ್ಧ ಗಂಟೆ ಕಾಲ ಪ್ರಜ್ಞಾಶೂನ್ಯರಾಗಿದ್ದರೆಂದು ಸೇವಕಿಯಿಂದ ತಿಳಿಯಿತು. ಅವರು ಪುನಃ ಎಚ್ಚರಗೊಂಡು ಸ್ವಲ್ಪ ಹೊತ್ತಾಗಿದ್ದಿತು. ಅವರಿಗೆ ತಿಳಿಯದಂತೆ ರಂಗರಾಯರು ಹಾಸಿಗೆಯನ್ನು ಹಿಡಿಯಬೇಕಾಯಿತು. ಶಾಮರಾಯರ ಕುಟುಂಬ ಆ ದಿನ ಅವರ ನೆರವಿಗೆ ಹೋಗಬೇಕಾಯಿತು.

ಮರುದಿನ ರಂಗರಾಯರು ನಿತ್ರಾಣರಾಗಿ ಕೊಟಡಿಯಲ್ಲಿ ಕುಳಿತಿದ್ದರು. ಅಂಚೆಯವನು ಒಂದು ಕವರನ್ನು ಅವರ ಕೊಟಡಿಯೊಳಕ್ಕೆ ಎಸೆದ. ರಂಗರಾಯರು ಪತ್ರವನ್ನೋದಿದರು. ಅವರಿಗೆ ಅದರಲ್ಲಿದ್ದ ಅಕ್ಷರಗಳನ್ನು ಗುರುತಿಸುವುದೇ ಕಷ್ಟವಾಯಿತು. ಅವರ ಕತ್ತು ಉಬ್ಬಿಕೊಂಡಿತು. ಒಳಗೇ ಬಿಕ್ಕಿದರು. ಸ್ತಂಭೀಭೂತರಾಗಿ ಸುಮ್ಮನೆ ಕುಳಿತುಬಿಟ್ಟರು.

ಆ ಸಮಯಕ್ಕೆ ಶಾಮರಾಯರು ಕೊಟಡಿಯೊಳಕ್ಕೆ ಬಂದರು. ರಂಗರಾಯರ ಕಣ್ಣೀರು ಇನ್ನೂ ಬತ್ತಿರಲಿಲ್ಲ. ಶಾಮರಾಯರು ಗಾಬರಿಗೊಂಡು,

" ಏನಿದು, ರಂಗೂ ? " ಎಂದು ಕೇಳಿದರು.

ರಂಗರಾಯರು ಕೆಲವು ಕ್ಷಣಗಳು ಮಾತನಾಡಲಿಲ್ಲ. ಅನಂತರ ತೊದಲು ನುಡಿಯಲ್ಲಿ ನುಡಿದರು :

" ನನ್ನ ದುಃಖದ ಪಾತ್ರೆ ತುಂಬಿದೆ."

ಅವರು ಹೆಚ್ಚು ಮಾತನಾಡದೆ ಮೇಜಿನ ಮೇಲಿದ್ದ ಪತ್ರವನ್ನು ಶಾಮ ರಾಯರ ಕೈಲಿರಿಸಿದರು. ಅವರು ಅದನ್ನು ಓದಿಕೊಂಡು ಪೆಚ್ಚಾದರು.

" ನಾನು ನಾಳೆಯ ದಿನವೇ ದೇವನಹಳ್ಳಿಗೆ ಹೋಗಿ ಪದ್ಮಳನ್ನು ಕರೆದು ಕೊಂಡು ಬರುತ್ತೇನೆ." ದನಿಯಲ್ಲಿ ನಿರ್ಧಾರಕ್ಕಿಂತ ಹೆಚ್ಚಾಗಿ ಕೋಪವಿತ್ತು.

" ಹೇಗಾಗುತ್ತೆ, ರಂಗೂ ? ನಿನ್ನ ದೇಹಸ್ಥಿತಿ ಚಿಂತಾಜನಕವಾಗಿದೆ."

" ನನ್ನ ರೋಗಕ್ಕೆ ಮೊದಲೆಲ್ಲಿ, ಕೊನೆಯೆಲ್ಲಿ ? ನಾಳೆಯೇ ನಾನು ಹೊರಡುತ್ತೇನೆ."

" ಊಟದ ಮನೆಗೆ ಹೋಗುವ ತ್ರಾಣ ಈಗ ನಿನಗಿಲ್ಲ. ನಾಳೆ ಸಂಪಿಗೆಗೆ ಹೋಗುವುದಕ್ಕೆ ಆಗುವುದೆ ? ಅಲ್ಲದೆ ಪದ್ಮಳಿಗೂ ಈಗ ಶಕ್ತಿಯಿರಲಾರದು. ಮುಂದಿನ ವಾರ ಹೋಗಿಬಂದರಾಯಿತು. ಈಗ ಸುಮ್ಮನೆ ಆಯಾಸ ಮಾಡಿ ಕೊಳ್ಳಬೇಡ."

ರಂಗರಾಯರು ಸುಮ್ಮನಾದರು.

## ೫೦

ಸರೋಜ ಸಂಜೆಯ ಕನಸಿನಲ್ಲಿ ದಿನವನ್ನು ಬೇಗ ಕಳೆದಳು. ರಾಜು ಏರ್ಪಡಿಸಿದ್ದ ಅಜಂತ ದಿನೋತ್ಸವದಲ್ಲಿ ತಾನೊಬ್ಬ ಗಣ್ಯವ್ಯಕ್ತಿಯೆಂದು ಅವಳ ಭಾವನೆ.

ಅಂದು ಭಾನುವಾರ. ಆನಂದನಿಗೂ ಸಂಜೆಯ ಕಾರ್ಯಕ್ರಮ ಒಂದು ರಮ್ಯವಾದ ಸಂತೋಷಕೂಟವಾಗಿತ್ತು. ಸಮಾರಂಭದಲ್ಲಿ ತಾನು ಕಾಣಬಹು ದಾದ ವ್ಯಕ್ತಿಗಳ ಬಿಂಬಗಳು ಕಣ್ಣಮುಂದೆ ಮೂಡಿಹೋದವು. ಅವುಗಳಲ್ಲಿ ಒಂದು ಬಿಂಬ ಆವನ ಅಂತರಂಗವನ್ನು ಕದಡಿತು. ಮನಸ್ಸಿನಲ್ಲಿ ಹುಟ್ಟಿದ ಉತ್ಸಾಹ ನೀರಿನ ಗುಳ್ಳೆಯಂತೆ ಒಡೆದುಹೋದರೂ ಮುಖದ ಮೇಲೆ ಗೆಲವು ಮಿನುಗಿತು. ಇಂದಿರೆಯ ಮತ್ತು ತನ್ನ ಪ್ರೇಮದ ಕತೆ ಆಲೆಯಲೆಯಾಗಿ

ಸುಳಿದು ಕನಸಿನ ತೆರೆಯ ಹಿಂದೆ ಉರುಳಿತು. ಕಣ್ಣಿನಿಂದ ಶೂನ್ಯನೋಟ ಹೊರಹೊಮ್ಮಿತು.

‘ ಇಂದಿರೆ ಈಗ ನನಗೆ ಸಂಬಂಧಿಸದ ವ್ಯಕ್ತಿಯಾಗಿದ್ದಾಳೆ. ನನ್ನ ಅಂತ ರಂಗಕ್ಕೇಕೆ ಈ ಭ್ರಾಂತಿ ? ’ ಎಂದೆನಿಸಿತು.

ಮಧ್ಯಾಹ್ನ ಸರಿಯಿತು. 'ಸರೋಜಳ ಅಲಂಕಾರ ಪೂರ್ತಿಯಾಗಿತ್ತು. ನಿಲುಗನ್ನಡಿಯ ಮುಂದೆ ಬಿಂಕದಿಂದ ಓಲಾಡಿದಳು. ಮುಖ ಹಿಗ್ಗಿತು. ಮೆಚ್ಚಿಗೆಯನ್ನು ನಿರೀಕ್ಷಿಸುವ ನೋಟ ಮುಖದಿಂದ ಹೊರಸೂಸಿತು. ಆ ಕ್ಷಣ ಅವಳ ಮನಸ್ಸನ್ನು ಯಾರು ಆಕ್ರಮಿಸಿದ್ದರೆಂಬುದನ್ನು ತಿಳಿಯಲಾಗುವಂತಿರ ಲಿಲ್ಲ. ಆನಂದ ಅದೇ ಕ್ಷಣ ಕೊಟಡಿಯೊಳಗೆ ಪ್ರವೇಶಿಸಿದ. ಅವನ ಪ್ರವೇಶ ವನ್ನು ಅವಳು ಕೂಡಲೇ ಗಮನಿಸಲಿಲ್ಲ. ಅವನನ್ನು ಕಂಡನಂತರ ಮನಸ್ಸು ಅವನ ಕಡೆಗೆ ತಿರುಗಲು ಒಂದು ಕ್ಷಣ ಬೇಕಾಯಿತು. ಅವಳ ಮನಸ್ಸಿನಲ್ಲಿ ವಿಹರಿಸುತ್ತಿದ್ದ ವ್ಯಕ್ತಿ ಆನಂದನಾಗಿರಲಿಲ್ಲವೆಂದು ಅದರಿಂದ ವ್ಯಕ್ತವಾಗುವಂತೆ ಇತ್ತು.

“ ನಿನ್ನ ರೂಪ ನಿನ್ನನ್ನೇ ಮೋಹಗೊಳಿಸಿದೆ ಅಲ್ಲವೆ, ಸರೋಜ ? ” ಎಂದ ಆನಂದ.

ಬಣ್ಣಬಣ್ಣದ ಉಡುಪನ್ನು ಧರಿಸಿ ಸರೋಜ ರೂಪಪ್ರದರ್ಶನಕ್ಕಾಗಿ ಸಿದ್ಧಳಾಗಿದ್ದಳು. ಅವಳು ನಿಜವಾಗಿ ಆನಂದನ ಹೃದಯದಲ್ಲಿ ಒಲವನ್ನು ಪ್ರಚಲಿತ ಮಾಡಿದಳು. ಅವಳೊಡನೆ ಸ್ವಲ್ಪ ಹೊತ್ತು ವಿನೋದವಾಡಲು ಆನಂದನಿಗೆ ಇಷ್ಟವಾಯಿತು. ಆ ಉದ್ದೇಶದಿಂದ ಅವನು ಅವಳನ್ನು ಮಾತ ನಾಡಿಸಿದ.

ಸರೋಜಳ ಮನಸ್ಸು ಹರಿಯುತ್ತಿದ್ದ ಜಾಡು ಬೇರೆಯಾಗಿತ್ತು. ಆನಂದನ ಆಸಕ್ತಿಯನ್ನು ಅದು ಗಮನಿಸದಾಯಿತು. ಅವನ ಒಲವಿನ ನುಡಿಗೆ ಅವಳ ನುಡಿ ಮರುನುಡಿಯಾಗಲಿಲ್ಲ. ಅವಳ ಮನಸ್ಸು ರಾಜುವಿನ ಕಲಾ ಮಂದಿರದಲ್ಲಿ ನಡೆಯಲಿದ್ದ ಉತ್ಸವದಲ್ಲಿ ನೆಟ್ಟಿತ್ತು. ಹುಬ್ಬಿನ ಮೇಲೆ ಕೊಂಕಿರು ವಂತೆಯೆ ಅವಳು ನುಡಿದಳು :

“ ಹೊತ್ತಾಯಿತು. ಇನ್ನೂ ನೀವು ಹೊರಡಲು ಸಿದ್ಧವಾಗಿಲ್ಲ. ಒಂದು ಗಂಟೆ ಮುಂಚೆ ಅಲ್ಲಿರುವಂತೆ ರಾಜು ಎಷ್ಟು ಹೇಳಿದರು. ಈಗಾಗಲೆ ಗಂಟೆ ನಾಲ್ಕು.”

ಆ ಮಾತನ್ನು ಕೇಳುತ್ತಲೆ ಆನಂದನೆದೆಯಲ್ಲಿ ಉಕ್ಕಿದ್ದ ಒಲವಿನ ಬುಗ್ಗೆ ಕುಗ್ಗಿತು. ಅವನ ಮನಸ್ಸಿಗೆ ಗಾಯುವಾಯಿತು. ಆದರೂ ಆ ಸನ್ನಿವೇಶದಲ್ಲಿ ಸರೋಜಳ ಮೋಹನರೂಪದಿಂದ ತನ್ನ ಮನಸ್ಸನ್ನು ವಿಮುಖಮಾಡಿಕೊಳ್ಳಲಾಗಲಿಲ್ಲ. ಅವನು ಅವಳ ಹತ್ತಿರಕ್ಕೆ ಬಂದು ಮೃದುವಾಗಿ ಮಾತನಾಡಿದ :

" ಹೋಗೋಣ, ಸರೋಜ. ಅಷ್ಟು ಆತುರವೇಕೆ ? ಕಾರ್ಯಕ್ರಮ ಆರು ಗಂಟೆಗೆ."

" ನಾಲ್ಕೂವರೆ ಬಸ್ಸು ಸಿಕ್ಕಬೇಕಾದರೆ ಬೇಗ ಹೊರಡಬೇಕು. ತಪ್ಪಿದರೆ ಗಾಡಿ ಮಾಡಬೇಕಾಗುತ್ತೆ."

ಸರೋಜ ಆನಂದನ ಭಾವನೆಯನ್ನೇ ಗಮನಿಸಲಿಲ್ಲ. ಅವನು ದನಿಯನ್ನು ಸ್ವಲ್ಪ ಎತ್ತರಿಸಿ ಮಾತನಾಡಿದ.

" ಏಕೆ ಅಷ್ಟು ಅವಸರ ? ನಾಲ್ಕೂವರೆಯ ಬಸ್ಸು ತಪ್ಪಿದರೆ ಐದು ಗಂಟೆ ಬಸ್ಸಿದೆಯಲ್ಲ."

ಆ ಮಾತು ಸರೋಜಳ ಉತ್ಸಾಹಕ್ಕೆ ಭಂಗವನ್ನುಂಟುಮಾಡಿತು. ಅವಳು ಅದನ್ನು ಹೊರಗೆಡಹಿದಳು :

" ನಿಮ್ಮಿಷ್ಟ, ಯಾವಾಗ ಬೇಕಾದರೂ ಹೋಗೋಣ."

ಆನಂದನ ಆಸೆ ಚೂರುಚೂರಾಯಿತು. ತಾಳ್ಮೆ ಕಲಕಿಹೋಯಿತು.

" ಹೊ ರ ಟ ರಾ ಯಿ ತು " ಎಂದು ಬಿಗಿಯಿಂದ ನುಡಿದ. ಮಾತು ಮುಗಿಯುವುದರಲ್ಲಿ ಅವನು ಕೊಟಡಿಯ ಹೊಸಿಲನ್ನು ದಾಟಿದ್ದ.

ಸರೋಜ ಆಸನದ ಮೇಲೆ ಸುಮ್ಮನೆ ಕುಳಿತಿದ್ದಳು. ಅವಳ ಮನಸ್ಸು ಸ್ವಲ್ಪ ಹೊತ್ತು ಯೋಚನೆಯಲ್ಲಿ ತೂಗಾಡಿತು. ಅನಂತರ ಮುಖದ ಮೇಲೆ ಮುಸುಕಿದ್ದ ರೇಖೆಗಳು ತಿಳಿಯಾದವು.

ನಡೆದುದು ಅಲ್ಪ ಪ್ರಸಂಗವಾದರೂ ಅದು ಆನಂದನ ಮನಸ್ಸನ್ನು ನೋಯಿಸಿತ್ತು. ಅವನಲ್ಲಿ ಸರೋಜಳಿಗಾಗಿ ಆಗ ಅರಳಿದ್ದ ಪ್ರೇಮವನ್ನು ಅವಳೇ ಘಾತಪಡಿಸಿದ್ದಳು.

ಆನಂದ ಉಡುಪನ್ನು ಧರಿಸಿದ. ವಿಮನಸ್ಕತೆಯಿಂದ ಸರೋಜಳನ್ನು ಕೇಳಿದ :

" ಹೊರಡೋಣವೆ ? "

ಸರೋಜ ಆಗ ಮಾತನಾಡಿದ ಧ್ವನಿ ಆನಂದನಿಗೆ ಅನಿರೀಕ್ಷಿತವಾಗಿತ್ತು.

" ಕೋಪ ಬಂತೆ ? "

" ಅಷ್ಟೊಂದು ಆತುರ ಆವಶ್ಯಕವಿಲ್ಲ ಎನಿಸಿತು ನನಗೆ " ಎಂದ.

ಆನಂದ ತನ್ನ ಮನಸ್ಸನ್ನು ಬಿಚ್ಚಿ ಹೇಳಲಾರದವನಾದ. ಸರೋಜಳ ಪ್ರಶ್ನೆಯಲ್ಲಿದ್ದ ಮೃದುಭಾವ ಅವನ ಮುಖದ ಮೇಲೆ ಸಮಾಧಾನವನ್ನು ಮೂಡಿಸಿತು.

" ಈಗ ಹೊರಡೋಣವೆ ? " ಎಂದಳು ಸರೋಜ. ಅವಳ ಮುಖದಲ್ಲಿ ತಿಳಿನಗೆಯಾಡಿತು. ನಡೆದ ಕಹಿಪ್ರಸಂಗವನ್ನು ಆ ತಿಳಿನಗೆ ತೇಲಿಸಿಬಿಟ್ಟಿತು.

" ನನ್ನ ಪ್ರಶ್ನೆಯೇ ಅದು " ಎಂದು ಆನಂದ ನಯವಾಗಿ ನಕ್ಕ.

ಪ್ರಸಂಗ ತೇಲಿಹೋದರೂ ಆನಂದನ ಸೂಕ್ಷ್ಮಬುದ್ಧಿಯ ಮೇಲೆ ಅದು ಗುರುತನ್ನು ಮಾಡಿತು. ಅಂತಹ ಹಲವು ಗುರುತುಗಳು ಅಲ್ಲಿ ಉಳಿದು ಹೋಗಿದ್ದವು. ಅವುಗಳ ಪರಿಣಾಮವಾಗಿ ಆನಂದನಲ್ಲಿ ಒಂದು ಭಾವನೆ ರೂಪ ತಾಳುತ್ತಿತ್ತು. ಆ ಭಾವನೆ ತನ್ನನ್ನೂ ಸರೋಜಳನ್ನೂ ಮತ್ತು ರಾಜುವನ್ನೂ ಬಳಸಿದ್ದಿತು.

ರಾಜುವಿನ ಪ್ರಾರ್ಥನೆಯಂತೆ ಸಂಜೆಯ ಸಮಾರಂಭದಲ್ಲಿ ನೆರವಾಗಲು ಇಂದಿರೆ ಮಧ್ಯಾಹ್ನವೇ ಕಲಾಮಂದಿರಕ್ಕೆ ಬಂದಳು. ಕಲಾಕೃತಿಗಳನ್ನು ಅಂದವಾಗಿ ಜೋಡಿಸಿಡುವ ಕಾರ್ಯದಲ್ಲಿ ಅವಳು ತೊಡಗಿದ್ದಳು. ರಾಜು ಅವಳ ರಸಾಭಿಜ್ಞತೆಯನ್ನು ಮೆಚ್ಚಿ ಅವಳ ಮನವೊಲಿಯುವಂತೆ ಅನೇಕ ಬಾರಿ ವ್ಯಕ್ತಪಡಿಸಿದ. ರಾಜುವಿನ ಮೆಚ್ಚಿಗೆ ಅವಳ ಮನದಲ್ಲಿ ಹಿತವಾದ ಭಾವನೆಗಳನ್ನು ಎಬ್ಬಿಸಿತು.

ಆ ಮಧ್ಯಾಹ್ನ ಅನೇಕ ಪ್ರಸಂಗಗಳಲ್ಲಿ ರಾಜು ಏಕಾಂತದಲ್ಲಿ ಇಂದಿರೆಯನ್ನು ಸಂಧಿಸಿದ್ದ. ಒಂದೊಂದು ಪ್ರಸಂಗವೂ ಅವನಿಗೆ ಸ್ವಪ್ನದಂತೆ ಕಂಡಿತು. ಆಗ ಇಂದಿರೆಯ ಹೃದಯ ಲೆಕ್ಕ ತಪ್ಪಿ ಮಿಡಿಯುತ್ತಿದ್ದುದನ್ನು ಅವನು ತಿಳಿದಿದ್ದ. ಆ ತಿಳಿವಳಿಕೆ ಅವನ ಮನಸ್ಸನ್ನು ಮತ್ತೂ ಅಸ್ಥಿರ ಮಾಡಿದ್ದಿತು. ತನ್ನ ಮನಸ್ಸಿನ ಅಸ್ಥಿರತೆಯೇ ಅವಳ ಮನಸ್ಸಿನ ಅಸ್ಥಿರತೆಗೆ ಸಾಕ್ಷಿಯೆಂದು ಅವನು ಊಹಿಸಿದ್ದ. ತಾನೊಬ್ಬ ಮೋಹಿನಿಯೊಡನೆ ರಹಸ್ಯದಲ್ಲಿ ಮಾತನಾಡುತ್ತಿದ್ದಂತೆ ಅವನಿಗೆ ಭಾವನೆಯಾಗುತ್ತಿತ್ತು.

ಇಂದಿರೆ ತನ್ನ ಕೆಲಸದಲ್ಲಿ ತೊಡಗಿದ್ದರೂ ಅವಳ ಮನಸ್ಸು ಪೂರ್ತಿಯಾಗಿ ಅಲ್ಲಿರಲಿಲ್ಲ. ಅದು ಹಂಚಿಹೋಗಿತ್ತು. ಪ್ರದರ್ಶನದ ಚಿತ್ರಗಳನ್ನೆಲ್ಲ ಕೂಡಿಸಿಯಾಯಿತು. ರಾಜು ಬೇರೆ ಕೆಲಸದಲ್ಲಿ ತೊಡಗಿದ್ದ. ರಾಜುವಿನ ಕಣ್ಣು ಇಂದಿರೆಯನ್ನು ಸತತವಾಗಿ ಸುತ್ತುಗಟ್ಟುತ್ತಿತ್ತು.

ಒಂದು ನೃತ್ಯಚಿತ್ರವನ್ನು ಇಂದಿರೆ ತೂಗಹಾಕುತ್ತಿದ್ದಳು. ಅರೆ ಎಚ್ಚರದಲ್ಲಿ ಅವಳ ಕೈಯಿಂದ ಚಿತ್ರ ಜಾರಿತು. ಕೆಳಗೆ ಬಿದ್ದ ಪಟ ಅಲ್ಲಿಯೇ ನಿಂತಿದ್ದ ರಾಜುವಿನ ಕಾಲನ್ನು ತಾಕಿತು. ಗಾಜು ಒಡೆದು ನುಚ್ಚುನೂರಾಯಿತು. ಅವನ ಕಾಲಿನ ಒಂದು ಬೆರಳು ಸ್ವಲ್ಪ ಕೆಂಪಾಯಿತು.

ಆ ದೃಶ್ಯವನ್ನು ನೋಡಿ ಇಂದಿರೆ ಕಕ್ಕಾಬಿಕ್ಕಿಯಾದಳು. ಕೆನ್ನೆ ಕೆಂಪೇರಿತು. ಮಾತಾಡಲೂ ತೋಚಲಿಲ್ಲ.

"ನನ್ನ ಅಜಾಗರೂಕತೆಯಿಂದ ನಿಮ್ಮ ಕಾಲಿಗೆ ಪೆಟ್ಟಾಯಿತು."

ಇಂದಿರೆಯ ಮಾತಿನಲ್ಲಿ ಅಡಗಿದ್ದ ಪಶ್ಚಾತ್ತಾಪದ ಧ್ವನಿ ಅವನ ಮನಸ್ಸನ್ನು ಮುಟ್ಟಿತು. ಕನಿಕರವುಂಟಾಯಿತು. ಅವನ ಮನಸ್ಸು ಪೂರ್ತಿಯಾಗಿ ಇಂದಿರೆಯನ್ನು ಬಳಸಿದ್ದುದರಿಂದ ತನ್ನ ಕಾಲಿನ ನೋವು ತನಗೇ ಅರಿವಾಗಲಿಲ್ಲ. ಅರಳುಮೊಗದಿಂದ ಅವನು ಇಂದಿರೆಯ ಮಾತಿಗೆ ಉತ್ತರ ಕೊಟ್ಟ :

"ನನ್ನ ಕಾಲಿಗೆ ಏನೂ ಪೆಟ್ಟಾಗಲಿಲ್ಲ. ಆದರೆ ಈ ಚಿಕ್ಕ ವಿಷಯದಿಂದ ನಿಮ್ಮ ಮೃದು ಮನಸ್ಸಿಗೆ ಬಹಳ ಪೆಟ್ಟಾಗಿರುವಂತಿದೆ" ಎಂದು ಚದುರಿದ್ದ ಗಾಜಿನ ಚೂರುಗಳನ್ನು ಆರಿಸತೊಡಗಿದ.

"ಪಟವನ್ನು ಒಡೆದವಳು ನಾನು, ಗಾಜನ್ನು ನೀವು ಆರಿಸುವುದೆ?" ಎಂದು ಇಂದಿರೆ ಕೂಡಲೆ ಅವನ ಹತ್ತಿರ ಸರಿದು ನಯವಾಗಿ ನುಡಿದಳು. ಅವಳ ತುಟಿಯ ಮೇಲೆ ತಿಳಿನಗೆ ನರ್ತಿಸಿತು.

'ಎಂತಹ ಮೋಹ, ಆ ನಗುವಿನಲ್ಲಿ!' ಎನ್ನುವಂತೆ ರಾಜು ದೃಷ್ಟಿ ಬೀರಿದ.

ಮಾತನಾಡುತ್ತಿರುವಂತೆ ರಾಜು ಗಾಜಿನ ಚೂರುಗಳನ್ನೆಲ್ಲ ಆರಿಸಿದ. ತಾನೇ ಆ ಕೆಲಸವನ್ನು ಮಾಡಿದುದರಲ್ಲಿ ಅವನಿಗೆ ಏನೋ ಹಿತಾನುಭವವಾಯಿತು.

'ನನ್ನ ಅಜಾಗರೂಕತೆಯಿಂದ ನಿಮ್ಮ ಕಾಲಿಗೆ ಪೆಟ್ಟಾಯಿತು' ಎಂದು

ಇಂದಿರೆ ನುಡಿದ ಮಾತು ಅವನ ಮನಸ್ಸಿನಲ್ಲಿ ಪುನಃ ಪುನಃ ಸುತ್ತಾಡಿತು. ಇಂದಿರೆ ತಾನು ಅಜಾಗರೂಕಳಾಗಿದ್ದುದನ್ನು ಆಗಲೇ ಒಪ್ಪಿಕೊಂಡಿದ್ದಳು. ಅಜಾಗರೂಕಳಾಗಲು ಅವಳ ಮನಸ್ಸು ಬೇರೆ ಎಲ್ಲಿಯೋ ಸುಳಿದಿರಬೇಕು. ಆ ಭಾವನೆ ಹೊಳೆದಾಗ ರಾಜುವಿನ ಕಣ್ಣು ಎದುರಿಗೆ ಆಗತಾನೆ ಇಂದಿರೆ ತೂಗಹಾಕಿದ್ದ ಒಂದು ಚಿತ್ರಪಟದ ಕಡೆಗೆ ಹರಿಯಿತು. ಸುಂದರವಾದ ಒಂದು ಹೂವಿನ ಸುತ್ತಲೂ ರಸಾಸ್ವಾದನೆ ಮಾಡಲು ಸುತ್ತಾಡುತ್ತಿದ್ದ ದುಂಬಿಯ ಚಿತ್ರ ಅದು. ದುಂಬಿ ತನ್ನ ಹೃದಯದ ರಾಗಗಳನ್ನೆಲ್ಲ ತೋಡಿಕೊಳ್ಳುತ್ತಿರುವ ಭಾವ ಕಾಣುತ್ತಿತ್ತು. ಆ ಹೂವು ಬಿರಿದು ತನ್ನ ಪರಾಗಗಳನ್ನೆಲ್ಲ ಆ ದುಂಬಿಗಾಗಿ ನಿವೇದನ ಮಾಡಿಕೊಳ್ಳುತ್ತಿತ್ತು. ರಾಜು ಮೈಮರೆತಿದ್ದ.

ಪಟ ಒಡೆದ ಪ್ರಸಂಗದನಂತರ ರಾಜುವಿನ ಮುಖ ಹೆಚ್ಚು ಹಿಗ್ಗಿತು. ಅಷ್ಟು ಅಲ್ಪ ಪ್ರಕರಣ ತನ್ನ ಮತ್ತು ಇಂದಿರೆಯ ಅಂತರಂಗಗಳಿಗೆ ಅಷ್ಟು ಬೇಗ ಸೇತುವೆಯನ್ನು ಕಟ್ಟಿದುದು ಅವನಿಗೆ ಆಶ್ಚರ್ಯವಾಯಿತು. ಇಂದಿರೆಯ ಕೈಜಾರಿದ ಪಟ ತನ್ನ ಅದೃಷ್ಟವನ್ನು ಮತ್ತಷ್ಟು ದೂರ ತೇಲಿಸಿತೆಂದು ತಿಳಿದ. ಮೊದಲು ತಾನು ಪಶ್ಚಾತ್ತಾಪಪಟ್ಟ ಕೃತಿಗಾಗಿ ಇಂದಿರೆಯೂ ಪರಿಣಾಮದಲ್ಲಿ ಸಂತೋಷಪಟ್ಟಿರಬಹುದೆಂದು ಅವನು ಊಹಿಸಿದ.

ರಾಜು ಮತ್ತೆ ಕಾರ್ಯಕ್ರಮದ ಗಡಿಬಿಡಿಯಲ್ಲಿ ತೊಡಗಿದ. ವ್ಯವಸ್ಥೆಗಳು ಇನ್ನೂ ಮುಗಿದಿರಲಿಲ್ಲ. ಅವನ ಮತ್ತೊಂದು ಮನಸ್ಸು ಆ ಕಡೆಗೆ ಓಡಿತು.

## ೫೧

ರಾಜುವಿನ ಕಲಾಮಂದಿರ ಶೃಂಗಾರಚಿತ್ರಗಳಿಂದ ಶೋಭಾಯಮಾನವಾಗಿದೆ. ಕಲಾದೇವತೆ ಅಲ್ಲಿಯ ಆವರಣದಲ್ಲಿ ಮೈಗೂಡಿದ್ದಾಳೆ. ಚಿತ್ರ ಪ್ರದರ್ಶನಶಾಲೆ ಸಿದ್ಧಿ ಪಡೆದ ಕಲೋಪಾಸಕನ ತಪೋವನದಂತಿದೆ. ಮಧ್ಯ ರಂಗದಲ್ಲಿ ವರ್ಣರಂಜಿತ ಹನ್ನೆರಡು ಕಲಾಕೃತಿಗಳು ಪ್ರಜ್ವಲಿಸುತ್ತಿವೆ. ಆ ಚಿತ್ರ ಸಮೂಹವೇ ರಾಜು ಸಾಧಿಸಿದ್ದ ಅಮರಕಲೆಯ ಪ್ರತೀಕಗಳು.

ಆಹ್ವಾನಿತರೆಲ್ಲ ನೆರೆಯಲಾರಂಭಿಸಿದರು. ಸುಪ್ರಸಿದ್ಧ ಕಲಾವಿದರಾದ ಗಿರಿಜಾಶಂಕರ ಶರ್ಮರು ಸಮಾರಂಭದ ಅಧ್ಯಕ್ಷತೆ ವಹಿಸಲು ಒಪ್ಪಿದ್ದರು. ಶರ್ಮರು ಭಾರತೀಯ ಲಲಿತಕಲೆಯ ಪ್ರಗತಿಶೀಲಮಾರ್ಗದರ್ಶಕರಲ್ಲೊಬ್ಬರು.

ಅವರು ದಕ್ಷಿಣ ಭಾರತದ ಪ್ರವಾಸ ಕೈಗೊಂಡು ಬೆಂಗಳೂರಿಗೆ ಬಂದಿದ್ದರು. ಅವರ ಘನ ಅಧ್ಯಕ್ಷತೆಯಲ್ಲಿ ಒಂದು ತಿಂಗಳ ಹಿಂದೆ ನಡೆಯಬೇಕಾಗಿದ್ದ ಸಮಾರಂಭವನ್ನು ರಾಜು ಆ ದಿನಕ್ಕೆ ಮುಂದೆಹಾಕಿದ್ದ. ಅವರ ಪರಿಚಯಕ್ಕಾಗಿ ಪಟ್ಟಣದ ಅನೇಕ ಮಂದಿ ಗಣ್ಯವ್ಯಕ್ತಿಗಳು ಬಂದಿದ್ದರು. ಪ್ರೇಕ್ಷಕರ ಕಣ್ಣಿಗೆ ಮಂದಿರದಲ್ಲಿಯ ದೃಶ್ಯಗಳು ಒಂದು ಹಬ್ಬದಂತಿದ್ದವು.

ಶರ್ಮರು ಕಲಾಪ್ರದರ್ಶನವನ್ನು ಉದ್ಘಾಟಿಸಿದರು. ವ್ಯವಸ್ಥಾಪಕರೊಡನೆ ಸುತ್ತಾಡಿದರು. ರಾಜು ರಚಿಸಿದ್ದ ಅಜಂತದ ಚಿತ್ರಸಮೂಹವನ್ನು ಕಂಡು ಅವರು ಮಾರುಹೋದರು.

" ಈ ಚಿತ್ರಗಳಲ್ಲಿ ಅಸಾಧಾರಣ ಕಲಾಸ್ಫೂರ್ತಿಯಿದೆ " ಎಂದು ಹೃದಯದಾಳದಿಂದ ಹೊಗಳಿದರು.

ಶರ್ಮರಿಂದ ಬಂದ ಪ್ರಶಂಸೆ ರಾಜುವಿನ ಮನಸ್ಸನ್ನು ತಣಿಸಿತು. ಅವನಿಗೆ ತನ್ನ ಆದರ್ಶದ ತುತ್ತ ತುದಿಯನ್ನೇರಿದಂತಾಯಿತು.

ಸಮಾರಂಭದ ಅಂಗವಾಗಿ ರಾಜು ಒಂದು ನೃತ್ಯವನ್ನು ಏರ್ಪಡಿಸಿದ್ದ. ನೆರೆದಿದ್ದ ಬಹಳ ಮಂದಿ ನೃತ್ಯವನ್ನು ನೋಡಲು ಆಸಕ್ತರಾಗಿದ್ದರು.

ರಂಗದ ಬಳಿಯಲ್ಲಿ ಅಧ್ಯಕ್ಷರು ಅಗ್ರಸ್ಥಾನದಲ್ಲಿ ಮಂಡಿಸಿದರು. ಜನರು ಕಿವಿಯೊಡೆಯುವಂತೆ ಕರತಾಡನ ಮಾಡಿದರು. ಅನೇಕ ಮಂದಿ ಪ್ರಮುಖ ವ್ಯಕ್ತಿಗಳು ಅಧ್ಯಕ್ಷರ ಹತ್ತಿರ ಆಸನಗಳಲ್ಲಿ ಕುಳಿತಿದ್ದರು. ಅವರಲ್ಲಿ ಸುಂದರರಾಯರೂ ಒಬ್ಬರು. ಅವರ ಪಾರ್ಶ್ವದಲ್ಲಿಯೇ ಆನಂದ, ಸರೋಜ ಕುಳಿತಿದ್ದರು.

ನೃತ್ಯ ಪ್ರಾರಂಭವಾಗುವ ಮುಂಚೆ ರಾಜು ಸ್ವಾಗತ ಭಾಷಣವನ್ನು ಮಾಡಿದ. ಅಲ್ಲಿ ನೆರೆದಿದ್ದ ಸಾರ್ವಜನಿಕರನ್ನು ಉತ್ಸವಕ್ಕೆ ಸ್ವಾಗತಿಸಿದ. ಶರ್ಮರಂತಹ ಕಲಾವಿಮರ್ಶಕರು ಅಧ್ಯಕ್ಷರಾಗಿ ದೊರೆತುದು ತಮ್ಮೆಲ್ಲರ ಪುಣ್ಯವೆಂದು ಅವರಿಗೆ ಕೃತಜ್ಞತೆಯನ್ನು ತೋರಿ ಮಾತನ್ನು ಮುಗಿಸಿದ. ಆ ಕ್ಷಣ ರಾಮು ಒಂದು ದೊಡ್ಡ ಹೂಮಾಲೆಯೊಡನೆ ವೇದಿಕೆಯ ಮೇಲೆ ನಿಂತ. ಅವನು ರಾಜುವಿನ ಕಲಾಸೇವೆಯನ್ನು ಪ್ರಶಂಸಿಸಿ ಕಲಾಪ್ರೇಮಿಗಳ ಪರವಾಗಿ ಆ ಮಾಲೆಯನ್ನು ಅವನ ಕೊರಳಿಗೆ ಹಾಕಿದ. ಅದನ್ನು ರಾಜು ನಿರೀಕ್ಷಿಸಿರಲಿಲ್ಲ. ಸಭಾಂಗಣದಲ್ಲಿ ಆಗ ಹುಟ್ಟಿದ ಗದ್ದಲ ರಸ್ತೆಯ ಜನರನ್ನೆಲ್ಲ ಸೆಳೆಯಿತು.

ನೃತ್ಯ ಆರಂಭವಾಯಿತು. ಸ್ವಲ್ಪ ಹೊತ್ತಿನನಂತರ ಬೇರೆ ಕೆಲಸವಿದ್ದುದ

ರಿಂದ ಸುಂದರರಾಯರು ಎದ್ದು ಹೊರಡಲು ಸಿದ್ಧರಾದರು. ಆನಂದ ಅವರನ್ನು ಕಾರಿಗೆ ಹತ್ತಿಸಿದ. ಅವರು ಹೊರಡುವ ಮುಂಚೆ ರಾಜುವನ್ನು ನೋಡಲು ಇಷ್ಟಪಟ್ಟರು. ಅವನು ಒಳಗೇ ಇದ್ದ. ಆನಂದ ಅವನನ್ನು ಕರೆಯಲು ಒಳಗೆ ಹೋದ.

ಆನಂದ ನೃತ್ಯರಂಗದ ಪಕ್ಕದ ಕೋಣೆಯಲ್ಲಿ ನೋಡಿದ. ಅಲ್ಲಿ ರಾಜು ಇರಲಿಲ್ಲ. ಒಳಗಿನ ಕೋಣೆಯಲ್ಲಿರಬಹುದೆಂದು ಒಳಗೆ ಪ್ರವೇಶಿಸಿದ. ಅಲ್ಲಿ ಅವನು ಕಂಡ ದೃಶ್ಯ ಅವನ ಕಣ್ಣನ್ನು ಚುಚ್ಚಿತು. ನೇರವಾಗಿ ಅವನು ಸುಂದರ ರಾಯರ ಬಳಿ ಹಿಂತಿರುಗಿದ. ಸುಂದರರಾಯರಿಗೆ ಏನು ಹೇಳಬೇಕೆಂಬುದು ಅವನಿಗೆ ತೋಚಲಿಲ್ಲ. ರಾಜು ಏನೋ ಗಲಾಟೆಯಲ್ಲಿರುವುದಾಗಿ ತಿಳಿಸಿ ಸುಮ್ಮನಾದ.

"ಅವನಿಗೆ ತಿಳಿಸು" ಎಂದು ಹೇಳಿ ಸುಂದರರಾಯರು ಕಾರನ್ನು ಮುಂದಕ್ಕೆ ಬಿಟ್ಟರು. ಆನಂದ ಬಂದು ಆಸನದಲ್ಲಿ ಕುಳಿತ.

ಆನಂದ ಕೋಣೆಯಲ್ಲಿ ಕಂಡ ದೃಶ್ಯ ಅವನ ಸಂಶಯವನ್ನೆಲ್ಲ ಕಿತ್ತೆಸೆಯಿತು. ಅಲ್ಲಿ ರಾಜು ಮತ್ತು ಇಂದಿರೆ ಏಕಾಂತದಲ್ಲಿದ್ದರು. ಹೊರಗಿನ ಪ್ರಪಂಚವನ್ನು ಪೂರ್ತಿಯಾಗಿ ಮರೆತಿದ್ದರು. ಇಂದಿರೆಯ ಮನಸ್ಸು ಹರ್ಷದಲ್ಲಿ ತೂಗಾಡುತ್ತಿತ್ತು. ಕಲಾಪ್ರೇಮಿಗಳ ಪರವಾಗಿ ತನಗೆ ಹಾಕಿದ್ದ ಹೂಮಾಲೆಯನ್ನು ರಾಜು ಇಂದಿರೆಯ ಕುತ್ತಿಗೆಗೆ ಹಾಕುತ್ತಿದ್ದ. ಇಂದಿರೆಯ ಮುಖದ ಮೇಲೆ ಬಿದ್ದ ಬೆಳಕು ಅಲ್ಲಿ ತಿಳಿನಗೆಯನ್ನು ಹೊಮ್ಮಿಸುತ್ತಿತ್ತು.

ಒಂದು ರೀತಿಯಲ್ಲಿ ಆನಂದನಿಗೆ ಸಮಾಧಾನ ಹುಟ್ಟಿತು. ಇಂದಿರೆಯನ್ನು ಅವನು ನಂಬಿಸಿ ನಿರಾಶೆಗೊಳಿಸಿದ್ದ. ಅದರಿಂದ ಅವಳಿಗೆ ಮಾಯದ ಗಾಯವಾಗಿತ್ತು. ರಾಜುವಿನಿಂದಲಾದರೂ ಅವಳ ಬಾಳ ನೋವು ಆರುವುದಾದರೆ ಅದು ತನಗೆ ಸಂತೋಷದ ವಿಷಯವೆಂದು ಭಾವನೆಯಾಯಿತು. ಆದರೆ ಆ ಸಮಾಧಾನದಲ್ಲಿ ಸತ್ವವಿರಲಿಲ್ಲ. ಇಂದಿರೆ ತನ್ನನ್ನು ಪೂರ್ತಿಯಾಗಿ ಮರೆತಳೆಂದು ತಿಳಿದಾಗ ಆನಂದನಿಗೆ ಸಂಕಟವಾಯಿತು.

ತತ್ವಶಾಸ್ತ್ರಜ್ಞನಂತೆ ಆನಂದ ಆಲೋಚಿಸಿದ. ಮನುಷ್ಯನು ಮಮತೆಯ ಬಣ್ಣದ ಗಾಜುಗಳಿಂದ ಬಾಳನ್ನು ನೋಡುತ್ತಾನೆ. ಇಲ್ಲದ ರಂಗುಗಳು ಅವನ ಕಣ್ಣಿನಲ್ಲಿ ಸುಳಿದಾಡುವುವು. ಪ್ರೇಮದ ಬೇಗೆಯಲ್ಲಿ ಅವನು ಆಸೆ–ನಿರಾಶೆಗಳ

ಬಿಸಿಲುಗುದುರೆಯಿಂದ ತೊಳಲುತ್ತಾನೆ. ಬಾಳೊಂದು ಮಾಯೆಯ ತೋಟ, ಬಯಕೆಯ ಬೊಂತೆ. ಅಲ್ಲಿ ಬಣ್ಣ ಹತ್ತಿ ರಸ ತುಂಬಿ ಪಕ್ವವಾಗಿ ಬಗೆಬಗೆಯ ಹಣ್ಣುಗಳು ಕಾಣುವುವು. ಹಣ್ಣನ್ನು ಮುಟ್ಟಿದರೆ ಅದು ಮಣ್ಣಾಗುವುದು. ಹಸಿವು ಹಿಂಗುವುದಿಲ್ಲ. ಆನಂದನಿಗೆ ತಾನು ಕಟ್ಟಿಕೊಂಡಿದ್ದ ಆದರ್ಶಗಳ ನೆನಪಾಯಿತು. ನೆನಪಿನಲ್ಲಿಯೂ ಈಗ ಅವುಗಳಿಗೆ ಸ್ಥಳವಿಲ್ಲ. ಮನುಷ್ಯನು ಅಸಹಾಯಕನೆಂದೆನಿಸಿತು. ಯಾರೂ ಜಗತ್ತಿನ ವ್ಯಾಪಾರಗಳನ್ನು ನಿಲ್ಲಿಸ ಲಾರರು. ಆ ಚಕ್ರ, ವ್ಯಕ್ತಿಗಳ ಇಷ್ಟ–ಅನಿಷ್ಟಗಳನ್ನು ಮೀರಿ ಸಂತತವಾಗಿ ಸುತ್ತುವುದು. ಆನಂದನಿಗೆ ವಿರಾಟ್‌ಸೃಷ್ಟಿಯಲ್ಲಿ ತಾನೊಬ್ಬ ಅಲ್ಪಪ್ರಾಣಿ ಎಂದೆನಿಸಿತು.

ಪ್ರಕೃತ ವಿಚಾರದ ಕಡೆಗೆ ಅವನ ಮನಸ್ಸು ಹರಿಯಿತು. ತನ್ನಲ್ಲಿ ಮೂಡುತ್ತಿದ್ದ ಸಮಾಧಾನದಲ್ಲಿ ವಿವೇಕವಿದೆ ಎನಿಸಿತು. ಇಂದಿರೆ ಒಂದು ರೀತಿಯಲ್ಲಿ ಅವಳ ಬಾಳನ್ನು ತಿದ್ದಿಕೊಳ್ಳಬೇಕು. ಕಳೆದುಹೋದ ಒಂದು ಘಟನೆಯಿಂದ ಇನ್ನೂ ಉಳಿದಿರುವ ಉದ್ದವಾದ ಬದುಕನ್ನು ಅವಳು ಹಾಳು ಮಾಡಿಕೊಳ್ಳುವುದು ಅವಿವೇಕ. ಬದುಕಿನಲ್ಲಿ ಅನಿವಾರ್ಯವಾಗಿ ಆಗಿಹೋದು ದನ್ನು ಮರೆಯಬೇಕು. ಶಾಂತಿಯನ್ನು ತಂದುಕೊಳ್ಳಬೇಕು. ಆ ಯೋಚನೆ ಸುಳಿದಾಗ ಶಾಂತಿಯನ್ನು ಕಾಣದ ಅವನ ಮನಸ್ಸು ಬುಗುರಿಯಂತೆ ಸುತ್ತಿತು.

ಎರಡು ನೃತ್ಯಗಳು ಮುಗಿದವು. ಮುಂದಿನದು ತಾಂಡವನೃತ್ಯ. ಅದನ್ನು ನೋಡಲು ಪ್ರೇಕ್ಷಕರು ತಮ್ಮ ಕುತೂಹಲವನ್ನು ಕೈತಟ್ಟಿ ಹೊರಗೆಡಹಿದರು. ತೆರೆ ಓರೆಯಾಗುವವರೆಗೆ ಕಾಯಲು ಅವರಿಗೆ ಸಮಾಧಾನವಿಲ್ಲ. ಆ ಸಮಯ ದಲ್ಲಿ ಹಿಂದಿನ ಸಾಲಿನಲ್ಲಿ ಯಾರೋ ನಾಲ್ಕು ಮಂದಿ ಸಿರಿವಂತರು ರಾಜುವಿನ ವಿಷಯ ಮಾತನಾಡುತ್ತಿದ್ದುದನ್ನು ಆನಂದ ಕೇಳಿದ :

" ಈಗಿಷ್ಟು ವೈಭವ. ನಾಳೆಯ ಯೋಚನೆಯನ್ನೇ ಅವನು ಮಾಡಿಲ್ಲ."

" ಯೋಚನೆ ಏನು ಅವನಿಗೆ ? "

" ಕೋರ್ಟಿನಲ್ಲಿ ಕೇಸಿದೆ. ವ್ಯಾಜ್ಯದ ಹಣ ಮೂವತ್ತು ಸಾವಿರಕ್ಕೆ ಮೀರಿದೆ. ಕೋರ್ಟಿನ ಖರ್ಚು ಬೇರೆ. ಇನ್ನೂ ಏನೇನು ಸಾಲ ಇದೆಯೋ."

" ಅಷ್ಟೊಂದು ಹೊರೆ ಇದೆಯೆ ಅವನಿಗೆ ? "

" ಈ ಮಂದಿರವನ್ನು ಮಾರಿದರೂ ಅವನ ಸಾಲ ತೀರುವುದಿಲ್ಲ. ಕೇಸು

ತೀರ್ಮಾನವಾದರೆ ಅವನು ನಿರ್ಗತಿಕನಾಗಬೇಕಾಗುತ್ತೆ."

"ಕೇಸಿನಲ್ಲಿ ದ್ರೋಹ, ಫೋರ್ಜರಿ ಆರೋಪಣೆಗಳು ಬೇರೆ ಇವೆಯಂತೆ, ಹೌದೆ?" ಎಂದು ಕೇಳಿದರು ಬೇರೊಬ್ಬರು.

"ಕೇಸು ಕ್ರಿಮಿನಲ್ ರೂಪಕ್ಕೂ ತಿರುಗಬಹುದು, ಅವನಿಗೆ ಶಿಕ್ಷೆಯೂ ಆಗಬಹುದು, ಎಂದು ಮೊನ್ನೆಯ ದಿನ ವಕೀಲರೇ ಹೇಳಿದರು."

ಅವರು ರಾಜುವಿನ ವಿಚಾರವಾಗಿಯೇ ಮಾತನಾಡುತ್ತಿದ್ದುದೆಂಬುದು ಆನಂದನಿಗೆ ಸ್ಪಷ್ಟವಾಯಿತು. ತೆರೆಯನ್ನು ಎಳೆಯಲು ತಾಂಡವ ನೃತ್ಯದ ನಿಲುವನ್ನು ನೋಡುತ್ತ ಎಲ್ಲರೂ ನಿಶ್ಶಬ್ದರಾದರು.

ಆನಂದನ ತಲೆಯಲ್ಲಿ ಯೋಚನೆಗಳು ನಿಲ್ಲಲಿಲ್ಲ. ರಾಜುವಿಗೆ ಶೀಘ್ರದಲ್ಲಿಯೇ ಬರಲಿದ್ದ ದುರ್ಗತಿಯು ಅರಿವಾಯಿತು. ಅಂತಹ ಗತಿ ಬಂದೊದಗಿದರೆ ಸಮಾಜದಲ್ಲಿ ರಾಜು ತಲೆಯೆತ್ತುವಂತಿರಲಿಲ್ಲ. ಅವನು ಪರಿಸ್ಥಿತಿಯ ಪ್ರವಾಹದಿಂದ ಬಿಡಿಸಿಕೊಳ್ಳುವ ಸಾಧ್ಯತೆ ದೂರವಾಗಿತ್ತು. ಆನಂದನ ಅಂತಃಕರಣ ಆಗ ಇಂದಿರೆಗಾಗಿ ಮಿಡಿಯಿತು. ಹೆಪ್ಪುಗಟ್ಟಿದ್ದ ಅವನ ಸಮಾಧಾನ ಕೂಡಲೆ ಒಡೆದುಹೋಯಿತು. ರಾಜುವಿನಂತಹ ವ್ಯಕ್ತಿಯನ್ನು ನಂಬಿ ಇಂದಿರೆ ತನ್ನ ಹೊಸ ಆಸೆಗಳನ್ನು ಕಟ್ಟಿಕೊಂಡಿದ್ದಳು. ಆದುದರಿಂದ ಇಂದಿರೆಯ ಮುಂದಿನ ಬದುಕಿನಲ್ಲಿಯೂ ಸುಖವು ಬಿಸಿಲುಗುದುರೆಯಾಗಿಯೇ ಉಳಿಯಬಹುದೆಂದು ಆನಂದ ಮರಮರ ಮರುಗಿದ.

ತಾಂಡವ ನೃತ್ಯ ಮುಗಿದರೂ ಆನಂದನ ಯೋಚನೆ ಮುಗಿಯಲಿಲ್ಲ. ನೃತ್ಯದ ರುದ್ರಭಂಗಿ ಎಲ್ಲರ ಹೃದಯಗಳನ್ನೂ ಭೀತಿಗೊಳಿಸಿತು. ತೆರೆಯ ಹಿಂದಿನಿಂದ ಗುಡುಗಿನಂತೆ ವಾದ್ಯಗಳು ಕುಣಿತಕ್ಕೆ ಸರಿಯಾಗಿ ಮೊರೆದವು. ನೃತ್ಯ ಮುಗಿದರೂ ಕಿವಿಯಲ್ಲಿ ಝೇಂಕಾರ ಉಳಿಯಿತು. ಕೈತಟ್ಟುತ್ತಿದ್ದ ಜನರೊಂದಿಗೆ ಸರೋಜಳೂ ಕೈತಟ್ಟುತ್ತ ಆನಂದನ ಕಡೆಗೆ ನೋಡಿದಳು. ಆನಂದ ವಿಮುಖಮನಸ್ಕನಾಗಿದ್ದ. ಅವನು ಕೈತಟ್ಟಲಿಲ್ಲ. ಸರೋಜಳ ಸಂತೋಷ ತಕ್ಷಣ ಕುಗ್ಗಿತು. ಅಂತಹ ಸಂತೋಷಕೂಟದಲ್ಲಿಯೂ ಸಂತೋಷಪಡದ ಒಂದು ಪ್ರಾಣಿಯೊಡನೆ ತನ್ನ ಜೀವಿತವನ್ನೆಲ್ಲ ಕಳೆಯಬೇಕೆಂದು ಅವಳ ಮನಸ್ಸು ಮದ್ದಿನಂತೆ ಸಿಡಿಯಿತು.

"ನಿಮಗೆ ನೃತ್ಯ ಮೆಚ್ಚಿಗೆಯಾಗಲಿಲ್ಲವೆ?"

ಆನಂದ ಬಳಸಿ ಮಾತನಾಡಿದ.

" ಮೆಚ್ಚಿಗೆಯಾಗದೆ ಏನು ? ಇಷ್ಟು ಜನ ಮೆಚ್ಚಿರುವಾಗ ನನಗೆ ಮೆಚ್ಚಿಗೆ ಇಲ್ಲವೆ ? "

ಆ ಸಮಯದಲ್ಲಿ ಆನಂದ ಯೋಚಿಸುತ್ತಿದ್ದುದೇನು ಎಂಬುದು ಸರೋಜ ಳಿಗೆ ಸಮಸ್ಯೆಯಾಯಿತು. ಅವನ ಆಗಿನ ನಗುವಿನಲ್ಲಿ ಸಹಜತೆಯಿರಲಿಲ್ಲ.

ಕಾರ್ಯಕ್ರಮ ಮುಕ್ತಾಯವಾಯಿತು. ಹೊತ್ತು ಮೀರಿತ್ತು. ಶರ್ಮರು ನಾಲ್ಕೇ ಮಾತುಗಳಲ್ಲಿ ಉತ್ತಮ ಚಿತ್ರಕಲೆಯ ಲಕ್ಷಣಗಳನ್ನು ವಿಮರ್ಶಿಸಿದರು. ರಾಜುವಿನ ಕಲೆಯಲ್ಲಿ ಪಾಶ್ಚಿಮಾತ್ಯ ಚಿತ್ರಕಲೆ ಬೆರೆತಿರುವುದಾಗಿ ಸೂಚಿಸಿದರು. ಆದರೆ ಅವನು ರಚಿಸಿದ್ದ ಅಜಂತ ಚಿತ್ರಗಳಲ್ಲಿ ಅದ್ಭುತವಾದ ಸ್ವಚ್ಛಂದ ಸ್ಫೂರ್ತಿ ಯನ್ನು ಪ್ರಕಾಶಿಸಿರುವುದಾಗಿ ಅವನನ್ನು ಹೃತ್ಪೂರ್ವಕವಾಗಿ ಶ್ಲಾಘಿಸಿದರು. ಕಿವಿ ಸಿಡಿಯುವಂತೆ ಕರತಾಡನವಾಯಿತು. ಈ ಬಾರಿ ಆನಂದನೂ ಸರೋಜ ಳೊಡನೆ ಕೈತಟ್ಟುವುದನ್ನು ಮರೆಯಲಿಲ್ಲ.

ಸಭೆ ಚೆದುರಿತು. ಆನಂದ ಹೊರಡಲು ಆತುರನಾದ. ಸರೋಜ ಮತ್ತು ಆನಂದ ರಾಜುವನ್ನು ಸಂಧಿಸಿದಾಗ ಸುಶೀಲಾಬಾಯಿ ಮತ್ತು ಇಂದಿರೆ ಸ್ವಲ್ಪ ದೂರದಲ್ಲಿ ಮಾತನಾಡುತ್ತ ನಿಂತಿದ್ದರು. ರಾಜು ಜೊತೆ ಸೇರುತ್ತಲೂ ಸರೋಜಳ ಮುಖ ಅರಳಿತು. ಆನಂದ ಅವನ ಕೈಕುಲುಕಿ ಸರೋಜಳ ಕಡೆಗೆ ಹೊರಡಲು ನೋಡಿದ. ಅವಳ ಮುಖ ರಾಜುವಿನ ಕಡೆಗೆ ತಿರುಗಿದ್ದಿತು. ಮತ್ತೆರಡು ನಿಮಿಷ ಅವನು ರಾಜುವಿನೊಡನೆ ಮಾತನಾಡುತ್ತ ನಿಂತ. ಆಗ ಸುಶೀಲಾಬಾಯಿ ಮತ್ತು ಇಂದಿರೆ ಅವನ ದೃಷ್ಟಿಯನ್ನು ಸೆಳೆದರು. ತಕ್ಷಣ ಇಂದಿರೆಯ ಬಳಿಗೆ ಹಾರಿ ತನ್ನ ಕೃತ್ಯಕ್ಕಾಗಿ ಒಂದು ಬಾರಿಯಾದರೂ ಹೃದಯದ ಆಳದಿಂದ ಕ್ಷಮಾಪಣೆ ಯನ್ನು ಕೇಳಬೇಕೆನಿಸಿತು. ಆ ಸನ್ನಿವೇಶದಲ್ಲಿ ಆ ಸ್ವಾತಂತ್ರ್ಯ ಅವನಿಗಿರಲಿಲ್ಲ. ಅದೆಲ್ಲ ಬರಿಯ ಊಹೆಯಾಗಿ ಉಳಿಯಿತು. ಆನಂದ ಇಂದಿರೆಯ ಮುಖದ ಮೇಲೆ ನೋಟ ಬೀರಿದಾಗ ಇಂದಿರೆ ಅವನನ್ನು ನೋಡಿದಳು. ವಿದ್ಯುದ್ದೀಪ ದಲ್ಲಿ ಅವಳ ಮುಖವರ್ಣ ತೆರೆತೆರೆಯಾಗಿ ಬದಲಾವಣೆಯನ್ನು ಹೊಂದಿತು. ತಕ್ಷಣ ಇಂದಿರೆ ಒಳಗೆ ಹೊರಟುಹೋದಳು. ಆನಂದನಿಗೆ ಅವಳನ್ನು ಮತ್ತೊಂದು ಕ್ಷಣ ನೋಡಲಾಗಲಿಲ್ಲ.

ಸುಶೀಲಾಬಾಯಿ ಮನೆಗೆ ಹೊರಡುವಾಗ ಇಂದಿರೆಯನ್ನು ತಮ್ಮೊಡನೆ

ಕರೆದರು. ಅವಳು ತಮ್ಮ ಸಲಹೆಯನ್ನು ಒಪ್ಪದಿರಬಹುದೆಂದು ಅವರು ಊಹಿಸಿರಲಿಲ್ಲ. ಅಧ್ಯಕ್ಷರ ಕಾರಿನಲ್ಲಿ ರಾಜು ತನ್ನನ್ನು ಮನೆಮುಟ್ಟಿಸುವುದಾಗಿ ಇಂದಿರೆ ಹೇಳಿದಳು. ರಾಜು–ಇಂದಿರೆಯರ ಸ್ನೇಹ ಯಾವ ರೂಪವನ್ನು ತಾಳಿದೆ ಎಂಬುದನ್ನು ನಿಸ್ಸಂದೇಹವಾಗಿ ಸುಶೀಲಾಬಾಯಿ ಮನಗಂಡರು.

ಸಭಾಂಗಣ ಬರಿದಾಯಿತು. ಆನಂದ, ಸರೋಜ ಹೊರಟುಹೋಗಿ ಸ್ವಲ್ಪ ಹೊತ್ತಾಗಿತ್ತು. ಕೆಲವು ಮಂದಿ ಕಲಾಭಿಮಾನಿಗಳು ಅಧ್ಯಕ್ಷರೊಡನೆ ಮಾತನಾಡುತ್ತಿದ್ದರು.

ರಾಜು, ಇಂದಿರೆ ಇಬ್ಬರೇ ಕೊಟಡಿಯಲ್ಲಿದ್ದರು. ರಾಜುವಿನ ಕಣ್ಣಿಗೆ ಇಂದಿರೆ ಆಗ ಕಂಡಷ್ಟು ಮನಮೋಹಕವಾಗಿ ಎಂದೂ ಕಂಡಿರಲಿಲ್ಲ. ಅವನ ಮುಖದಲ್ಲಿ ಉನ್ಮಾದವಿತ್ತು. ಮಾತನಾಡಲು ಹೆಚ್ಚು ಹೊತ್ತು ಅವಕಾಶವಿರಲಿಲ್ಲ. ಅಧ್ಯಕ್ಷರೊಡನೆ ಹೊರಡಬೇಕಾಗಿತ್ತು.

" ನೀವೇ ನನ್ನ ಕಲೆಗೆ ಸ್ಫೂರ್ತಿ. ನನ್ನ ದೇವತೆ ನೀವು."

ಇಂದಿರೆ ನಿರುತ್ತರಳಾದಳು. ಮುಖದಲ್ಲಿ ಗುಲಾಬಿ ಮೂಡಿತು.

" ನಾನು ನಿಮ್ಮನ್ನು ಇನ್ನು ಏಕವಚನದಲ್ಲಿ ಮಾತನಾಡಿಸಬಹುದೆ ? "

ಮತ್ತೆ ನಿರುತ್ತರ.

ರಾಜು ಇಂದಿರೆಯ ಹೆಗಲ ಮೇಲೆ ತೋಳನ್ನು ಹಾಕಿದ.

ತಕ್ಷಣ ಬಾಗಿಲ ಬಳಿ ಯಾರೋ ಸುಳಿದಂತಾಯಿತು. ಇಬ್ಬರೂ ಎಚ್ಚರಗೊಂಡರು.

" ಅಧ್ಯಕ್ಷರು ಹೊರಡುತ್ತಾರೆ " ಎಂದು ಚಂದ್ರು ಹೇಳಿದ.

ರಾಜು, ಇಂದಿರೆ ಇಬ್ಬರೂ ಶರ್ಮರ ಬಳಿಗೆ ಹೋದರು. ಅವರು ಇನ್ನೂ ಕೆಲವು ವ್ಯಕ್ತಿಗಳೊಡನೆ ಮಾತನಾಡುತ್ತಿದ್ದರು. ಸ್ವಲ್ಪ ಹೊತ್ತಿನನಂತರ ಮೂವರೂ ಕಾರಿನಲ್ಲಿ ಹೊರಟರು.

## ೫೨

ಅಜಂತ ದಿನೋತ್ಸವದ ರಾತ್ರಿಯಲ್ಲಿ ಕೆಲವು ವ್ಯಕ್ತಿಗಳ ಅಂತರಂಗ ಬಹಿರಂಗವಾಯಿತು. ರಾಜು–ಇಂದಿರೆಯರ ಪ್ರೇಮ ಆನಂದನಿಗೆ ಖಚಿತವಾಯಿತು. ಸುಶೀಲಾಬಾಯಿಗೂ ವ್ಯಕ್ತವಾಯಿತು.

ಆನಂದನ ಮನಸ್ಸು ಪರಿವರ್ತನೆಯಾಯಿತು, ಅವನು ಕಂಡ ದೃಶ್ಯದಿಂದ. ಬಹುಶಃ ಇಂದಿರೆ ತನ್ನನ್ನು ಎಂದೋ ಮರೆತಿರಬಹುದು. ಅವಳ ಜೀವನದಲ್ಲಿ ತಾನು ಊಹಿಸಿಕೊಂಡಷ್ಟು ಮುಖ್ಯವಾದ ವ್ಯಕ್ತಿ ತಾನಾಗಿರಲಿಲ್ಲ. ಅಳತೆ ಮೀರಿದ ಆತ್ಮವಿಶ್ವಾಸವೇ ತನ್ನ ಆ ತಪ್ಪು ಭಾವನೆಗೆ ಕಾರಣವಿರಬಹುದು.

ಇಂದಿರೆಯ ವಿಚಾರದೊಂದಿಗೆ ಸರೋಜಳ ವಿಚಾರವೂ ಅವನ ಮನಸ್ಸಿನಲ್ಲಿ ಮೂಡಿತು. ಇಂದಿರೆ ಅಷ್ಟೊಂದು ರೂಪವತಿಯಾಗಿರದಿದ್ದರೆ ತಾನು ಅವಳಲ್ಲಿ ಅಷ್ಟು ಅನುರಾಗಿಯಾಗುವುದು ಅಸಂಭವವಾಗುತ್ತಿತ್ತೆಂದು ತೋರಿತು. ಆಗ ತನ್ನಲ್ಲಿಯೇ ದುರ್ಬಲತೆ ಕಾಣಿಸಿತು. ಸರೋಜ ಅಗ್ನಿಸಾಕ್ಷಿಯಾಗಿ ತನ್ನ ಕೈಹಿಡಿದ ಧರ್ಮಪತ್ನಿ. ತಮ್ಮಿಬ್ಬರ ಮಧ್ಯೆ ಬೆಳೆದಿದ್ದ ಮಾನಸಿಕ ಭಿನ್ನತೆಗೆ ಹೆಚ್ಚು ಕಾರಣನಾಗಿದ್ದುದು ತಾನೇ. ಆ ತಪ್ಪನ್ನು ತಾನು ತಿದ್ದಿಕೊಳ್ಳಬೇಕು. ಇಂದಿರೆಯೂ ತನ್ನನ್ನು ಮನಸ್ಸಿನಿಂದ ತಳ್ಳಿಹಾಕಿರಬಹುದು. ಬಹುಶಃ ಪೂರ್ತಿಯಾಗಿ ತಳ್ಳಿಹಾಕಿರಲಾರಳು! ಆ ಯೋಚನೆ ಅವನಿಗೆ ಬೇಕಾಗಿರಲಿಲ್ಲ. ಅವನ ಮನಸ್ಸಿನಲ್ಲಿ ಒಂದು ಹೊಸ ನೀತಿ ಉದಯವಾಯಿತು.

ಆನಂದ ಊಟ ಮಾಡಿ ಕಾಲೇಜಿಗೆ ಹೊರಡಲು ಉಡುಪನ್ನು ಧರಿಸುತ್ತಿದ್ದ. ಅಂಚೆಯವನು ಒಂದು ಪತ್ರವನ್ನು ಅವನ ಮುಂದೆಸೆದ. ಪತ್ರ ದೇವನಹಳ್ಳಿಯಿಂದ ಬಂದಿದ್ದಿತು. ಪದ್ಮ ಬರೆದಿದ್ದಳು.

ಅಣ್ಣಾ,

ನಿನ್ನ ನಿರ್ಭಾಗ್ಯಳಾದ ತಂಗಿ ಬಹಳ ಕಾಲದಿಂದ ನಿನಗೆ ಕಾಗದ ಬರೆಯಲಿಲ್ಲ. ಕ್ಷಮಿಸು. ನೀನು ಎಷ್ಟು ಕಾಗದಗಳನ್ನು ಬರೆದೆಯೋ ನನಗೆ ತಿಳಿಯದು. ನೀನು ನನಗಾಗಿ ಐವತ್ತು ರೂಪಾಯಿಗಳನ್ನು ಕಳುಹಿಸಿದ ಸಮಾಚಾರ ಆಕಸ್ಮಿಕವಾಗಿ ನನಗೆ ತಿಳಿಯಿತು. ಒಂದು ದಿನ ಕೆರೆಯಲ್ಲಿ ಬಟ್ಟೆ ತೋಯಿಸುತ್ತಿದ್ದಾಗ ಅವರ ಅಂಗಿ ಜೇಬಿನಲ್ಲಿ ರಶೀತಿ ಮಾತ್ರ ನನಗೆ ಸಿಕ್ಕಿತು. ಈ ವಿಚಾರವನ್ನು ಅವರು ನನಗೆ ತಿಳಿಸಲಿಲ್ಲ. ಹಣ ನನಗೇಕೆ? ಅದರಿಂದ ನನಗೆ ಇಲ್ಲಿ ಉಪಯೋಗವೇನು? ಕಾಗದವನ್ನು ಬರೆಯುವಂತೆ ತಿಳಿಸಿರುವೆ. ನನ್ನಿಂದ ನೀನು ಕಾಗದ ನಿರೀಕ್ಷಿಸಲೇಬೇಡ. ನನಗೆ ಕಾಗದ ತಂದುಕೊಡುವವರು ಯಾರು?

ಅಂಚೆಗೆ ಹಾಕುವವರು ಯಾರು? ಗುಟ್ಟಾಗಿ ನಿನಗೆ ಈ ಪತ್ರ ಬರೆದೆನೆಂದು ಮನೆಯಲ್ಲಿ ತಿಳಿದರೆ ನನಗೆ ಉಳಿಗಾಲವುಂಟೆ! ನನ್ನ ಗೆಳತಿ ಜಾನಕಿ ಈ ಕವರನ್ನು ತಂದುಕೊಟ್ಟು ಅಂಚೆಗೆ ಹಾಕದಿದ್ದರೆ ಈ ಪತ್ರವನ್ನೂ ನಾನು ಬರೆಯಲಾಗುತ್ತಿರಲಿಲ್ಲ. ಅವಳು ಇನ್ನು ಎರಡು ದಿನದಲ್ಲಿ ಗಂಡನ ಮನೆಗೆ ಹೊರಟುಹೋಗುತ್ತಾಳೆ. ನನಗೆ ಇಲ್ಲಿ ಇನ್ನು ಯಾರೂ ಗೆಳತಿಯರಿಲ್ಲ.

ಬಹಳ ದಿನಗಳ ಹಿಂದೆ ಸಂಪಿಗೆಯಿಂದ ಬಂದಿದ್ದ ಒಂದು ಪತ್ರ ನನ್ನ ಕಣ್ಣಿಗೆ ಬಿದ್ದಿತು. ಅದರಲ್ಲಿ ಅಮ್ಮನ ಅನಾರೋಗ್ಯದ ಸುದ್ದಿಯಿತ್ತು. ಸಂತೋಷದ ಒಂದು ಸಂಗತಿಯೂ ಇರಲಿಲ್ಲ. ನಾನು ನನ್ನಷ್ಟಕ್ಕೆ ದುಃಖಿಸಿದೆ. ಇಲ್ಲಿ ನನಗೆ ಅಳುವುದಕ್ಕೂ ಸ್ವಾತಂತ್ರ್ಯವಿಲ್ಲ.

ಮಲ್ಲಿಗೆಹಳ್ಳಿಯ ಜಾತ್ರೆಗೆ ಹೋಗಿದ್ದೆವು. ಅಲ್ಲಿ ನನಗೆ ಜ್ವರ. ಜ್ವರದಲ್ಲಿಯೇ ಸಂಪಿಗೆಗೆ ಕಾಗದ ಬರೆದೆ. ಅಪ್ಪ ನನ್ನ ಗತಿಗಾಗಿ ನೊಂದಿರಬಹುದು. ಅಲ್ಲಿಂದ ಇನ್ನೂ ಕಾಗದವಿಲ್ಲ. ಕಾಗದವಿಲ್ಲವೆಂದು ನಾನು ಹೇಗೆ ಹೇಳಲಿ? ನನ್ನ ಪಾಲಿಗೆ ಇಲ್ಲ! ನನ್ನ ಗೋಳನ್ನು ತಿಳಿದು ನೀನಾದರೂ ಏನು ಮಾಡಲಾದೀತು? ನಾನು ಪತ್ರ ಬರೆಯಲು ಇಷ್ಟಪಡುವುದೇ ಇಲ್ಲ. ನನ್ನ ದುಃಖವನ್ನು ಸುಮ್ಮನೆ ಎಲ್ಲರಿಗೂ ಹಂಚಿದರೆ ನನಗಾಗುವ ಸಮಾಧಾನವೇನೂ ಇಲ್ಲ. ದೈವ ನನ್ನ ಬದುಕಿನಲ್ಲಿ ಸ್ವಲ್ಪವೂ ಸುಖವನ್ನು ಇಡಲಿಲ್ಲ.

ಅತ್ತಿಗೆಗೆ ನನ್ನ ನಮಸ್ಕಾರಗಳು.

ನೊಂದ ನಿನ್ನ ತಂಗಿ,
**ಪದ್ಮ**

ಕಾಗದವನ್ನು ನೋಡಿ ಸರೋಜಳೂ ಪದ್ಮಳಿಗಾಗಿ ಮರುಗಿದಳು.

“ಪದ್ಮಳನ್ನು ಬೆಂಗಳೂರಿಗೆ ಎರಡು ದಿನ ಕರೆದುಕೊಂಡು ಬನ್ನಿ” ಎಂದಳು.

ಹೆಂಡತಿಯ ಬಾಯಿಂದ ಬಂದ ಮರುಕದ ಮಾತು ಆನಂದನ ಮನಸ್ಸನ್ನು ಸ್ವಲ್ಪ ಹಗುರ ಮಾಡಿತು. ಕಾಲೇಜಿಗೆ ಹೊತ್ತಾಯಿತು. ಆನಂದ

ಸೈಕಲ್ ತಳ್ಳಿಕೊಂಡು ಮನೆಯಿಂದ ಹೊರಬಿದ್ದ.

ದೇವನಹಳ್ಳಿಯ ಕಾಗದ ಆ ದಿನವೆಲ್ಲ ಆನಂದನ ಮನಸ್ಸನ್ನು ತೊಳಲಿಸಿತು. ತಂಗಿಯ ಬಾಳು ನಿರಂತರ ದುಃಖಕ್ಕೆ ಸಿಕ್ಕಿದ್ದಿತು. ತನ್ನ ಮದುವೆಯಿಂದ ಉದ್ದೇಶಿಸಿದ ಆಸೆ ಬರಿದಾಯಿತು ಎಂದೆನಿಸಿತು.

ಆ ಮಧ್ಯಾಹ್ನ ಕಾಲೇಜಿನ ವಿರಾಮಕಾಲದಲ್ಲಿ ಆನಂದ ಪೋಸ್ಟಾಫೀಸಿಗೆ ಹೋಗಿ ಪದ್ಮಳ ಹೆಸರಿಗೆ ಐವತ್ತು ರೂಪಾಯಿಗಳನ್ನು ಕಳುಹಿಸಿದ. ಆ ಹಣದಿಂದ ಅಷ್ಟು ಹಾಲು ಹಣ್ಣುಗಳನ್ನು ತೆಗೆದುಕೊಳ್ಳುವಂತೆ ಬರೆದ. ಹಣ ಪದ್ಮಳಿಗಾಗಿ ವ್ಯಯ ಆಗುವುದೇ ಎಂಬ ಸಂದೇಹ ಅವನಿಗಿದ್ದೇ ಇದ್ದಿತು. ಆದರೂ ಹಣವನ್ನು ಕಳುಹಿಸುವವರೆಗೆ ಅವನ ಹೃದಯಕ್ಕೆ ಸಮಾಧಾನವಾಗಲಿಲ್ಲ. ಬೆಂಗಳೂರಿಗೆ ಎರಡು ದಿನ ಪದ್ಮಳನ್ನು ಕಳುಹಿಸುವುದಾದರೆ ದೇವನಹಳ್ಳಿಗೆ ತಾನೇ ಹೋಗಿ ಅವಳನ್ನು ಕರೆದುಕೊಂಡು ಬರುವುದಾಗಿ ನಾಣಿಗೂ ಕಾಗದ ಬರೆದ.

ಕಾಲೇಜು ಮುಗಿಯುತ್ತಲೂ ಆನಂದ ನೇರವಾಗಿ ಮನೆಗೆ ಬಂದ. ಹೂತೋಟದಲ್ಲಿ ಇಬ್ಬರೂ ಕುಳಿತರು. ಆಕಾಶದಲ್ಲಿ ಬಿಳಿ ಮೋಡಗಳು ಪದರ ಪದರವಾಗಿ ಒಡೆದು, ಕೂಡಿ ಸುತ್ತಾಡುತ್ತಿದ್ದವು. ಅಸ್ತಮ ಸೂರ್ಯನು ಕಪ್ಪೇರಿದ ಮೋಡದ ತೆಕ್ಕೆಯಲ್ಲಿ ಸಿಕ್ಕಿಬಿದ್ದಿದ್ದನು. ವಾತಾವರಣ ತಣ್ಣಗಿದ್ದಿತು. ಪಕಳೆಗಳು ಅರಳಿ ನಲಿದಾಡುತ್ತಿದ್ದ ಪುಷ್ಪಗಳು ಹೊಸ ಜೀವರಸದಲ್ಲಿ ಅದ್ದಿ ತೆಗೆದಂತಿದ್ದವು. ಕಾಫಿಬಟ್ಟಲಿನ ಮೇಲೆ ಇಬ್ಬರೂ ಕೈಹಾಕಿದರು.

"ಕಾಫಿ ಸ್ವಲ್ಪ ಬಿಸಿ ಮಾಡಲೆ?"

ಸರೋಜಳ ಆದರದ ಮಾತು ಆನಂದನನ್ನು ಹರ್ಷಗೊಳಿಸಿತು.

"ಬಿಸಿ ಇದೆ ಸರೋಜ, ಕೂಡು."

"ನಿಮ್ಮ ಮನಸ್ಸಿನ ಕಸವಿಸಿ ಇನ್ನೂ ಹೋಗಿಲ್ಲ."

"ಕಸವಿಸಿ ಏಕೆ?" ತಿಳಿದೂ ಆನಂದ ಕೇಳಿದ.

"ದೇವನಹಳ್ಳಿಯ ಕಾಗದದಿಂದ ನಿಮ್ಮ ಮನಸ್ಸು ನೊಂದಿರಬಹುದು."

"ಮಧ್ಯಾಹ್ನ ಪದ್ಮಳಿಗೆ ಐವತ್ತು ರೂಪಾಯಿಗಳನ್ನು ಮನಿಯಾರ್ಡರ್ ಮಾಡಿದೆ."

"ಹಣ ಅವಳ ಕೈಸೇರಬೇಕಲ್ಲಾ!"

" ಅವಳ ಹೆಸರಿಗೇ ಕಳಿಸಿದ್ದೇನೆ."

" ಕೈಸೇರಿದರೂ ಅವಳದಾಗುವುದು ಸಂದೇಹವೇ."

" ನಾಣಿಗೂ ಬರೆದಿದ್ದೇನೆ."

" ಅದರಿಂದ ಇನ್ನೂ ರಂಪೇ ಆಗಬಹುದು."

ಸುಂದರರಾಯರ ಮನೆಯಲ್ಲಿದ್ದಾಗಲೇ ನಾಣಿಯ ಸ್ವಭಾವಪರಿಚಯ ಸರೋಜಳಿಗೆ ಆಗಿತ್ತು.

" ಪದ್ಮಳನ್ನು ಇಲ್ಲಿಗೆ ಎರಡು ದಿನ ಕಳಿಸುವ ಹಾಗೆ ಬರೆದಿದ್ದೇನೆ."

" ಅವನೆಲ್ಲಿ ಉತ್ತರ ಬರೆಯುತ್ತಾನೆ ? ದೇವನಹಳ್ಳಿಗೆ ನೀವೇ ಹೋಗಿ ಒಂದು ಮಾತು ಕೇಳಿದರೆ ಕಳುಹಿಸಬಹುದು, ಅಷ್ಟೆ."

ಸರೋಜ ವಾಸ್ತವವಾಗಿ ಮಾತನಾಡಿದಳು. ಆದರೆ ತನ್ನ ಪತ್ರಕ್ಕೆ ಉತ್ತರ ಬಾರದಿರುವಾಗ ತಾನೇ ಹೋಗಿ ಕೇಳುವುದು ಆನಂದನಿಗೆ ಸಂಕೋಚ ವಾಯಿತು.

" ನನ್ನ ಎರಡು ಕಾಗದಕ್ಕೂ ಉತ್ತರವೇ ಇಲ್ಲದಿರುವಾಗ ನಾನೇ ಹೋಗಿ ಹೇಗೆ ಮಾತೆತ್ತಲಿ ? ಅದರಿಂದ ಪ್ರಯೋಜನ ಆಗುತ್ತದೆಯೆ ? "

" ನೀವು ಹೀಗೆ ಯೋಚನೆಮಾಡಿದರೆ ಖಂಡಿತ ಪ್ರಯೋಜನ ಆಗುವುದೇ ಇಲ್ಲ."

" ಎರಡು ದಿನ ಕಾಯೋಣ. ನಾಣಿಯಿಂದ ಈ ಕಾಗದಕ್ಕಾದರೂ ಜವಾಬು ಬಂದೀತೇನೊ ? "

' ಬರುವುದೇ ಇಲ್ಲ ' ಎನ್ನುವ ನೋಟವನ್ನು ಸರೋಜ ಬೀರಿದಳು.

ಸರೋಜಳ ಮಾತಿನಲ್ಲಿ ಪದ್ಮಳಿಗಾಗಿ ಇದ್ದ ವಿಶ್ವಾಸ ಆನಂದನಿಗೆ ಗೋಚರವಾಯಿತು.

ಆನಂದ ಕೈಗಡಿಯಾರದ ಕಡೆ ನೋಡಿದ. ಹೊತ್ತು ಐದೂವರೆಯಾಗಿತ್ತು. ಬೇಸರದಿಂದ ಮೈ ಚಾಚಿದ.

" ಒಂದು ಚಿತ್ರವನ್ನಾದರೂ ನೋಡೋಣ ಸರೋಜ, ಹೊರಡು " ಎಂದು ಹರ್ಷಚಿತ್ತದಿಂದ ಸಲಹೆ ಮಾಡಿದ.

ಸಲಹೆ ಸರೋಜಳಿಗೆ ಪ್ರಿಯವಾಗಿತ್ತು. ಒಲವಿನಿಂದ ಸಮ್ಮತಿಸಿ ಜಿಂಕೆ ಮರಿಯಂತೆ ಒಳಗೆ ಓಡಿದಳು. ಆನಂದನ ಕಣ್ಣು ಅವಳನ್ನು ಹಿಂಬಾಲಿಸಿತು.

೫೩

ಕಲಾಶಾಲೆಯಲ್ಲಿ ರಾಜು ಒಬ್ಬನೇ ಕುಳಿತಿದ್ದಾನೆ. ಯೋಚನಾಪರನಾಗಿದ್ದಾನೆ. ಕೋರ್ಟಿನಲ್ಲಿ ನಡೆಯುತ್ತಿದ್ದ ಕೇಸಿನ ಯೋಚನೆ. ಸಮುದ್ರದ ಅಲೆಯಂತೆ ಅದೇ ಚಿಂತೆ ಮನಸ್ಸನ್ನು ಅಪ್ಪಳಿಸುತ್ತಿದೆ. ಅದೇ ಸಮಯಕ್ಕೆ ಚಂದ್ರು ಯಾವುದೋ ಕಾಗದದೊಡನೆ ಅವನ ಬಳಿಗೆ ಬಂದ. ಕೆಲ ಕ್ಷಣಗಳಾದರೂ ರಾಜು ಅವನನ್ನು ಮಾತನಾಡಿಸಲಿಲ್ಲ.

"ಬೊಂಬಾಯಿಂದ ಬಣ್ಣದ ಪಾರ್ಸಲ್ ಬಂದಿವೆ. ಪೋಸ್ಟಾಫೀಸಿಗೆ ಹೋಗುತ್ತೇನೆ. ತರಲೇ ?" ಎಂದು ಚಂದ್ರು ಕೇಳಿದ.

ರಾಜು ಚಂದ್ರುವನ್ನು ಬಿರುನೋಟದಿಂದ ನೋಡಿದ. ವಾರದ ಹಿಂದೆ ರಾಜುವೇ ಬಣ್ಣಗಳಿಗೆ ಬರೆದಿದ್ದ. ಹಸುರು ಬಣ್ಣವಿಲ್ಲದೆ ಕೆಲವು ಚಿತ್ರಗಳು ಪೂರ್ತಿಯಾಗದೆ ಉಳಿದಿದ್ದವು. ಈಗ ಚಂದ್ರು ಬಂದು ಬಣ್ಣಗಳು ಬಂದಿರುವುದಾಗಿ ತಿಳಿಸಿದಾಗ ರಾಜು ವಿಚಿತ್ರವಾಗಿ ವರ್ತಿಸಿದ. ಅದಕ್ಕೆ ಕಾರಣ ಅವನ ಆರ್ಥಿಕ ಮುಗ್ಗಟ್ಟು. ಅಂಚೆಯ ವೆಚ್ಚಕ್ಕೂ ಅವನಲ್ಲಿ ಆಗ ಹಣವಿರಲಿಲ್ಲ. ಅವನು ಯಾವ ಉತ್ತರವನ್ನೂ ಹೇಳದೆ ಹುಬ್ಬುಗಂಟಿಕ್ಕಿಕೊಂಡು "ಸರಿ" ಎಂದು ಸುಮ್ಮನಾದ.

ರಾಜುವಿನ ಅಸಹಾಯಕತೆ ಸಿಟ್ಟಿನ ರೂಪ ತಾಳಿತು. ಚಂದ್ರುವಿಗೆ ಅವನ ನಡತೆ ಸರಿಯೆನಿಸಲಿಲ್ಲ. ಚಂದ್ರು ಮರುಮಾತನಾಡದೆ ಕೊಟಡಿಯಿಂದ ಹೊರಟು ಹೋದ. ಇತ್ತೀಚೆಗೆ ಅವನಿಗೆ ರಾಜುವಿನ ಮನೋಗತಿಯೇ ಅರ್ಥವಾಗುತ್ತಿರಲಿಲ್ಲ. ಒಂದೊಂದು ಸಮಯ ಹರ್ಷದಿಂದ, ಒಂದೊಂದು ಸಮಯ ದೈನ್ಯದಿಂದ ಮತ್ತೊಂದು ಸಮಯ ಕೋಪದಿಂದ ಮಾತನಾಡುತ್ತಿದ್ದ. ಚಂದ್ರುವಿಗೆ ಅದರಂತೆ ನಡೆದುಕೊಳ್ಳುವುದು ಕಷ್ಟವಾಯಿತು.

ಚಂದ್ರು ಕೊಟಡಿಯನ್ನು ದಾಟಿ ನಾಲ್ಕು ಹೆಜ್ಜೆಯಿಡುತ್ತಲೇ ಇಂದಿರೆ ಬಂದಳು. ಅವಳನ್ನು ಒಳಗೆ ಕರೆದುಕೊಂಡು ಹೋದ. ಅವಳು ಕೊಟಡಿಯೊಳಕ್ಕೆ ಕಾಲಿಡುತ್ತಲೇ ಅಲ್ಲಿ ಆವರಿಸಿದ್ದ ಚಿಂತೆಯ ತೆರೆಗಳು ದೂರ ಸಿಡಿದು ಹೋದವು. ಅವನ ಮುಖ ಪ್ರಫುಲ್ಲವಾಯಿತು. ಇಂದಿರೆ ಕುರ್ಚಿಯ ಮೇಲೆ ಕುಳಿತುಕೊಳ್ಳುವುದನ್ನೇ ನೋಡಿದ. ಚಂದ್ರುವಿಗೆ ಕಾಫಿಯನ್ನು ತರಹೇಳಿದ. ರಾಜುವಿನ ಮನಸ್ಸು ಅಷ್ಟು ವೇಗವಾಗಿ ತೃಪ್ತಿ–ಅತೃಪ್ತಿಗಳ ನಡುವೆ ತೂಗಾಡು

ವುದು ಚಂದ್ರುವಿಗೆ ಅಸಹಜವೆನಿಸಿತು. ಅಷ್ಟು ವಿಚಿತ್ರವಾಗಿ ಅವನ ಮನಸ್ಸನ್ನು ರೂಪಾಂತರಗೊಳಿಸುವ ಶಕ್ತಿ ಇಂದಿರೆಯ ರೂಪವೇ ಎಂಬುದನ್ನು ಅವನು ಎಂದೋ ತಿಳಿದಿದ್ದ. ರಾಜು ಗೆಲವಿನಿಂದ ಮಾತನ್ನಾರಂಭಿಸಿದ.

" ನಮ್ಮ ಮಂದಿರವನ್ನು ನೀನು ಮರೆತೆಯೆಂದೇ ಭಾವಿಸಿದ್ದೆ."

" ನಮ್ಮ ಶಾಲೆಯ ದಾರಿಯನ್ನೇ ನೀವು ಮರೆತಿದ್ದೀರಲ್ಲಾ."

" ಹೇಗೆ ? "

" ನೀವು ಬರಬಹುದೆಂದು ಮೂರು ದಿನದಿಂದ ಎದುರುನೋಡಿದೆ."

ಮೂರು ದಿನಗಳ ಕಾಲ ಇಂದಿರೆಯನ್ನು ನೋಡದೆ ತಡೆಯುವಷ್ಟು ಸಮಾಧಾನ ರಾಜುವಿಗಿರಲಿಲ್ಲ. ಎರಡು ದಿನಗಳ ಹಿಂದೆ ಅವನು ಶಿಶುವಿಹಾರಕ್ಕೆ ಹೋಗಿದ್ದ. ಸುಶೀಲಾಬಾಯಿಗೆ ಅವನು ಕೆಲವು ಚಿತ್ರಗಳನ್ನು ಪೂರ್ಣಗೊಳಿಸಿ ಕೊಡಬೇಕಾಗಿತ್ತು. ಅವರು ಚಿತ್ರಗಳಿಗಾಗಿ ನಾಲ್ಕಾರು ಬಾರಿ ಕೇಳಿದ್ದರು. ಮತ್ತೆ ಆ ದಿನವೂ ಬೇಸರಪಟ್ಟುಕೊಂಡೇ ಕೇಳಿದ್ದರು. ರಾಜು ಸರಿಯಾಗಿ ಉತ್ತರವನ್ನೇ ಕೊಟ್ಟಿರಲಿಲ್ಲ. ಚಿತ್ರಗಳನ್ನು ಕಳುಹಿಸುವುದಾಗಿ ಹೇಳಿ ಸ್ವಲ್ಪ ಹೊತ್ತೂ ಅಲ್ಲಿ ನಿಲ್ಲದೆ ಹೊರಟುಹೋದ. ಅವನು ಆ ದಿನ ಅಷ್ಟು ಬೇಗ ಏಕೆ ಹೊರಟುಹೋದನೆಂದು ಅವರಿಗೆ ಸಮಸ್ಯೆಯಾಯಿತು. ಕೆಲ ಕ್ಷಣಗಳಲ್ಲಿ ಕಾರಣ ಹೊಳೆಯಿತು. ಅಂದು ಇಂದಿರೆ ಶಾಲೆಯಲ್ಲಿರಲಿಲ್ಲ. ಅವಳು ತನ್ನ ಕೆಲಸವನ್ನು ಮುಗಿಸಿಕೊಂಡು ವಿರಾಮವಿದ್ದುದರಿಂದ ಮನೆಗೆ ಹೊರಟುಹೋಗಿದ್ದಳು. ಆ ಊಹೆ ಸುಳಿದಾಗ ಸುಶೀಲಾಬಾಯಿಗೆ ರಾಜುವಿನ ನಡತೆ ಅಸಹ್ಯವೆನಿಸಿತು.

ಆ ದಿನ ರಾಜು ಶಿಶುವಿಹಾರಕ್ಕೆ ಬಂದಿದ್ದುದು ಇಂದಿರೆಗೆ ಗೊತ್ತಿರಲಿಲ್ಲ. ಕಲಾಮಂದಿರಕ್ಕೆ ಇಂದಿರೆಯೇ ಈ ದಿನ ಬಂದಿದ್ದಾಳೆ.

ರಾಜು ಇಂದಿರೆಯ ಮಾತಿಗೆ ಉತ್ತರ ಹೇಳಿದ :

" ನಮ್ಮ ಮಂದಿರಕ್ಕೆ ನೀನು ಬಂದಿರುವುದು ಈಗ. ಎರಡು ದಿನಗಳ ಹಿಂದೆಯೇ ನಾನು ಶಿಶುವಿಹಾರಕ್ಕೆ ಬಂದಿದ್ದೆ."

" ಗುಪ್ತವಾದ ಕೆಲಸಕ್ಕೆ ಬಂದಿದ್ದಿರೇನೋ ! "

" ಗುಪ್ತವಾದ ಕೆಲಸ ಏನು ? "

" ಅಷ್ಟು ಗುಪ್ತವಾಗಿ ಬಂದುಹೋಗಬೇಕಾದರೆ ! "

" ಉದ್ದೇಶವೇನೋ ಗುಪ್ತವಾದದ್ದೇ. ಆದರೆ ಅದು ಫಲಿಸಲಿಲ್ಲ. ಅದ ರಿಂದಲೇ ಬೇಗ ಹಿಂತಿರುಗಿದೆ."

" ಏನದು ಗುಟ್ಟಿನ ಉದ್ದೇಶ, ಕೇಳಬಹುದೇ ? " ಇಂದಿರೆ ವಿನೋದ ದಲ್ಲಿ ಕೇಳಿದಳು.

" ಗುಟ್ಟಿನಲ್ಲಿ ಒಬ್ಬರನ್ನು ನೋಡಬೇಕಾಗಿತ್ತು."

" ಅದಕ್ಕಾಗಿಯೇ ಅಲ್ಲವೆ, ಆ ಒಬ್ಬರು ಕಾಣದಂತೆ ನೀವು ಶಾಲೆಯಿಂದ ಆ ದಿನ ನುಸುಳಿ ಹೋದಿರಿ ? "

" ಆ ಒಬ್ಬರ ಭೇಟಿಯಾಗುವುದು ಅಷ್ಟು ಸುಲಭವಲ್ಲವಲ್ಲಾ."

ಇಬ್ಬರೂ ವಿನೋದದಿಂದ ಮಾತನಾಡಿದರು.

" ನೀವು ಶಾಲೆಗೆ ಬಂದಿದ್ದುದು ಬುಧವಾರ ಮಧ್ಯಾಹ್ನವೇ ? "

" ಎಲ್ಲಾ ನೀನೇ ಹೇಳುತ್ತಿದ್ದೀ ! "

" ಆ ದಿನ ಮಧ್ಯಾಹ್ನ ಕೆಲಸ ಬೇಗ ಮುಗಿಯಿತು. ನಾನು ಮನೆಗೆ ಹೊರಟುಹೋದೆ."

ಮಾತನ್ನು ಮುಗಿಸುತ್ತಲೇ ಇಂದಿರೆಗೆ ಏನೋ ನೆನಪಾಗಿ ಕೇಳಿದಳು :

" ಆ ದಿನ ನೀವು ಸುಶೀಲಾಬಾಯಿಯನ್ನು ಕಂಡಿದ್ದಿರಾ ? "

" ಆ ಹೊತ್ತು ಅವರು ನನ್ನನ್ನು ಕರೆದು ಮಾತನಾಡಿಸಿದರು."

" ಚಿತ್ರಗಳ ವಿಷಯಕ್ಕೆ ? "

" ಹೌದು, ಅದೇ ವಿಷಯಕ್ಕೆ. ಶಾಲೆಗೆ ಕೆಲವು ಚಿತ್ರಗಳನ್ನು ಬರೆದು ಕೊಡಬೇಕಾಗಿದೆ. ಪದೇ ಪದೇ ಕೇಳುತ್ತಿದ್ದಾರೆ. ಬಣ್ಣಗಳಿಲ್ಲದೆ ಚಿತ್ರಗಳು ಪೂರ್ತಿಯಾಗಿಲ್ಲ."

" ಅದೇ ವಿಷಯ ಎತ್ತಿಕೊಂಡು ನಿತ್ಯ ಗೊಣಗುತ್ತಾರೆ. ಈಚೆಗೆ ಅವರಿಗೆ ಏನೋ ಅಸಮಾಧಾನ. ನನ್ನಲ್ಲಿ ಚಿಕ್ಕ ವಿಷಯಗಳಲ್ಲಿ ತಪ್ಪು ತಿಳಿಯುತ್ತಾರೆ."

ಸುಶೀಲಾಬಾಯಿಯ ಮನಸ್ಸನ್ನು ರಾಜು ಅಳೆದು ನೋಡಿದ್ದ. ಅವರ ಅಸಮಾಧಾನಕ್ಕೆ ಕಾರಣ ತನ್ನ ಮತ್ತು ಇಂದಿರೆಯ ಮಧ್ಯೆ ಹಬ್ಬುತ್ತಿದ್ದ ಸ್ನೇಹ. ಇಂದಿರೆಯ ಸಾಕ್ಷ್ಯ ಅವನಲ್ಲಿ ಕಿಡಿಗೊಂಡಿದ್ದ ಆಗ್ರಹಕ್ಕೆ ಗಾಳಿ ಬೀಸಿತು.

ಚಂದ್ರು ಕಾಫಿ ತಂದು ಮೇಜಿನ ಮೇಲಿರಿಸಿದ.

" ತೆಗೆದುಕೊಳ್ಳಬಹುದಲ್ಲಾ."

" ಅದನ್ನು ಹೇಳಬೇಕೆ ? "

ಎರಡು ಬಟ್ಟಲುಗಳು ಬರಿದಾದರೂ ಮುಂದಿನ ಕಾರ್ಯಕ್ರಮ ಒಬ್ಬರಿಗೂ ತಿಳಿದಿರಲಿಲ್ಲ.

" ಹೊರಡೋಣ " ಎಂದು ಇಂದಿರೆ ಸೂಚಿಸಿದಳು. ಆ ಮಾತಿನಲ್ಲಿ ರಾಜು ತನ್ನೊಡನೆ ಹೊರಡಬೇಕೆಂಬ ಸಲಹೆಯಿತ್ತು. ರಾಜು ಪ್ರಸನ್ನವದನನಾದ. ಕುರ್ಚಿಬೆನ್ನಿಗೆ ತೂಗಹಾಕಿದ್ದ ಕೋಟನ್ನು ಕೈಗೆ ತೆಗೆದುಕೊಂಡ. ಇಬ್ಬರೂ ಕಲಾಮಂದಿರದಿಂದ ಹೊರಟರು. ನಾಲ್ಕು ಹೆಜ್ಜೆಹಾಕುತ್ತಿರುವಂತೆ ಇಂದಿರೆ ಕೇಳಿದಳು :

" ಎಲ್ಲಿಗೆ ಹೋಗುತ್ತಿದ್ದೇವೆ ? "

" ಅದನ್ನು ನೀನು ಹೇಳಬೇಕು. ನಡೆಸಿಕೊಂಡು ಹೋಗುತ್ತಿರುವುದು ನೀನು ತಾನೆ."

" ನನ್ನ ಸಲಹೆ ಗೊತ್ತೇ ಇದೆ."

" ಹೇಳು."

" ಊಹಿಸಿ."

ರಾಜು ಕೈಗಡಿಯಾರವನ್ನು ನೋಡುತ್ತ ಹೇಳಿದ :

" ಹೊತ್ತಾಯಿತು, ' ಗ್ಲೋಬ್ 'ಗೆ ಬಸ್ ಹತ್ತೋಣ."

" ಸರಿಯಾಗಿ ಊಹಿಸುತ್ತೀರಿ."

ರಸೆಲ್ ಮಾರ್ಕೆಟ್ಟಿನ ಬಸ್ ಬಂದಿತು.

' ನಿನ್ನ ಮನಸ್ಸು ನನಗೆ ಗೊತ್ತಿಲ್ಲವೆ ? ' ಎನ್ನುವಂತೆ ರಾಜು ನೋಡಿದ.

' ಪೂರ್ತಿ ಗೊತ್ತಿದೆ ' ಎಂದು ನೋಟದಲ್ಲಿಯೇ ಇಂದಿರೆ ಉತ್ತರಿಸಿದಳು.

ಇಬ್ಬರೂ ಬಸ್ ಹತ್ತಿದರು.

## ೫೪

ರಾಜು ಮತ್ತು ಇಂದಿರೆ ಕಲಾಮಂದಿರದಿಂದ ಹೊರಟುಹೋಗಿ ಸುಮಾರು ಅರ್ಧ ಗಂಟೆಯಾಗಿತ್ತು. ಸುಶೀಲಾಬಾಯಿ ರಾಜುವನ್ನು ನೋಡಲು ಅಲ್ಲಿಗೆ ಬಂದರು. ಬಾಗಿಲು ಮುಚ್ಚಿತ್ತು. ಕಾಲಿಂಗ್ ಬೆಲ್ಲನ್ನು ಒತ್ತಿದರು. ರಾಜು ಒಳಗಿರಲಿಲ್ಲ. ಅಷ್ಟು ದೂರದಿಂದ ನಡೆದುಬಂದರೂ ತಮ್ಮ ಉದ್ದೇಶ ವ್ಯರ್ಥ ವಾಯಿತೆಂದು ಅವರ ಹುಬ್ಬು ಗಂಟಾಯಿತು. ಚಂದ್ರು ಬಾಗಿಲನ್ನು ತೆರೆದ. ಸುಶೀಲಾಬಾಯಿ ಅರೆಮನಸ್ಸಿನಿಂದ ಎರಡು ಹೆಜ್ಜೆ ಒಳಗಿಟ್ಟರು.

" ರಾಜು ಎಲ್ಲಿ ? " ಎಂದು ಸುಶೀಲಾಬಾಯಿ ಕೇಳಿದರು.

“ ಇಂದಿರಮ್ಮನವರು ಬಂದಿದ್ದರು. ರಾಜು ಅವರೊಡನೆ ಹೋದರು ” ಎಂದು ಚಂದ್ರು ತಡೆದು ತಡೆದು ಉತ್ತರ ಕೊಟ್ಟ.

“ ಇಂದಿರೆ ಈಗ ಬಂದಿದ್ದಳೆ ? ” ಎಂದು ಸುಶೀಲಾಬಾಯಿ ಬಿಗಿಯಾಗಿ ಕೇಳಿದರು.

“ ಸುಮಾರು ಎರಡು ಗಂಟೆಯ ಸಮಯದಲ್ಲಿ ಬಂದಿದ್ದರು.”

“ ಎಲ್ಲಿಗೆ ಹೋದರು, ತಿಳಿಸಿದರೇನು ? ”

“ ಏನೂ ಹೇಳಲಿಲ್ಲ.”

ಸುಶೀಲಾಬಾಯಿಯ ಮುಖ ಕೆಂಪೇರಿತು.

“ ಶಿಶುವಿಹಾರದ ಚಿತ್ರಗಳು ಸಿದ್ಧವಾಗಿದ್ದರೆ ಕೊಟ್ಟುಬಿಡಿ. ನಾನೇ ತೆಗೆದುಕೊಂಡು ಹೋಗುತ್ತೇನೆ ” ಎಂದರು.

ಚಂದ್ರು ಸುಮ್ಮನೆ ನಿಂತ. ಅವನ ಅಸಹಾಯತೆಯನ್ನು ತಿಳಿದು ಸುಶೀಲಾಬಾಯಿ ಸಿಟ್ಟಿನಲ್ಲಿಯೇ ಹೊರಟರು.

ರಾಜುವಿನ ಪರಿಸ್ಥಿತಿಯನ್ನು ಚಂದ್ರು ತೂಕಮಾಡಿದ್ದ. ಶಿಶುವಿಹಾರದ ಸಹಾನುಭೂತಿಯನ್ನೂ ಅವನು ಕಳೆದುಕೊಂಡನೆಂಬುದನ್ನು ಅರಿತುಕೊಂಡ. ಆ ಸಂಸ್ಥೆಯಿಂದ ರಾಜುವಿಗೆ ತಪ್ಪದೆ ಅಷ್ಟಿಷ್ಟು ಹಣ ದೊರೆಯುತ್ತಿತ್ತು. ತನ್ನ ಚಿತ್ರಪ್ರಚಾರಕ್ಕೂ ಅಲ್ಲಿ ಅವಕಾಶವಿತ್ತು. ಆದರೆ ಈಗ ಆ ಸಂಸ್ಥೆಯ ಸಂಬಂಧ ತೊರೆದುಹೋಗುವಂತೆ ಕಂಡುಬಂದಿತು.

ಶಿಶುವಿಹಾರದ ವಾರ್ಷಿಕೋತ್ಸವಕ್ಕೆ ಇನ್ನು ಒಂದು ತಿಂಗಳು ಉಳಿದಿತ್ತು. ಆ ಉತ್ಸವದ ಹಣಕಾಸಿನ ಸಂಬಂಧ ಸುಶೀಲಾಬಾಯಿ ಗೋಪಾಲರಾಯರನ್ನು ಕಾಣಬೇಕಿತ್ತು. ಅವರು ಮಲ್ಲೇಶ್ವರದ ಬಸ್ ಕಾಯುತ್ತಾ ನಿಂತರು. ಅವರ ಮನಸ್ಸನ್ನು ಪೂರ್ತಿಯಾಗಿ ರಾಜು–ಇಂದಿರೆಯರ ಸಂಬಂಧ ಆವರಿಸಿತ್ತು. ರಾಜುವಿನ ವಿಷಮ ಪರಿಸ್ಥಿತಿ ಅವರಿಗೆ ಗೊತ್ತಿತ್ತು. ಬಹುಶಃ ಒಂದೆರಡು ವಾರಗಳಲ್ಲಿ ಅವನು ಬೀದಿಯ ಭಿಕಾರಿಯಾಗಬಹುದೆಂದು ಹಲವು ಜನರಿಂದ ಅವರು ಕೇಳಿದ್ದರು. ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ರಾಜು ಮಾಡಿದ್ದ ಮೋಸ, ಫೋರ್ಜರಿಗಳನ್ನು ವಕೀಲರು ಮುಚ್ಚಿಡಲಾರದೆ ಹೋಗಿದ್ದರು. ಅವರು ರಾಜುವಿನ ವಿಪತ್ತಿನ ದಿನವನ್ನು ಸುಮ್ಮನೆ ಮುಂದೂಡುತ್ತಿದ್ದರು, ಅಷ್ಟೆ. ಆ ರೀತಿ ಅವರು ಅನಿರ್ದಿಷ್ಟ ಕಾಲದವರೆಗೆ ತಳ್ಳುವಂತಿರಲಿಲ್ಲ.

ಆ ದಿನ ಮಧ್ಯಾಹ್ನ ಇಂದಿರೆಗೆ ಶಾಲೆಯಲ್ಲಿ ವಿರಾಮವಿತ್ತು. ಆದರೂ ಅವಳು ಸುಶೀಲಾಬಾಯಿಗೆ ಒಂದು ಮಾತನ್ನೂ ತಿಳಿಸದೆ ಹೊರಟುಹೋಗಿದ್ದಳು. ಶಾಲೆಯ ವಾರ್ಷಿಕೋತ್ಸವದ ಏರ್ಪಾಡುಗಳನ್ನು ಪರ್ಯಾಲೋಚಿಸಲು ಉಪಾಧ್ಯಾಯಿನಿಯರೆಲ್ಲ ಅದೇ ಮಧ್ಯಾಹ್ನ ಸೇರಬೇಕೆಂದು ಸುಶೀಲಾಬಾಯಿ ಎಲ್ಲರಿಗೂ ಕರೆಕಳುಹಿಸಿದ್ದರು. ಆ ಸಮಯಕ್ಕೆ ಇಂದಿರೆ ಹೊರಟುಹೋಗಿದ್ದಳು. ಸಭೆಗೂ ಅವಳು ಹೋಗಲಿಲ್ಲ. ಸುಶೀಲಾಬಾಯಿಗೆ ಅದು ಅಸಮಾಧಾನ ವಾಗಿತ್ತು.

ಮೊದಲ ಕೆಲವು ದಿನಗಳಲ್ಲಿ ವಿರಾಮಸಮಯಗಳಲ್ಲಿಯೂ ಇಂದಿರೆ ಆಸಕ್ತಿಯಿಂದ ಶಾಲೆಯ ಒಂದಲ್ಲ ಒಂದು ಕೆಲಸದಲ್ಲಿ ತೊಡಗುತ್ತಿದ್ದಳು. ಶಾಲೆಯ ಏಳಿಗೆಗಾಗಿ ದುಡಿಯುವುದು ಅವಳ ಹಂಬಲವಾಗಿತ್ತು. ಯಾವುದೋ ಒಂದು ಆದರ್ಶ ಅವಳ ಮಾತಿನಲ್ಲಿ, ನಡೆಯಲ್ಲಿ ಎದ್ದುಕಾಣುತ್ತಿತ್ತು. ಶಾಲೆಯಲ್ಲಿ ಅವಳ ವ್ಯಕ್ತಿತ್ವವೊಂದು ಸ್ಫೂರ್ತಿಯ ಕೇಂದ್ರವಾಗಿರುತ್ತಿತ್ತು. ಅವಳು ಸುಶೀಲಾ ಬಾಯಿಯ ಬಲತೋಳಾಗಿದ್ದಳು. ಆದರೆ ಈಗ ಇಂದಿರೆಯ ಆಸಕ್ತಿ ಶಾಲೆಯಿಂದ ವಿಮುಖವಾಗಿದೆ. ಶಾಲೆಯಲ್ಲಿ ಅವಳ ಸುತ್ತ ಕಟ್ಟಿಕೊಂಡಿದ್ದ ಆಸೆಯೆಲ್ಲ ಮಂಜಿನಂತೆ ಕರಗಿಹೋಗಿದೆ.

ಮಧ್ಯಾಹ್ನ ಇಂದಿರೆ ಮನೆಗೆ ಹೋಗಿರಬಹುದೆಂದು ಸುಶೀಲಾಬಾಯಿ ತಿಳಿದಿದ್ದರು. ಆದರೆ ಅವಳು ಸಭೆಗೂ ಬಾರದೆ ರಾಜುವಿನ ಕಲಾಮಂದಿರಕ್ಕೆ ಹೋಗಿದ್ದುದು ಚಂದ್ರುವಿನ ಮಾತಿನಿಂದ ಅವರಿಗೆ ಗೊತ್ತಾಯಿತು. ಮನಸ್ಸಿನಲ್ಲಿ ಇಷ್ಟೆಲ್ಲ ವಿಚಾರಗಳ ತಿಕ್ಕಾಟವಾಗುತ್ತಿರುವಂತೆಯೇ ಬಸ್ಸು ಬಂದು ನಿಂತಿತು.

ಸುಶೀಲಾಬಾಯಿ ಬರುವ ಹೊತ್ತಿಗೆ ಗೋಪಾಲರಾಯರು ಆಗತಾನೆ ಆಫೀಸಿನಿಂದ ಬಂದು ಕುಳಿತಿದ್ದರು.

"ಬನ್ನಿ" ಎಂದು ಒಳಕ್ಕೆ ಕರೆದರು.

"ತಿಂಗಳಿಂದ ಈ ಕಡೆ ಬರಲೇ ಇಲ್ಲನಲ್ಲಾ."

"ಶಾಲೆಯಲ್ಲಿ ತುಂಬ ಕೆಲಸ, ಬಿಡುವೇ ಆಗಲಿಲ್ಲ" ಎಂದು ಸುಶೀಲಾ ಬಾಯಿ ಕಾರಣವನ್ನು ಹೇಳಿದರು.

"ಇಂದಿರೆಯೂ ಕೆಲಸ ಹೆಚ್ಚು ಎಂದು ಈಚೆಗೆ ಹೇಳುತ್ತಿದ್ದಾಳೆ."

ಇಂದಿರೆ ಕೆಲಸ ಹೆಚ್ಚೆಂದು ಮನೆಯಲ್ಲಿ ಹೇಳಿದ್ದುದರ ಉದ್ದೇಶ ಸುಶೀಲಾ

ಬಾಯಿಗೆ ಅರ್ಥವಾಯಿತು. ಶಾಲೆಯ ಯಾವ ಕ್ಷೇತ್ರದಲ್ಲಿಯೂ ಅವಳ ಕೆಲಸ ಹೆಚ್ಚಿರಲಿಲ್ಲ. ತನಗೆ ಒಪ್ಪಿಸಿದ್ದ ಕೆಲಸವನ್ನೂ ಅವಳು ಇತ್ತೀಚೆಗೆ ಸಮರ್ಪಕ ವಾಗಿ ಮಾಡುತ್ತಿರಲಿಲ್ಲ. ರಾಜುವಿನ ಸಂಗದಲ್ಲಿ ಗೋಪ್ಯವಾಗಿ ಕಳೆಯುತ್ತಿದ್ದ ಕಾಲವನ್ನೆಲ್ಲ ಶಾಲೆಯ ಸೇವೆಯಲ್ಲಿ ಅವಳು ಕಳೆಯುತ್ತಿದ್ದಳೆಂದು ಮನೆಯಲ್ಲಿ ತಿಳಿದುಕೊಂಡಿದ್ದರು. ಸುಶೀಲಾಬಾಯಿಯ ಸೂಕ್ಷ್ಮಬುದ್ಧಿಗೆ ಎಲ್ಲ ವೇದ್ಯ ವಾಯಿತು. ತಮ್ಮ ಮಾತನ್ನು ಸ್ಪಷ್ಟಪಡಿಸಿದರು.

"ಬಿಡಿ ದಿನಗಳಲ್ಲಿ ಹೆಚ್ಚು ಕೆಲಸ ಏನಿರುವುದಿಲ್ಲ. ಈಗಂದರೆ ವಾರ್ಷಿಕೋ ತ್ಸವದ ಸಿದ್ಧತೆ ನಡೆಯಬೇಕು. ಕೆಲಸ ಸ್ವಲ್ಪ ಹೆಚ್ಚಾಗಿದೆ. ಅದೇ ಕೆಲಸ ಕ್ಕಾಗಿಯೇ ಈಗ ನಿಮ್ಮನ್ನು ನೋಡಲು ಬಂದೆ."

"ಏನಾಗಬೇಕಿತ್ತು ?"

"ಈ ಬಾರಿ ವೆಚ್ಚ ಹೆಚ್ಚು. ಹಣಕ್ಕೆ ತೊಂದರೆಯಾಗಿದೆ. ಹಣವನ್ನು ಕೂಡಿಸಲು ನಿಮ್ಮ ಸಹಕಾರ ಬೇಕಾಗಿದೆ" ಎಂದು ತಮ್ಮ ಬೇಡಿಕೆಯನ್ನು ಸೂಚಿಸಿದರು.

ಗೋಪಾಲರಾಯರಿಗೆ ಶಾಲೆಯಲ್ಲಿ ಮೊದಲಿನಿಂದಲೂ ವಿಶೇಷವಾದ ಮಮತೆಯಿತ್ತು. ಸಹಾನುಭೂತಿಯಿಂದ ಉತ್ತರ ಹೇಳಿದರು:

"ಆಗಲಿ, ಕೈಲಾದ್ದನ್ನು ನಾನೂ ಮಾಡುತ್ತೇನೆ. ಸಿದ್ಧತೆ ಹೇಗೆ ನಡೆಯುತ್ತಿದೆ ?"

"ಈ ಬಾರಿ ನಮಗೆ ಸಹಾಯಕರು ಕಡಿಮೆ. ವಸ್ತುಪ್ರದರ್ಶನ ಈ ಸಲವೂ ನಡೆಯಬೇಕೆಂಬ ಆಸೆ ಬೇರೆ ಇದೆ. ವ್ಯವಸ್ಥೆಗಳು ಇನ್ನೂ ಆಗಿಲ್ಲ" ಎಂದು ಪೇಚಾಟದಿಂದ ಉತ್ತರ ಕೊಟ್ಟರು.

"ವಸ್ತುಪ್ರದರ್ಶನ ನಡೆಯಲೇಬೇಕು. ವಾರ್ಷಿಕೋತ್ಸವದ ಮುಖ್ಯ ಅಂಗ ಅದು. ಅದಕ್ಕೆ ರಾಜು ಕೈಹಾಕಿದರೆ ಆಗುತ್ತೆ."

"ಅವರಿಂದ ನಮಗೆ ಯಾವ ಸಹಾಯವೂ ಸಿಗುವಂತಿಲ್ಲ."

"ಅದೇಕೆ ?"

"ಈಚೆಗೆ ಅವರು ಬಹಳ ಬದಲಾಯಿಸಿದ್ದಾರೆ. ಕೊಡಬೇಕಾದ ಚಿತ್ರ ಗಳನ್ನೇ ಎರಡು ವಾರದಿಂದ ಇನ್ನೂ ಕೊಟ್ಟಿಲ್ಲ. ಕೇಳಿದರೆ ಕೋಪಿಸಿಕೊಳ್ಳು ತ್ತಾರೆ. ಶಾಲೆಯ ಕಡೆಗೇ ತಲೆಹಾಕುವುದಿಲ್ಲ."

ಸುಶೀಲಾಬಾಯಿಯ ಕೋಪದ ಮಾತು ಗೋಪಾಲರಾಯರ ಮನಸ್ಸನ್ನು ವಿಚಿತ್ರವಾಗಿ ಪರಿಣಾಮಗೊಳಿಸಿತು. ಅವರಿಗೆ ರಾಜುವಿನ ಇತ್ತೀಚಿನ ಬದುಕು ತಿಳಿದಿರಲಿಲ್ಲ.

" ಹಾಗೇಕೆ ಮಾಡಿದ ? " ಎಂದು ಕಾತರತೆಯಿಂದ ಕೇಳಿದರು.

" ಅವರ ಹಾದಿಯೇ ಬೇರೆಯಾಗಿದೆ. ಅದೊಂದು ದೊಡ್ಡ ಕತೆ " ಎಂದು ಸುಶೀಲಾಬಾಯಿ ಉದ್ದವಾದ ಉಸಿರು ಬಿಟ್ಟರು.

" ಏನು ಅವನ ಕತೆ ? "

" ದೊಡ್ಡ ಸಾಲಗಳನ್ನು ಮಾಡಿದ್ದಾರೆ. ಕೇಸು ಕೋರ್ಟಿನಲ್ಲಿದೆ. ಶೀಲವೂ ಚೆನ್ನಾಗಿದ್ದಂತಿಲ್ಲ. ಮೋಸ, ಫೋರ್ಜರಿಗಳ ಆರೋಪಣೆ ಬೇರೆ ಇದೆ. ಅವರ ಬದುಕು ನಾಳೆ ಬೀದಿಗೆ ಬರುವಂತಿದೆ " ಎಂದು ರಾಜುವಿನ ಸ್ಥಿತಿಯನ್ನು ಪೂರ್ತಿ ಬಯಲುಮಾಡಿದರು.

ಗೋಪಾಲರಾಯರು ಆ ಮಾತನ್ನು ಕೇಳಿದಾಗ ಅವರ ಮನಸ್ಸಿನ ಯಾವುದೋ ಮೂಲೆಯಲ್ಲಿ ಹುದುಗಿಕೊಂಡಿದ್ದ ಆಸೆಗೆ ಪೆಟ್ಟುಬಿದ್ದಿತು. ಅವರು ಖಿನ್ನವದನರಾದರು. ಲಕ್ಷ್ಮಮ್ಮನವರು ಅಡಿಗೆಮನೆಯಲ್ಲಿ ತಿಂಡಿ ಕಾಫಿಯನ್ನು ಮಾಡುತ್ತಿದ್ದರು. ಅವರ ಕಿವಿಗೂ ' ರಾಜು, ಸಾಲ, ಕೋರ್ಟು, ಬದುಕು ಬೀದಿಗೆ ಬರುತ್ತದೆ '— ಈ ಮಾತುಗಳು ಅಸ್ಪಷ್ಟವಾಗಿ ಬಿದ್ದವು. ಅವರಿಗೆ ಸರಿಯಾಗಿ ಆ ಮಾತುಗಳು ಅರ್ಥವಾಗಲಿಲ್ಲ. ಸುಶೀಲಾಬಾಯಿ ಶಾಲೆಯಿಂದ ಬಂದಿದ್ದುದು, ಇಂದಿರೆ ಇನ್ನೂ ಬಾರದಿದ್ದುದನ್ನು ಅವರ ಮನಸ್ಸಿಗೆ ಒತ್ತಿ ಸೂಚಿಸಿತು. ಅವರೇ ತಿಂಡಿಯನ್ನು ತಂದು ಮೇಜಿನ ಮೇಲಿರಿಸಿದರು.

" ಇಂದಿರೆ ಯಾಕೋ ಇನ್ನೂ ಬರಲಿಲ್ಲವಲ್ಲ " ಎಂದು ತವಕವನ್ನು ತೋರಿ ಕಾಫಿ ಸಿದ್ಧಮಾಡಲು ಒಳಗೆ ಹೊರಟುಹೋದರು.

ಆ ಮಾತನ್ನು ಕೇಳುತ್ತಲೂ ಸುಶೀಲಾಬಾಯಿ ಅದೇ ವಿಷಯವನ್ನು ಎತ್ತಿದರು :

" ಇಂದಿರೆ ಈ ಮಧ್ಯಾಹ್ನವೇ ಶಾಲೆಯಿಂದ ಹೊರಟುಹೋದಳು. ಮ್ಯಾಟಿಂಗಿಗೂ ಬಂದಿರಲಿಲ್ಲ. ರಾಜುವನ್ನು ನೋಡಬೇಕಾಗಿತ್ತು. ಕಲಾಶಾಲೆಗೆ ಹೋಗಿದ್ದೆ. ಇಂದಿರೆ, ರಾಜು ಇಬ್ಬರೂ ಮಧ್ಯಾಹ್ನವೇ ಎಲ್ಲಿಗೋ ಹೋದರು ಎಂದು ಚಂದ್ರು ಹೇಳಿದ." ತಾವು ತಿಳಿದ ಸುದ್ದಿಯನ್ನು ಬಿಚ್ಚಿ ಹೇಳಿದರು.

ಅದು ಗೋಪಾಲರಾಯರ ಮನಸ್ಸಿನಲ್ಲಿ ಚಿಂತೆಯ ಹೊಗೆಯನ್ನು ಹೊತ್ತಿಸಿತು.

ಕಾಫಿಯನ್ನು ಕುಡಿದಾಯಿತು. ಸುಶೀಲಾಬಾಯಿ ವಿಚಾರದ ಸುಳಿಯನ್ನೆಬ್ಬಿಸಿ ಹೊರಟುಹೋದರು. ಗೋಪಾಲರಾಯರು ಆ ಸುಳಿಯಲ್ಲಿ ಸಿಕ್ಕಿಬಿದ್ದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಬಿಟ್ಟರು.

ಚಿತ್ರಮಂದಿರದಲ್ಲಿ ಇಂದಿರೆಗೂ ಆಂತರಿಕ ಸುಖವಿರಲಿಲ್ಲ. ರಾಜುವಿನ ಸಂಗವು ಅವಳ ಹೃದಯದಲ್ಲಿ ನಡೆಯುತ್ತಿದ್ದ ಎನೋ ಹೊಯ್ದಾಟವನ್ನು ಶಾಂತಗೊಳಿಸಿರಲಿಲ್ಲ. ಸುಶೀಲಾಬಾಯಿಗೆ ಹೇಳದೆ ಮಧ್ಯಾಹ್ನ ಶಾಲೆಯಿಂದ ಅವಳು ಹೊರಟುಬಂದಿದ್ದಳು. ತನ್ನ ವಿಷಯದಲ್ಲಿ ಸುಶೀಲಾಬಾಯಿಯ ಅಭಿಪ್ರಾಯ ಕೆಟ್ಟಿರಬಹುದು. ಅಲ್ಲದೆ ತಾನು ಮನೆಗೆ ಹೋಗುವ ವೇಳೆಗೆ ಕತ್ತಲು ಬಿದ್ದಿರುವುದು. ನಿತ್ಯ ಹೊತ್ತಾಗಿ ಹೋಗುತ್ತಿದ್ದುದು ಗೋಪಾಲರಾಯರಿಗೆ ಯೋಚನೆಗೆ ಕಾರಣವಾಗಿತ್ತು. ಸಮಯಗಳಲ್ಲಿ ಅವನ್ನು ಸೂಕ್ಷ್ಮವಾಗಿ ಅವರು ಸೂಚಿಸಿಯೂ ಇದ್ದರು. ಮತ್ತೆ ಈ ದಿನ ಹೊತ್ತಾಗಿ ಹೋಗಬೇಕು. ಮನೆಯಲ್ಲಿ ಹೇಳಿ ಬಂದಿರಲಿಲ್ಲ. ತಾಯಿ ತನಗಾಗಿ ಕಾದಿರುತ್ತಾಳೆ. ಸ್ವಲ್ಪ ಹೊತ್ತು ತೆರೆಯ ಮೇಲಿನ ಚಿತ್ರಗಳ ಕಡೆಗೆ, ಮತ್ತೆ ಸ್ವಲ್ಪ ಹೊತ್ತು ಕಣ್ಣ ಮುಂದೆ ಊರಿ ನಿಲ್ಲುತ್ತಿದ್ದ ನೈಜ ಚಿತ್ರಗಳ ಕಡೆಗೆ ಅವಳ ಮನಸ್ಸು ಜಿಂಕೆಯ ಮರಿಯಂತೆ ನೆಗೆದಾಡುತ್ತಿತ್ತು.

ರಾಜು ಇಂದಿರೆಯ ಸಂಗದಲ್ಲಿ ಪ್ರಪಂಚವನ್ನು ಮರೆತಿದ್ದ. ಚಿತ್ರ ಮುಗಿದ ಮೇಲೆ ಅವನಿಗೆ ಅದರ ಅರಿವಾಯಿತು. ಇಂದಿರೆ ಬಸ್ಸಿಗಾಗಿ ಕಾತರಳಾದಳು.

" ನಾನು ಬೇಗ ಹೊರಡಬೇಕು. ಮನೆಯಲ್ಲಿ ಹೇಳಿ ಬಂದಿಲ್ಲ. ದಾರಿ ಕಾಯುತ್ತಿರುತ್ತಾರೆ."

ರಾಜುವಿಗೆ ಅವಳ ಅವಸರ ಸಹಜವೆನಿಸಿತು. ಅವನೂ ಬೇಗ ಬೇಗ ಹೆಜ್ಜೆ ಹಾಕಿದ.

ಇಬ್ಬರೂ ಮೆಜೆಸ್ಟಿಕ್ ಬಸ್ ಹತ್ತಿದರು. ಮತ್ತೆ ಇಳಿದಾಗ ಮಲ್ಲೇಶ್ವರದ ಬಸ್ಸು ಹೊರಡಲು ಕೂಗುತ್ತಿತ್ತು. ಇಬ್ಬರೂ ಸ್ವಸ್ತಿಕ್ ಟಾಕೀಸಿನ ಬಳಿ ಇಳಿದರು. ರಾಜು ಇಂದಿರೆಯೊಡನೆ ಸ್ವಲ್ಪ ದೂರ ನಡೆದ.

" ನಾನು ಹೋಗುತ್ತೇನೆ. ಇನ್ನು ನೀವು ಹೊರಡಬಹುದಲ್ಲಾ. ನಿಮಗೂ

ಹೊತ್ತಾಗಿದೆ” ಎಂದು ಇಂದಿರೆ ನುಡಿದಳು.

“ನನ್ನ ಒಂದು ಮುಖ್ಯವಾದ ಕೆಲಸ ಉಳಿದಿದೆ” ಎಂದು ನಗೆಯಲ್ಲಿ ರಾಜು ಹೇಳಿದ.

“ಅದೇನು ?”

“ಗುಡ್ ನೈಟ್ ಹೇಳಬೇಡವೆ ?”

“ಬರುತ್ತೇನೆ” ಎಂದು ಮುಗುಳ್ನಗೆಯನ್ನು ಬೀರಿ ಇಂದಿರೆ ಬೇಗ ಬೇಗ ಹೊರಟುಹೋದಳು.

ಇಂದಿರೆ ಬೀರಿದ ಮುಗುಳ್ನಗೆಯಲ್ಲಿ ಮಾಯೆಯಿತ್ತು. ಆ ಮಾಯಾ ಜಾಲದಲ್ಲಿ ರಾಜುವಿನ ಹೃದಯ ಹಕ್ಕಿಯಂತೆ ಸಿಕ್ಕಿತು. ಇಂದಿರೆ ಬೇರೆ ರಸ್ತೆಗೆ ತಿರುಗುವವರೆಗೂ ಅವಳನ್ನೇ ನೋಡುತ್ತಿದ್ದು ರಾಜು ಮನೆಯ ಕಡೆಗೆ ಭಾರವಾಗಿ ಹೆಜ್ಜೆ ಹಾಕಿದ.

ಇಂದಿರೆ ಸ್ವಲ್ಪ ಹೊತ್ತಿನಲ್ಲಿಯೇ ಮನೆಗೆ ಹತ್ತಿರವಾದಳು. ಯಾರೋ ಇಬ್ಬರು ಪಕ್ಕದಲ್ಲಿ ಓಡಾಡುತ್ತಿದ್ದ ಜನರಿಗೆ ಕೇಳುವಷ್ಟು ಗಟ್ಟಿಯಾಗಿ ಮಾತ ನಾಡುತ್ತಿದ್ದರು. ಇಂದಿರೆ ಆ ಮಾತನ್ನು ಕೇಳಿ ಸ್ತಂಭಿತಳಾದಳು.

ವಿದ್ಯುದ್ದೀಪದ ನಸುಬೆಳಕಿನಲ್ಲಿ ಅವರಲ್ಲೊಬ್ಬ ರಾಮು ಎಂದು ಗುರುತಿಸ ಬಹುದಾಗಿತ್ತು. ಕೆಲವು ತಿಂಗಳಿಂದ ರಾಜು–ರಾಮು ಸ್ನೇಹ ಮುರಿದಿತ್ತು. ಅಜಂತ ದಿನೋತ್ಸವದನಂತರ ಅವರಲ್ಲಿ ಮನಸ್ತಾಪವುಂಟಾಗಿತ್ತು. ರಾಜುವಿನ ಮನಸ್ಸಿನ ಚಲನವಲನಗಳನ್ನೆಲ್ಲಾ ಅವನು ತಿಳಿದಿದ್ದ. ಇಂದಿರೆಯ ಸ್ನೇಹ ಬಲಿತಂತೆ ರಾಜು ರಾಮುವನ್ನು ದೂರಮಾಡತೊಡಗಿದ. ತಾನು ಒಳಗಿದ್ದರೂ ಇಲ್ಲವೆಂದು ಅವನಿಗೆ ಹೇಳಿ ಕಳುಹಿಸುತ್ತಿದ್ದ. ಒಂದು ದಿನ ರಾಮು ಕಲಾ ಮಂದಿರಕ್ಕೆ ಹೋಗಿದ್ದ. ರಾಜು ಮನೆಯಲ್ಲಿ ಇಲ್ಲವೆಂದು ಚಂದ್ರು ಬಂದು ಹೇಳಿದ. ನಿಜವಾಗಿ ಆಗ ರಾಜು ಒಳಗಿದ್ದನೆಂದು ರಾಮುವಿಗೆ ಗೊತ್ತಾಯಿತು. ಅವನು ಅದನ್ನು ಸ್ಥಿರಪಡಿಸಿಕೊಂಡ. ಆ ಸಂಜೆ ಇಂದಿರೆ ಕಲಾಮಂದಿರಕ್ಕೆ ಬರುವ ಕಾರ್ಯಕ್ರಮವಿದ್ದುದರಿಂದ ರಾಜು ಅವನ ಸಂಗವನ್ನು ಆ ರೀತಿಯಲ್ಲಿ ತಪ್ಪಿಸಿಕೊಂಡ. ರಾಮುವಿಗೆ ಆ ವಿಚಾರವೂ ಖಚಿತವಾಗಿ ತಿಳಿಯಿತು. ಅಂದಿ ನಿಂದ ಅವರ ಸ್ನೇಹ ಪೂರ್ತಿಯಾಗಿ ಅಳಿಸಿಹೋಗಿ ಕ್ರೋಧಕ್ಕೆ ಎಡೆಕೊಟ್ಟಿತ್ತು.

ರಾಮು ಈಗ ರಸ್ತೆಯಲ್ಲಿ ತನ್ನ ಸ್ನೇಹಿತನೊಡನೆ ಮಾತನಾಡುತ್ತಿದ್ದಾನೆ.

" ರಾಜು ಒಬ್ಬ ಅಯೋಗ್ಯ. ಅವನಿಗೆ ಶೀಲವೆಲ್ಲಿದೆ ? " ಎಂದ ಒಬ್ಬ.

" ಈಗ ಅವನಿಗೆ ಸರೋಜ ಬೇಡ, ಇಂದಿರೆಯ ಬೆನ್ನು ಹತ್ತಿದ್ದಾನೆ" ಎಂದ ರಾಮು.

ಇಂದಿರೆ ಹೇಗೆ ಹೆಜ್ಜೆಗಳನ್ನು ಮುಂದಕ್ಕೆ ಹಾಕಿದಳೋ ಅವಳಿಗೆ ಪ್ರಜ್ಞೆಯೇ ಇರಲಿಲ್ಲ.

' ಗಂಟೆ ಏಳೂವರೆಯಾಯಿತು. ಇಂದಿರೆ ಇನ್ನೂ ಬರಲೇ ಇಲ್ಲ ' ಎಂದು ಲಕ್ಷ್ಮಮ್ಮನವರು ಮತ್ತೆ ಮತ್ತೆ ಪೇಚಾಡಿದರು. ಅಷ್ಟು ಹೊತ್ತಿಗೆ ಇಂದಿರೆ ಬಂದಳು.

" ಯಾಕೆ ಇಂದಿರಾ, ಇಷ್ಟು ಹೊತ್ತಾಯಿತು ? ಕಾಫಿ ತಿಂಡಿ ತಣ್ಣಗಾಯಿತು " ಎಂದು ಭಾರವಾದ ದನಿಯಲ್ಲಿ ಕೇಳಿದರು.

ಪ್ರಶ್ನೆಯನ್ನು ಉತ್ತರಿಸುವುದು ಇಂದಿರೆಗೆ ಕಷ್ಟವಾಯಿತು. ಅವಳಿಗೆ ಯಾವುದೂ ಬೇಕಾಗಿರಲಿಲ್ಲ.

" ಸ್ವಲ್ಪ ಕೆಲಸ ಬಿತ್ತು."

" ಏನು ಕೆಲಸವೋ! ಕಾಫಿ ತಿಂಡಿ ತೆಗೆದುಕೋ, ಏಳಮ್ಮ "

ಇಂದಿರೆ ಸ್ವಲ್ಪ ತಿಂಡಿ ಕಾಫಿಯನ್ನು ತೆಗೆದುಕೊಳ್ಳಲೇ ಬೇಕಾಯಿತು. ಗೋಪಾಲರಾಯರ ಮನೋವೃತ್ತಿಯಿಂದ ಅವಳು ಮತ್ತೂ ಭೀತಿಗೊಂಡಳು. ಅವರು ಅವಳನ್ನು ಮಾತನಾಡಿಸಲಿಲ್ಲ. ಚಿಂತಾಕ್ರಾಂತರಾಗಿ ಕೊಟಡಿಯಲ್ಲಿ ಸುಮ್ಮನೆ ಕುಳಿತಿದ್ದರು. ಮನೆಯಲ್ಲಿ ಏನೋ ಪ್ರಸಂಗ ನಡೆದಿರಬಹುದೆಂದು ಅವಳಿಗೆ ತಿಳಿಯಿತು. ಅವಳೆದೆಯಲ್ಲಿ ಸುತ್ತಾಡುತ್ತಿದ್ದ ಅಶಾಂತಿಯ ತೆರೆಗಳ ಮೇಲೆ ಬಿರುಗಾಳಿ ಬೀಸಿದಂತಾಯಿತು.

ಲಕ್ಷ್ಮಮ್ಮನವರು ಊಟಕ್ಕೆ ಸಿದ್ಧಮಾಡಿದರು. ಇಂದಿರೆಯೂ ಊಟಕ್ಕೆ ಏಳಲೇಬೇಕಾಯಿತು. ಊಟ ಮಾಡುತ್ತಿದ್ದಾಗ ನಡೆದ ಮಾತುಗಳು ಅವಳ ಎಲ್ಲ ಆಸೆಯನ್ನು ಪೂರ್ತಿಯಾಗಿ ಸುಟ್ಟು ಬೂದಿ ಮಾಡಿದವು. ಅವಳ ಮುಂದೆ ಕಾಣುತ್ತಿದ್ದ ಕನಸಿನ ಹೂದೋಟ ಮಸಣದಂತೆ ಕಂಡಿತು. ಒಂದು ಗಂಟೆಯ ಹಿಂದೆ ದಾರಿಯಲ್ಲಿ ಅವಳ ಕಿವಿಯ ಮೇಲೆ ಬಿದ್ದ ಮಾತು ಅವಳ ಮನಸ್ಸಿನಲ್ಲಿ ಯಾವ ಸಂದೇಹವನ್ನೂ ಉಳಿಸಿರಲಿಲ್ಲ. ಆ ದಿನ ಆನಂದನ ಲಗ್ನಪತ್ರಿಕೆಯನ್ನು ಕಂಡಾಗ ಆದ ಅನುಭವವೇ ಮತ್ತೆ ಈಗ ಅವಳಿಗಾಯಿತು.

“ ಸುಶೀಲಾಬಾಯಿ ರಾಜುವಿನ ವಿಚಾರ ಹೇಳುತ್ತಿದ್ದರು, ಏನದು ? ” ಎಂದು ಲಕ್ಷ್ಮಮ್ಮನವರು ಕೇಳಿದರು.

“ ಅವನು ಹಾಳಾದ. ದೊಡ್ಡ ಸಾಲಗಳನ್ನು ಮಾಡಿದಾನಂತೆ. ಮೋಸ, ಫೋರ್ಜರಿ ಕೇಸು ಬೇರೆ ಇದೆಯಂತೆ. ನಾಳೆ ಅವನ ಪಾಡು ನಾಯಿಪಾಡು ಆಗುತ್ತೆ ! ”

“ ಇದೇನು ಹೀಗೆ ಹೇಳುತ್ತೀರಿ ! ” ಎಂದು ಕಮಲಮ್ಮನವರು ತಳಮಳಿಸಿದರು.

“ ಏನು ಹೇಳುವುದು ! ಅವನು ಇನ್ನು ತಲೆಯೆತ್ತುವ ಹಾಗಿಲ್ಲ.”

“ ಹಾಗಾದರೆ ! ”

“ ಹಾಗಾದರೆ ಏನು ? ಅವನ ಶೀಲವೂ ಚೆನ್ನಾಗಿಲ್ಲವಂತೆ. ಅವನ ವಿಚಾರ ಅಷ್ಟಕ್ಕೇ ಸಾಕು ” ಎಂದು ಗೋಪಾಲರಾಯರು ಕಿಡಿನೋಟವನ್ನೆಸೆದರು.

ಇಂದಿರೆಯ ಮೈ ನಡುಗಿತು. ಬಾಯಲ್ಲಿದ್ದ ತುತ್ತನ್ನು ನುಂಗಲಾಗಲಿಲ್ಲ. ಊಟವನ್ನು ಹೇಗೋ ಮುಗಿಸಿ ಎದ್ದುಹೋದಳು. ಕೊಟಡಿಗೆ ಹೋಗಿ ಹಾಸಿಗೆಯ ಮೇಲೆ ಬಿದ್ದುಬಿಟ್ಟಳು. ಗೋಪಾಲರಾಯರೂ ಲಕ್ಷ್ಮಮ್ಮನವರೂ ಮುಂದೇನು ಮಾತನಾಡಿದರೆಂಬುದನ್ನು ತಿಳಿಯುವುದು ಅವಳಿಗೆ ಬೇಕಾಗಲಿಲ್ಲ. ಎದೆಯಲ್ಲಿ ಏನೋ ಮೂಕ ಸಂಕಟ ಹಿಂಡುತ್ತಿತ್ತು.

೫೫

ಇಂದಿರೆ ಹಾಸಿಗೆಯ ಮೇಲೆ ಬಿದ್ದಾಗ ಪೆಟ್ಟಾದುದೂ ಅವಳಿಗೆ ಅರಿವಾಗಲಿಲ್ಲ. ಅವಳ ಮನೋವ್ಯಾಪಾರವೇ ನಿಂತುಹೋಗಿತ್ತು. ಮೈ ನಿಶ್ಚೇಷ್ಟಿತವಾಗಿತ್ತು. ಹೊರಹೊಮ್ಮುತ್ತಿದ್ದ ಬಿಸಿಯುಸಿರು ಒಳಗೆ ಶಿಲಾರಸವನ್ನು ಕಾರುತ್ತಿದ್ದ ಜ್ವಾಲಾಮುಖಿಗೆ ಸಾಕ್ಷಿಯಾಗಿತ್ತು. ಪ್ರಸಂಗಗಳ ಸಿಡಿಲೇಟಿನಿಂದ ಅವಳು ಚೇತನಾಶಕ್ತಿಯನ್ನು ಕಳೆದುಕೊಂಡಿದ್ದಳು. ಹೃದಯ ಸಿಡಿದುಹೋಗುವಂತಿತ್ತು. ಅವಳ ಜೀವ ಯಾವುದೋ ಕಗ್ಗತ್ತಲೆಯ ಬೀಡಿನಲ್ಲಿ ಬೆಂದು ತೊಳಲುತ್ತಿತ್ತು. ನಿರಾಶೆಯ ಕರಾಳ ಕಡಲಿನಲ್ಲಿ ಅವಳ ಜೀವಿತ ನೌಕೆಯನ್ನು ಸುತ್ತಲಿಂದ ಉರುಳಿಬರುತ್ತಿದ್ದ ತೆರೆಗಳ ಮೇಲೆ ಪೈಶಾಚಿಕ ಶಕ್ತಿಗಳು ಭರದಿಂದ

ಹುಟ್ಟುಹಾಕುತ್ತಿದ್ದವು. ಮೇಲೆ ತೂಗುತ್ತಿದ್ದ ಕಾರ್ಮುಗಿಲಿನಿಂದ ಪ್ರಚಂಡ ವಾದ ಗುಡುಗು ಇಳಿದುಬಂದು ಆ ನೌಕೆಯನ್ನು ಬಡಿಯಿತು. ಮುಗಿಲೊಡ ಲಿನಿಂದ ಸಿಡಿದುಬಂದ ಮಿಂಚು ಬಾಣ ಇಂದಿರೆಯ ದೃಷ್ಟಿಯನ್ನು ಚೂರು ಚೂರು ಮಾಡಿತು. ಅವಳ ಜೀವತಂತುಗಳು ತಲ್ಲಣಿಸಿದವು.

ಅದೆಷ್ಟೋ ಹೊತ್ತು ಇಂದಿರೆ ಬಾಹ್ಯಪ್ರಜ್ಞೆಯಿಲ್ಲದೆ ಶಿಲಾಮೂರ್ತಿಯಂತೆ ಬಿದ್ದಿದ್ದಳು. ಸ್ತಂಭಿತವಾದ ಮನಸ್ಸಿನಲ್ಲಿ ಚೇತನಶಕ್ತಿ ಮೂಡಿದಾಗ ನಡು ರಾತ್ರಿಯಾಗಿತ್ತು. ಬೆಳಗೆಲ್ಲ ತಳಮಳಗೊಂಡ ಜೀವರಾಶಿಗಳು ನಿದ್ರಾದೇವಿಯ ತಾಯ ತೊಡೆಯ ಮೇಲೆ ಉಯ್ಯಾಲೆಯಾಡುತ್ತಿದ್ದವು. ನಿದ್ರೆಯಲ್ಲಿ ಆ ಪ್ರಾಣಿ ಗಳ ಹೆಣಗಾಟಕ್ಕೆ ವಿಶ್ರಾಂತಿ ಸಿಕ್ಕಿತ್ತು. ಆದರೆ ಇಂದಿರೆಯ ಆಂತರ್ಯ ಬೆಂಕಿಯ ಮೂಟೆಯಾಗಿತ್ತು. ಕೊಟಡಿಯಲ್ಲಿ ಮಂದವಾದ ಕತ್ತಲು ಎಡೆಬಿಡದೆ ತುಂಬಿತ್ತು. ವಿದ್ಯುದ್ದೀಪ ಆರಿತ್ತು. ಯಾವಾಗ ಯಾರು ಅದನ್ನು ಆರಿಸಿದರೆಂಬುದು ಅವಳಿಗೆ ನೆನಪಾಗಲಿಲ್ಲ. ಬಹುಶಃ ತಾನೇ ಆರಿಸಿರಬಹುದು. ಪಕ್ಕದ ಕಿಟಕಿ ಯಿಂದ ಚಂದ್ರನ ಶುಭ್ರಕಿರಣಗಳು ಕೊಟಡಿಯೊಳಕ್ಕೆ ಇಣಿಕಿ ನರ್ತಿಸುತ್ತಿದ್ದವು. ಇಂದಿರೆಯ ಬದುಕಿನಲ್ಲಿ ತುಂಬಿದ್ದುದು ಮಂದವಾದ ಕತ್ತಲು. ಅವಳ ಬದುಕಿನ ಒಂದೇ ಬೆಳಕಿನ ಕಿಟಕಿಯೂ ಈಗ ಮುಚ್ಚಿಹೋಗಿತ್ತು. ಇಂದಿರೆ ನೋಡು ತ್ತಿರುವಂತೆಯೇ ಒಂದು ಭಾರವಾದ ಮೋಡ ಚಂದ್ರನನ್ನು ಮರೆಮಾಡಿತು. ಕಿಟಕಿಯಲ್ಲಿ ಚೆಲ್ಲಿದ್ದ ಸ್ವಲ್ಪ ಬೆಳಕೂ ಕತ್ತಲೆಯ ತೆಕ್ಕೆಗೆ ಸಿಕ್ಕಿಹೋಯಿತು. ಇಂದಿರೆ ಎದ್ದು ದೀಪವನ್ನು ಹಚ್ಚಿದಳು.

ಇಂದಿರೆಯ ಮೋಹಕ ರೂಪದೊಡನೆ ಭೀಷಣತೆ ಬೆರೆತಿದ್ದಿತು. ಅವಳ ಕೇಶರಾಶಿ ಕೆದರಿಹೋಗಿತ್ತು. ಕೆಂಪೇರಿದ ಅವಳ ಕಣ್ಣುಗಳಿಂದ ನೀರು ಸುರಿದು ಬರಿದಾಗಿದ್ದವು. ಕುರ್ಚಿಯ ಮೇಲೆ ಸುಮ್ಮನೆ ಕುಳಿತಳು. ಅಂತರಂಗದಲ್ಲಿ ಭಾವನೆಗಳ ತಾಂಡವನೃತ್ಯ ನಡೆಯುತ್ತಿತ್ತು. ಎದುರಿಗಿದ್ದ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ಕಾಣಿಸಿತು. ತಾನು ಎಂತಹ ಸುಂದರಾಂಗಿ! ಕನ್ನಡಿಯನ್ನು ಕಬಳಿಸುವಂತೆ ದೃಷ್ಟಿಯನ್ನು ಚಿಮ್ಮಿದಳು. ತುಟಿ ಕಚ್ಚಿದಳು. ಆ ಕನ್ನಡಿಯನ್ನು ಒಮ್ಮೆ ಸಹಸ್ರ ಚೂರು ಮಾಡಬೇಕೆನಿಸಿತು. ಹಾಗೆ ಮಾಡಲಿಲ್ಲ. ಕಣ್ಣನ್ನು ಹಿಂದಕ್ಕೆ ಸೆಳೆದುಕೊಂಡಳು.

ಇಂದಿರೆಯ ಕಣ್ಣಿನ ಮುಂದೆ ಯಾವುದೋ ನಾಟಕ ತೆರೆತೆರೆಯಾಗಿ

ಮೂಡಿಹೋಯಿತು. ಅದು ಅವಳ ಜೀವನ ನಾಟಕವೇ. ತನ್ನ ಬದುಕಿನ ವಸಂತಕಾಲದ ವರ್ಣರಂಜಿತ ಚಿತ್ರಗಳು ನಿಧಾನವಾಗಿ ತೇಲಿಹೋದವು. ಆ ದಿನಗಳ ಅವಳ ಬದುಕಿನಲ್ಲಿ ಇನ್ನೂ ಎದೆಯರಳದೆ ಕಂಗೊಳಿಸುವ ಆಸೆಯ ತುಂಬು ಮೊಗ್ಗುಗಳೇ. ಹಸುರು ತುಂಬಿದ ಆ ತೋಟದಲ್ಲಿ ಚಿತ್ತವು ಆಸೆಯ ಒಂದು ಬಳ್ಳಿಯಿಂದ ಮತ್ತೊಂದು ಬಳ್ಳಿಗೆ ತೂರಾಡುವುದು ಆ ವನದಲ್ಲಿಯ ಸರ್ವಾಂಗಗಳಲ್ಲಿಯೂ ಹೊಸ ಚಿಗುರು, ಹೊಸ ಕುಡಿಗಳು. ಶುಭ್ರವಾಗಿ ಹಬ್ಬಿರುವ ವಿಶಾಲವಾದ ನೀಲಾಕಾಶ. ಮನುಷ್ಯನ ಆಸೆಯೂ ಅಷ್ಟೇ ವಿಶಾಲ ವಾದುದು. ಅವನು ಯೌವನದ ಅಮಲಿನಲ್ಲಿ ಆಕಾಂಕ್ಷೆಯ ರೆಕ್ಕೆಯನ್ನೇರಿ ಭ್ರಾಂತನಾಗಿ ಸುತ್ತಾಡುತ್ತಾನೆ. ಆಗ ಅವನು ಬದುಕಿನ ಅನೇಕ ಶಕ್ತಿಗಳಿಂದ ಪ್ರಚಲಿತನಾಗುತ್ತಾನೆ. ಅವುಗಳಲ್ಲಿ ಪ್ರಧಾನ ಶಕ್ತಿ ಪ್ರೇಮ, ಬಾಳಿನ ಮಹಾ ಸೂತ್ರ. ಇಂದಿರೆಯೂ ತನ್ನ ಯೌವನದ ತೋಟದಲ್ಲಿ ವಸಂತಋತುವನ್ನು ಕಂಡಳು. ಅವಳ ಹೃದಯದಲ್ಲಿಯೂ ಪ್ರೇಮಾಂಕುರವಾಯಿತು. ಅದು ಚಿಗುರಿ ಕುಡಿಯೊಡೆಯಿತು. ಅವಳು ಕನಸಿನ ಗೋಪುರವನ್ನು ಕಟ್ಟಿಕೊಂಡಳು. ತನ್ನ ಬಾಳ ನೌಕೆಯನ್ನು ನಡೆಸುವ ನಾವಿಕನನ್ನು ಹುಡುಕಿಕೊಂಡಳು. ಅವನೇ ಆನಂದ. ಅವನೂ ಅವಳ ಹೃದಯವನ್ನು ಅನುರಾಗಗಳಿಂದ ತುಂಬಿದ. ಆದರೆ ವಿಧಿಯ ಕ್ರೀಡೆ ಇಂದಿರೆಗೆ ಅಶುಭವಾಯಿತು. ತರುಣದಲ್ಲಿಯೇ ಅವಳ ದೋಣಿ ಬಿರುಗಾಳಿಗೆ ಸಿಕ್ಕಿತು. ಬುಗುರಿಯಂತೆ ಅದು ಸುತ್ತಾಡಿತು. ಅವಳ ಧ್ಯೇಯದ ಗುರಿಯಿಂದ ಅದನ್ನು ಎಲ್ಲಿಗೋ ಹೊಡೆದುಕೊಂಡುಹೋಯಿತು. ಅವಳಿಗೆ ವಜ್ರಾಘಾತವಾಯಿತು. ಅಂದೇ ಅವಳಿಗೆ ಬದುಕು ಬರಿದಾಯಿತು. ಆದರೆ ಮುಗಿಲು ಮುಸುಕಿದ ಅವಳ ಬಾಳಿನಲ್ಲಿ ಬೇರೆಯೊಂದು ತಾರೆ ಉದಯ ವಾಯಿತು. ಅದು ತನ್ನ ಬದುಕಿನ ಬೆಳಕಾಗಬಹುದೆಂದು ಮೊದಲು ಇಂದಿರೆ ಎಣಿಸಿರಲಿಲ್ಲ. ಆದರೆ ಸನ್ನಿವೇಶಗಳ ಪ್ರೇರೇಪಣೆಗಳು ಅವಳಲ್ಲಿ ಬೇರೆಯೊಂದು ಆಸೆಯನ್ನು ಹೊತ್ತಿಸಿದವು. ಆ ಆಸೆ, ಮುರಿದುಹೋಗಿದ್ದ ಅವಳ ನೌಕೆಗೆ ದೀವಟಿಗೆಯಾಯಿತು. ಆಸೆ–ನಿರಾಶೆಗಳ ಮಧ್ಯೆ ತೂಗಾಡಿ ಬಳಲಿ ಇಂದಿರೆಯ ಮನಸ್ಸು ಆಸೆಯನ್ನೇ ಮತ್ತೆ ಆಶ್ರಯಿಸಿತು. ಅವಳು ಮತ್ತೆ ಆಶಾವಾದಿ ಯಾದಳು. ರಾಜು ಅವಳ ಬಾಳನೌಕೆಯನ್ನು ಬೇರೆ ದಿಕ್ಕಿನಲ್ಲಿಯಾದರೂ ದಂಡೆ ಮುಟ್ಟಿಸಬಹುದೆಂದು ಅವಳು ಹೊಸ ಕನಸನ್ನು ಕಟ್ಟಿಕೊಂಡಳು.

ಆ ದಿಕ್ಕಿನಲ್ಲಿಯೂ ವಿಧಿ ತನ್ನ ಕರ್ಕಶವಾದ ತೋಳನ್ನು ಅಡ್ಡ ಹಾಕಿತು. ಕೆಲವೇ ಗಂಟೆಗಳಲ್ಲಿ ರಾಜು ಅವಳ ಬಾಳಗೆಳೆಯನಾಗಲಾರದೆ ಬಹಳ ದೂರ ಉಳಿದುಹೋದ. ಮತ್ತೆ ಇಂದಿರೆಗೆ ಪ್ರೇಮಭಂಗ. ಕಡೆಗೂ ಅವಳ ಬಾಳು ದಂಡೆ ಮುಟ್ಟಲಿಲ್ಲ. ಈಗ ಅವಳ ಬದುಕನ್ನು ನಿರಾಶೆ ಮತ್ತೆ ರಣಹದ್ದಿನಂತೆ ಕುಕ್ಕುತ್ತಿದೆ. ಅವಳಿಗೆ ಒಂದು ಆಶಾಕಿರಣವೂ ಕಾಣುತ್ತಿಲ್ಲ. ಮತ್ತೆ ಬೆಳಗಾಗುತ್ತದೆ. ಆದರೆ ಆ ಬೆಳಕಿನಲ್ಲಿ ಅವಳ ಪಾಲಿನ ಕತ್ತಲು ನಿಬಿಡವಾಗಿದೆ. ಬದುಕಿನ ಶೃಂಗಾರವನ ಅವಳ ಪಾಲಿಗೆ ಮಸಣದಂತೆ. ಅವಳ ರೂಪರಾಶಿಯೆಲ್ಲ ಒಂದು ಅಣಕವಾಗಿ ಉಳಿದಿದೆ. ಹೆಣ್ಣು ಹೃದಯ! ಮೊದಲ ಪ್ರೇಮಭಂಗವೇ ಅವಳ ಹೃದಯವನ್ನು ಅಪ್ಪಳಿಸಿ ಜರ್ಝರಮಾಡಿತು. ಒಡೆದು ಚೂರಾಗಿದ್ದ ಆಸೆಯನ್ನು ಮತ್ತೆ ಕೂಡಿಸಿಕೊಂಡಳು. ಮತ್ತೆ ಎರಡನೆಯ ಪೆಟ್ಟು. ಎಲ್ಲ ಮುಗಿಲಮಲ್ಲಿಗೆ!

ಇಂದಿರೆ ಕಿಟಕಿಯಿಂದ ಹೊರಗೆ ನೋಟ ಬೀರಿದಳು. ಪಕ್ಕದ ಮರದ ರೆಂಬೆಗಳು ಚಂದ್ರೋದಯದಲ್ಲಿ ಮರಮರ ತೋಳಾಡಿಸುತ್ತಿದ್ದವು. ಮನುಷ್ಯನು ನಿರಂತರವೂ ಬದುಕಿಗಾಗಿ ನಡೆಸುತ್ತಿರುವ ಹೋರಾಟದ ನೆನಪಾಯಿತು. ಆಕಾಶವೊಂದು ಚಿತ್ರಪಟದಂತೆ ಕಂಡಿತು. ಅಲ್ಲಲ್ಲಿ ತಾರೆಗಳು ಮಿಣುಕುತ್ತಿದ್ದವು. ಅವುಗಳ ಮಿನುಗು ಇಂದಿರೆಯ ನೋಟವನ್ನು ಅಣಕಿಸುವಂತಿತ್ತು. ಅವು ವಿಧಿ ನೀಲಾಕಾಶದಲ್ಲಿ ಅಲ್ಲಲ್ಲಿ ಬಗೆದಿರುವ ಉರಿಯುವ ವ್ರಣಗಳಂತೆ ಕಂಡವು. ರೆಪ್ಪೆ ಮುಚ್ಚಿ ಇಂದಿರೆ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಳು. ಮತ್ತೆ ಕಣ್ಣು ಬಿಟ್ಟಳು. ಅವಳ ನೋಟ ಉಜ್ವಲವಾಗಿತ್ತು. ಕಣ್ಣು ಮಿನುಗಿತು. ಮುಖದಲ್ಲಿ ಏನೋ ವಿಲಕ್ಷಣವಾದ ನಿರ್ಧಾರವಿತ್ತು. ನಿರಾಶೆಯಿಂದ ಬಲಿತಿದ್ದ ಆ ನಿರ್ಧಾರವನ್ನು ವಿಧಿಯೂ ಅಲುಗಿಸುವಂತಿರಲಿಲ್ಲ. ಮೇಜಿನ ಮೇಲಿದ್ದ ಕಾಗದ ಲೇಖನಿಗಳ ಕಡೆಗೆ ಕಣ್ಣು ಹೊರಳಿತು. ಅವಳು ಏನೋ ಬರೆಯುವುದಕ್ಕೆ ಆರಂಭಿಸಿದಳು.

## ೫೬

ರಾತ್ರಿ ಗೋಪಾಲರಾಯರಿಗೆ ನಿದ್ರೆಹತ್ತಲಿಲ್ಲ. ಅವರು ಬಹಳ ಹೊತ್ತು ಹಾಸಿಗೆಯ ಮೇಲೆ ಹೊರಳಾಡಿದರು. ಲಕ್ಷ್ಮಮ್ಮನವರಿಗೂ ಏನೋ ಮಾನಸಿಕ ತೊಳಲಾಟ. ವಿಚಾರಗಳ ಬುಗ್ಗೆಯಲ್ಲಿಯೇ ಅವರಿಬ್ಬರೂ ರಾತ್ರಿಯ ಕೆಲವು ಗಂಟೆಗಳನ್ನು ನೂಕಿದರು.

" ಇಂದಿರೆಯ ವಿಚಾರ ಇನ್ನೂ ಯೋಚನೆ ಮಾಡಬೇಡವೆ ? "

" ಅದೇ ವಿಚಾರವೇ ನನ್ನ ತಲೆ ತುಂಬಿಕೊಂಡಿದೆ."

" ಹೀಗೆ ಸುಮ್ಮನೆ ಇದ್ದುಬಿಟ್ಟರೆ ಹೇಗೆ? ಅವಳಿಗೆ ಪ್ರಾಯ ಬಂದರೂ ಮದುವೆಯ ಯೋಚನೆ ಮಾಡಬೇಡವೆ ? "

" ರಾಜುವಿನ ಕತೆ ಗೊತ್ತಾದಾಗಿನಿಂದ ನನಗೆ ಏನೂ ತೋಚುತ್ತಿಲ್ಲ."

" ರಾಜುವಿನ ಸಂಬಂಧದ ಯೋಚನೆ ಬೇಡ."

" ಉಂಟೆ! ಅಂತಹವರು ನಮ್ಮ ಮನೆ ಹೊಸಿಲನ್ನೂ ತುಳಿಯಬಾರದು."

ತಾವು ರಾತ್ರಿ ಊಟದ ಸಮಯದಲ್ಲಿ ಇಂದಿರೆಯ ಮನಸ್ಸನ್ನು ನೋಯಿಸಿರಬಹುದೆಂದು ಗೋಪಾಲರಾಯರು ಶಂಕಿಸಿದರು. ಅನಂತರವಾದರೂ ಎರಡು ಸಮಾಧಾನದ ಮಾತನಾಡಬೇಕಾಗಿತ್ತೆಂದು ಚಿಂತಿಸಿದರು. ಇಂದಿರೆಯೊಡನೆ ಪುನಃ ನಲಿವಿನಿಂದ ಮಾತನಾಡುವವರೆಗೂ ಅವರ ಮನಕ್ಕೆ ಶಾಂತಿಯಿರಲಿಲ್ಲ.

" ಸರಿಯಾದ ವರನನ್ನು ನೋಡಿ ಬೇಗ ಮದುವೆಯ ಯೋಚನೆ ಮಾಡಿ. ಆನಂದನ ದಾರಿ ಹಾಗಾಯಿತು, ರಾಜುವಿನ ದಾರಿ ಹೀಗಾಯಿತು. ನನಗೆ ತುಂಬ ಯೋಚನೆಯಾಗಿದೆ."

" ಯೋಚನೆ ಏಕೆ? ನಿನ್ನ ಇಷ್ಟದಂತೆ ಬೇಗ ಎಲ್ಲ ನಡೆಸೋಣ " ಎಂದು ಗೋಪಾಲರಾಯರು ಮಾತನ್ನು ಮುಗಿಸಿದರೂ ಅವರ ಮನಸ್ಸಿನಲ್ಲಿ ಯೋಚನೆಗಳು ಆಳವಾಗಿ ಊರಿದ್ದವು.

ಲಕ್ಷ್ಮಮ್ಮನವರ ಸೂಚನೆ ಗೋಪಾಲರಾಯರ ಮನಸ್ಸನ್ನು ಹೊಕ್ಕಿತು. ತಮ್ಮ ಕರ್ತವ್ಯವನ್ನು ಬಹಳ ಮುಂದೆ ಹಾಕಿದಂತೆ ಅವರಿಗೆ ಭಾವನೆಯಾಯಿತು. ಶೀಘ್ರದಲ್ಲಿ ಇಂದಿರೆಯ ಮದುವೆಯನ್ನು ನಡೆಸಲು ನಿಶ್ಚಯಿಸಿಕೊಂಡರು. ಇರುಳಿನ ಗಂಟೆಗಳು ಆಲೋಚನೆಯಲ್ಲಿಯೇ ಜಾರಿಹೋದವು. ಅರೆನಿದ್ರೆಯ ಆ ರಾತ್ರಿಯಲ್ಲಿ ಲಕ್ಷ್ಮಮ್ಮನವರು ಹಾಸಿಗೆಯ ಮೇಲೆ ಹೊರಳಾಡಿದರು. ಗೋಪಾಲರಾಯರ ಕಣ್ಣೆವೆ ಅರೆ ಮುಚ್ಚಿತ್ತು. ಲಕ್ಷ್ಮಮ್ಮನವರ ತೊಳಲಾಟ ಅವರ ಅರೆ ನಿದ್ರೆಯನ್ನು ಪದೇ ಪದೇ ಅಟ್ಟುತ್ತಿತ್ತು. ನಡುರಾತ್ರಿ ಮೀರಿ ಹೋಗಿತ್ತು. ಲಕ್ಷ್ಮಮ್ಮನವರು ಅವರ ತೋಳನ್ನು ಭದ್ರವಾಗಿ ಹಿಡಿದುಕೊಂಡರು. ಗೋಪಾಲರಾಯರೂ ಗಾಬರಿಗೊಂಡರು.

" ಏಕೆ, ಏನಾಯಿತು ? " ಎಂದರು ಅರ್ಧ ಎಚ್ಚರದಲ್ಲಿಯೇ.

" ನನಗೇನೋ ಸಂಕಟ."

" ದೀಪ ಹಚ್ಚಲೇ ? " ನಿದ್ದೆಯ ತೊದಲಿನಲ್ಲಿ ಕೇಳಿದರು.

ಆ ಮಾತಿಗೆ ಲಕ್ಷ್ಮಮ್ಮನವರಿಂದ ಉತ್ತರ ಬರಲಿಲ್ಲ. ಮತ್ತೆ ನಿದ್ದೆ ಹತ್ತಿತು. ನಿದ್ದೆಯಲ್ಲಿ ಇಬ್ಬರೂ ತಮ್ಮ ಮನೋವ್ಯಾಪಾರಗಳನ್ನು ತೇಲಿಬಿಟ್ಟರು.

ಲಕ್ಷ್ಮಮ್ಮನವರು ಆಗತಾನೆ ಎದ್ದು ಅಡಿಗೆಮನೆಯಲ್ಲಿ ಅಡ್ಡಾಡುತ್ತಿದ್ದರು. ಗೋಪಾಲರಾಯರು ಹಾಸಿಗೆಯ ಮೇಲೆ ಎದ್ದು ಕುಳಿತರು. ರಾತ್ರಿಯ ನಿದ್ದೆ ಪೂರ್ತಿಯಾಗದೆ ಕಣ್ಣೆವೆಯ ಮೇಲೆ ಸ್ವಲ್ಪ ಉಳಿದು ದೃಷ್ಟಿಯನ್ನು ಮಂದ ಮಾಡಿತ್ತು. ತಕ್ಷಣ ಅವರಿಗೆ ಇಂದಿರೆಯ ನೆನಪಾಯಿತು. ಪ್ರತಿದಿನವೂ ಆ ಹೊತ್ತಿಗೆ ಇಂದಿರೆ ಹಾಸಿಗೆಯನ್ನು ಬಿಟ್ಟಿದ್ದಿರುತ್ತಿದ್ದಳು. ಆದರೆ ಇಂದು ಆ ಸೂಚನೆ ಕಾಣಲಿಲ್ಲ. ಅವಳ ಧ್ವನಿ ಕೇಳಲಿಲ್ಲ. ಅವಳಿಗಾಗಿ ಪ್ರೀತಿಯ ಹೊನಲು ಅವರ ಹೃದಯವನ್ನು ತುಂಬಿತು. ಏನೋ ಕರುಳಿನ ಪ್ರೇರೇಪಣೆಯಿಂದ ಅವರು ಆ ಕ್ಷಣ ಎದ್ದುಹೋಗಿ ಇಂದಿರೆಯ ಕೊಟಡಿಬಾಗಿಲನ್ನು ತೆರೆದರು.

ಇಂದಿರೆ ಎಚ್ಚತ್ತಂತೆ ಕಾಣಲಿಲ್ಲ. ಸ್ವಲ್ಪ ಹೊತ್ತು ಅವಳ ದಾರಿಕಾದರು. ಅವರಿಗೇಕೋ ಗಾಬರಿಯಾಯಿತು. " ಇಂದಿರಾ ", " ಇಂದಿರಾ " ಎಂದು ಎರಡು ಬಾರಿ ಕೂಗಿದರು. ನಿರುತ್ತರ. ಹಾಸಿಗೆಯ ಬಳಿಗೆ ಹೋದರು. ಅವಳ ಶರೀರ ನಿಶ್ಚೇಷ್ಟಿತವಾಗಿತ್ತು. ಮಂಜಿನಂತೆ ಮೈ ತಣ್ಣಗಾಗಿತ್ತು. ಅವಳ ಪ್ರಾಣಪಕ್ಷಿ ಹಾರಿಹೋಗಿ ಕೆಲವು ಗಂಟೆಗಳಾಗಿದ್ದವು. ಹಾಸಿಗೆಯ ಪಕ್ಕದಲ್ಲಿ ಒಂದು ಜಜ್ಜಿಹೋದ ಉಂಗುರವಿತ್ತು. ಅದರಲ್ಲಿದ್ದ ವಜ್ರದ ಹರಳು ಅಲ್ಲಿರಲಿಲ್ಲ. ಅದು ಪುಡಿಪುಡಿಯಾಗಿ ಬಿದ್ದಿತ್ತು. ಪುಡಿ ನೆಲದ ಮೇಲೆ ಇನ್ನೂ ಸ್ವಲ್ಪ ಉಳಿದಿತ್ತು. ಅಲ್ಲಿಯೇ ಇದ್ದ ಬಟ್ಟಲಿನ ತಳಕ್ಕೂ ಸ್ವಲ್ಪ ಅಂಟಿಕೊಂಡಿತ್ತು. ಅದನ್ನೆಲ್ಲ ನೋಡಿ ಗೋಪಾಲರಾಯರು ಪ್ರಜ್ಞಾಶೂನ್ಯರಾದರು. ' ಅಯ್ಯೋ ' ಎನ್ನುವುದಕ್ಕೂ ಉಸಿರಿರಲಿಲ್ಲ. ಅವರ ಕಣ್ಣು ಕೊಟಡಿಯ ಸುತ್ತ ಮಿಂಚಿತು. ಹತ್ತಿರದಲ್ಲಿ ಒಂದು ಪತ್ರ ಕಾಣಿಸಿತು. ನಡುಗುತ್ತಿದ್ದ ಅವರ ಕೈಗಳಿಂದ ಪತ್ರ ಜಾರಿಹೋಗುತ್ತಿತ್ತು. ಅದರಲ್ಲಿ ಇಂದಿರೆಯ ಅಕ್ಷರಗಳು ಬೆಂಕಿಯ ಕಿಡಿಗಳಂತೆ ಚೆಲ್ಲಿದ್ದವು. ನೆಲದ ಮೇಲೆ ಕುಸಿದು ಕುಳಿತರು. ಪತ್ರವನ್ನು ಪೂರ್ತಿಯಾಗಿ ಓದಿದರು. ಹೃದಯ ಸಿಡಿದುಹೋಗುತ್ತಿತ್ತು.

ಅಪ್ಪ,

ಹತಭಾಗಿನಿಯಾದ ನನ್ನ ಈ ಪತ್ರವನ್ನೋದಿದಾಗ ನಿಮಗಾಗುವ ದುಃಖವೆಷ್ಟೆಂಬುದನ್ನು ತಿಳಿದೂ ನಾನು ಈ ಪತ್ರವನ್ನು ಬರೆದಿದ್ದೇನೆ. ನನ್ನ ಕೃತ್ಯದ ಪೂರ್ಣ ಪರಿಜ್ಞಾನ ನನಗಿದೆ. ನನ್ನ ಈ ಕೊನೆಯ ನಿರ್ಧಾರದಲ್ಲಿಯೂ ನಾನು ವಿವೇಕಶೂನ್ಯಳಾಗಿ ವರ್ತಿಸಿಲ್ಲವೆಂದೇ ನನ್ನ ನಂಬಿಕೆ. ನನ್ನ ಜೀವನದಲ್ಲಿ ಮುಗಿದುಹೋದ ಪ್ರಕರಣಗಳ ಅರಿವು ನಿಮಗಿದೆ. ಆದರೆ ಈ ಪ್ರಕರಣಗಳ ಪರಿಣಾಮವಾಗಿ ಈ ಜೀವ ಎಷ್ಟು ನೊಂದಿದೆ ಎಂಬುದನ್ನು ನೀವು ಊಹಿಸಿಕೊಳ್ಳಲು ಸಾಧ್ಯವಾಗದು.

ಹೆಂಗಸಿನ ಹೃದಯ ಒಳಗೇ ಬೇಯುತ್ತದೆ. ಹೆಂಗಸು ಹೆಚ್ಚು ಅಂತ ರಂಗ ಜೀವಿ. ಅವಳ ಬಾಳಿನಲ್ಲಿ ಆದ ಎಲ್ಲ ವಿಪಾಕಗಳೂ ಅಂತರಂಗ ದಲ್ಲಿಯೇ ಸುಟ್ಟು ಗತಿಗಾಣಬೇಕು. ಪ್ರೇಮ ಅವಳ ಹೃದಯದಲ್ಲಿ ಬಲು ಬೇಗ ಮೊಳೆತು, ಬಲಿತು ಮನೆ ಮಾಡಿಬಿಡುವುದು. ಫಲಿಸಿದ ಪ್ರೇಮವೆ ಅವಳ ಬಾಳಿನ ಮಂಗಳಸೂತ್ರವಾಗುವುದು. ಫಲಿಸದೆ ನಿರಾಶೆಯಲ್ಲಿ ಕೊನೆಗೊಂಡರೆ ಅದು ಅವಳ ಬಾಳಿನ ಕೊನೆಯ ಗಳಿಗೆಯವರೆಗೆ ಸುಡುವ ಅಂತರಾಗ್ನಿಯಾಗುವುದು. ವಿಚಾರಗಳ ಮಥನಕ್ಕಿಂತ ಹೆಚ್ಚಾಗಿ ಭಾವ ಗಳ ಲೀಲೆಯೇ ಹೆಣ್ಣಿನ ಬದುಕನ್ನು ನಿರ್ಧರಿಸುವ ಶಕ್ತಿಯಾಗಿದೆ. ನನ್ನ ಬದುಕಿನಲ್ಲಿ ಎರಡು ಶಕ್ತಿಗಳೂ ನನಗೆ ಒಂದೇ ದಾರಿಯನ್ನು ತೋರಿ ಸಿವೆ. ಬೇರೆ ಯಾವುದೋ ಕಾಣದ ಕೈ ನನ್ನನ್ನು ಅದೇ ದಾರಿಯಲ್ಲಿ ಭರದಿಂದ ಅಟ್ಟಿಕೊಂಡು ಹೋಗಿದೆ. ಅದು ದಾರಿಯಲ್ಲಿ ಅದೆಷ್ಟೋ ಬಾರಿ ನನ್ನೊಡನೆ ಆಸೆ–ನಿರಾಶೆಗಳ ಆಟವನ್ನಾಡಿದೆ. ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ವಿಧಿ ತಂದೊಡ್ಡಿದ ಪ್ರಸಂಗಗಳ ಸುಳಿಗೆ ನಾನು ಸಿಕ್ಕಿಹೋದೆ. ಅದು ನನ್ನನ್ನು ಎತ್ತ ಹೊಡೆದುಕೊಂಡು ಹೋದರೆ ಅತ್ತ ಗತ್ಯಂತರವಿಲ್ಲದೆ ನಡೆದೆ. ಆದರೆ ಆ ಶಕ್ತಿ ನನ್ನನ್ನು ಅಟ್ಟಿಕೊಂಡು ಹೋದುದು ಬದುಕಿನ ಬೀಡಿಗಲ್ಲ, ನಿರಾಶೆಯ ಮರಳುಗಾಡಿಗೆ. ಬಾಳ ಮುಳುಗು–ತೇಲಿನಲ್ಲಿ ಕೊನೆಗೂ ವಿಧಿ ನನ್ನ ಬಾಳನ್ನು ಮುಳುಗಿಸಿ ಬಿಟ್ಟಿತು.

ನನ್ನ ಬದುಕಿನ ಕೆಲವು ಸಮಸ್ಯೆಗಳನ್ನು ನಾನೇ ಬಿಡಿಸಿಕೊಳ್ಳುವಾಗ

ಕೆಲವು ತಪ್ಪು ಹೆಜ್ಜೆಗಳನ್ನು ಹಾಕಿದೆನೆಂದು ಈಗ ನನಗೆ ಅರಿವಾಗಿದೆ. ಆದರೆ ಆಗ ಕಾಲನ ಕಪ್ಪು ತೆರೆಯ ಹಿಂದೆ ಇದ್ದುದನ್ನು ಯಾರೂ ಕಾಣುವಂತಿರಲಿಲ್ಲ. ಆಗ ವಿವೇಚನೆ ನನ್ನನ್ನು ಅಂತೆಯೇ ನಡೆಯುವಂತೆ ಪ್ರೇರೇಪಿಸಿತು. ನನ್ನ ಪರಿಸ್ಥಿತಿಯಲ್ಲಿ ಎಲ್ಲ ಹೆಣ್ಣುಹೃದಯಗಳಲ್ಲಿದ್ದುದೂ ಬಹುಶಃ ಅದೇ ಮಿಡಿತವೇ. ಬದುಕಿನಲ್ಲಿ ನಿಜವಾಗಿ ನಾನು ಯಾವ ತಪ್ಪನ್ನೂ ಮಾಡಿಲ್ಲವೆಂದೇ ಈಗಲೂ ನನಗನ್ನಿಸುತ್ತಿದೆ. ಯಾವ ತಪ್ಪನ್ನು ಮಾಡದಿದ್ದರೂ ನನ್ನ ಪಾಲಿಗೆ ಉಳಿದುಬಂದದ್ದು ಶೂನ್ಯ! ಬಹುಶಃ ಹೆಣ್ಣುಬದುಕಿನ ಸೂತ್ರದಲ್ಲಿಯೇ ಏನೋ ಕೇಡಿರಬಹುದು.

ನನ್ನನ್ನು ನೀವು ಪ್ರೀತಿಯಿಂದ ಸಾಕಿದಿರಿ. ಮಮತೆಯಿಂದ ಬೆಳಸಿದಿರಿ, ಕಷ್ಟವನ್ನೇ ಕಾಣದಂತೆ. ನನ್ನ ಬಾಳು ಹೂವಿನ ಹಾಸಿಗೆಯಾಗಬೇಕೆಂದು ಹಂಬಲಿಸಿದಿರಿ. ನಾನೂ ಬಣ್ಣದ ಆಸೆಗಳನ್ನು ಕಟ್ಟಿಕೊಂಡೆ. ನಾನೇ ಕಟ್ಟಿಕೊಂಡ ಕನಸಿನ ಮಂದಿರಗಳಲ್ಲಿ ಸ್ವೇಚ್ಛೆಯಾಗಿ ವಿಹಾರ ಮಾಡತೊಡಗಿದೆ. ಆದರೆ ಬರಿ ಕನಸಿನ ಬದುಕು ಮನುಷ್ಯನ ಆಸೆಯನ್ನು ಹಿಂಗಿಸುವುದಿಲ್ಲ. ಅದು ಬೇಗ ತಿರುಳಿಲ್ಲದಾಗುವುದು. ಪ್ರೇಮದ ಬೇಗೆಯಲ್ಲಿ ಹೃದಯ ತೊಳಲಾಡುವುದು. ಆ ತೊಳಲಾಟದಲ್ಲಿಯೂ ಹಿತವನ್ನೇ ಕಾಣುವುದು. ಆ ಹಿತ ಬೇರೂರಿರುವುದು ನಾಳಿನ ಆಸೆಯಲ್ಲಿ.

ಪ್ರಣಯಾಗ್ನಿಯಲ್ಲಿ ಬಿದ್ದು ನಾನು ಪತಂಗದಂತೆ ಸುಟ್ಟುಹೋದೆ. ನನ್ನ ಹೃನ್ಮನಗಳ ಮೇಲೆ ಪ್ರಭಾವವನ್ನೊತ್ತಿದ ಮೊದಲನೆಯ ವ್ಯಕ್ತಿ ಆನಂದ. ಅವನನ್ನು ತಂದು ದೈವ ನಮ್ಮ ಮನೆಯನ್ನು ಸೇರಿಸಿತು. ಕೆಲವೇ ದಿನಗಳಲ್ಲಿ ಅವನು ನನ್ನ ಅಂತರಂಗವಲಯದಲ್ಲಿ ಮನೆಮಾಡಿದ. ಆ ಸಾಮ್ರಾಜ್ಯಕ್ಕೆ ಸ್ವಾಮಿಯಾದ. ಅವನಿಗಾಗಿ ನನ್ನ ಪ್ರೇಮದಳ ಬಿಚ್ಚಿ ಅರಳಿತು. ಅವನ ಬಗ್ಗೆ ನನ್ನಲ್ಲಿ ಪ್ರೇಮದ ಉದಯವಾಯಿತು. ಆ ಪ್ರೇಮ ಫಲಿಸಿದ್ದರೆ ನನ್ನ ಜೀವನದ ಹಾಡೇ ಬೇರೆಯಾಗುತ್ತಿತ್ತು. ಜೀವನದ ಎಲ್ಲ ಋತುಗಳೂ ನನ್ನ ಪಾಲಿಗೆ ವಸಂತಋತುಗಳೇ ಆಗುತ್ತಿದ್ದವು. ಆದರೆ ಅದೆಲ್ಲ ವಿಧಿ ನಮ್ಮೊಡನೆ ಆಡುತ್ತಿದ್ದ ಕಣ್ಣುಮುಚ್ಚಾಲೆ. ಅದರ ಕಾಟಕ್ಕೆ ನಾವು ಸಿಕ್ಕಿಕೊಂಡೆವು. ಆನಂದ ತನ್ನ ಸಮಸ್ಯೆಗಳ ಜಾಲದಿಂದ ಬಿಡಿಸಿಕೊಳ್ಳಲಾರದವನಾದ. ಅವನ ಸಾಮರ್ಥ್ಯ

ಅಸಾಮರ್ಥ್ಯಗಳನ್ನು ಚರ್ಚಿಸಿ ಪ್ರಯೋಜನವೇನು? ಅವನ ಕೃತ್ಯ ವನ್ನು ಸರಿ–ತಪ್ಪುಗಳ ತ್ರಾಸಿನಲ್ಲಿ ತೂಕಮಾಡಲು ನಾನು ಸೋತಿದ್ದೇನೆ. ಅವನು ನನ್ನ ಬದುಕಿಗೆ ಸಂಬಂಧಿಸದ ವ್ಯಕ್ತಿಯಾದ ಮೇಲೆ ಆ ವಿಮರ್ಶೆಯಿಂದ ಫಲವೇನು? ಆನಂದ ಸರೋಜಳನ್ನು ಮದುವೆ ಯಾದಂಡೇ ನಮ್ಮಿಬ್ಬರ ಪ್ರೇಮದ ಪ್ರೇತಯಾತ್ರೆಯೂ ನಡೆದು ಹೋಯಿತು! ಆದರೂ ನಮ್ಮಿಬ್ಬರ ಹೃದಯಗಳನ್ನು ಪರಸ್ಪರ ವಿಮುಖ ಮಾಡಿಕೊಳ್ಳುವುದು ಸುಲಭಸಾಧ್ಯವಾಗಲಿಲ್ಲ. ನನ್ನ ಹೃದಯದಲ್ಲಿ ಅವನ ಆಕೃತಿ ಉಳಿದೇ ಹೋಯಿತು. ಅವನ ಅಂತರಂಗದಲ್ಲಿ ನನಗೆ ಎಷ್ಟು ಸ್ಥಾನವಿತ್ತೆಂಬುದನ್ನು ನಾನು ಹೇಳಲಾರೆ. ಬಹುಶಃ ನನಗೆ ಅಲ್ಲಿ ಸ್ಥಾನ ವಿತ್ತು, ನಮ್ಮ ಪ್ರೇಮ ಶುದ್ಧವಾದುದು. ಅದು ವ್ಯರ್ಥವಾಗಿ ನನ್ನ ಹೃದಯವನ್ನು ಹಗರಲಿರುಳು ಉರಿಸಿತು. ಬಾಳ್ವೆಯೇ ನನಗೆ ಹೊರೆ ಆಯಿತು.

ನಿರಾಶೆಯ ಕತ್ತಲಿನಲ್ಲಿ ನಾನು ತೊಳಲುತ್ತಿದ್ದೆ. ನನ್ನ ಬಾಳ ಗಾಲಿ ಬೇರೆ ದಾರಿಯಲ್ಲಿ ಉರುಳಿತು. ಶಿಶುವಿಹಾರಕ್ಕೆ ನಾನು ಕಾಲಿರಿಸಿದೆ. ಅಲ್ಲಿ ನನಗೆ ರಾಜುವಿನ ಸ್ನೇಹ ಒದಗಿತು. ನನ್ನ ಜೀವನದಲ್ಲಿ ಬೇರೆಯೊಂದು ಪ್ರಕರಣ ಆರಂಭವಾಯಿತು. ಪ್ರಸಂಗಗಳ ಹೆಣಿತ ರಾಜುವಿನ ಮತ್ತು ನನ್ನ ಸ್ನೇಹವನ್ನು ರೂಪಾಂತರಗೊಳಿಸಿತು. ನಮ್ಮ ಅಂತರಂಗಗಳಿಗೊಂದು ಸೇತುವೆಯನ್ನು ಕಟ್ಟಿತು. ಆ ಸ್ನೇಹ ಬೆಳೆದು ಬಲಿತಂತೆ ನನ್ನ ಮನಸಲ್ಲಿ ಒಂದು ಹೊಸ ಭಾವನೆ ಮೂಡಿತು. ಒಂದೊಂದು ವೇಳೆ ಆ ಭಾವನೆ ಅನಿವಾರ್ಯವಾಗಿ ನಾನು ತಂದುಕೊಳ್ಳಬೇಕಾದ ಸಮಾಧಾನದ ಪ್ರತಿರೂಪವೆಂದೆನಿಸುತ್ತಿತ್ತು. ಆದರೂ ನನ್ನ ಹೃದಯ ರಾಜುವಿನ ಕಡೆಗೆ ತಿರುಗಿದಂತೆ ಆನಂದನಿಂದ ವಿಮುಖವಾಗತೊಡಗಿತು. ಏನಾದರೂ ಆನಂದನಿಗಾಗಿ ಅಲ್ಲಿ ಮೀಡಿತವಿದ್ದೇ ಇತ್ತು.

ನನ್ನನ್ನು ರಾಜು ಒಲಿಸಿಕೊಂಡ. ಅವನ ಕಲೆ ನನ್ನನ್ನು ಸೂಜಿಗಲ್ಲಿನಂತೆ ಸೆಳೆಯಿತು. ಚರ್ಚೆಯಿಂದಲೂ ಅವನು ನನ್ನ ಮನಸ್ಸನ್ನು ವಶಪಡಿಸಿಕೊಂಡ. ನಾನು ಮತ್ತೆ ಉದ್ದವಾದ ಊಹೆಯನ್ನು ನೆಯ್ದೆ. ಕರಗಿ ನೀರಾಗಿದ್ದ ನನ್ನ ಆಸೆ ಮತ್ತೆ ಹೆಪ್ಪುಗಟ್ಟಿಕೊಂಡಿತು. ನನ್ನ

ಹೃದಯವನ್ನು ರಾಜುವಿಗೆ ಒಪ್ಪಿಸಿದೆ. ಜಡವಾಗಿದ್ದ ನನ್ನ ಮನೋರಾಜ್ಯ ದಲ್ಲಿ ಮತ್ತೆ ಚೇತನ ಸಂಚಾರವಾಯಿತು. ಹೇಗೋ ಮತ್ತೆ ನನ್ನ ಬಾಳ ದಾರಿಯನ್ನು ಹುಡುಕಿಕೊಂಡೆ. ಸಂಜೆ ರಾಜುವಿನ ಶೀಲ, ಆರ್ಥಿಕ ಪರಿಸ್ಥಿತಿಗಳ ವಿಚಾರ ನನ್ನನ್ನು ಸಿಡಿಲಿನಂತೆ ತಾಕಿತು. ನಾಳೆ ಸಮಾಜ ದಲ್ಲಿ ಅವನು ತಲೆಯೆತ್ತುವಂತಿಲ್ಲ ಎಂಬ ವಿಚಾರವೂ ತಿಳಿಯಿತು. ಅವನೂ ನನ್ನ ಜೀವನದ ಗೆಳೆಯನಾಗುವಂತಿಲ್ಲ ಎಂದು ನಿಶ್ಚಯ ಮಾಡಿ ಕೊಂಡೆ. ಆ ಕ್ಷಣ ನನ್ನ ಆಸೆಗಳೆಲ್ಲ ನಿರ್ನಾಮವಾದವು. ಮತ್ತೆ ಕತ್ತಲೆ ನನ್ನನ್ನು ಮುಸುಕಿತು.

ರಾಜುವಿನ ಮತ್ತು ನನ್ನ ಪ್ರೇಮ ಪರಸ್ಪರ ಸ್ಥಿರಗೊಂಡುದು ಅವನು ಏರ್ಪಡಿಸಿದ್ದ ಅಜಂತ ದಿನೋತ್ಸವದ ರಾತ್ರಿಯಲ್ಲಿ. ಆ ರಾತ್ರಿ ಬಹಳ ಹೊತ್ತು ನಾನು ಅಲ್ಲಿಯೇ ಕಳೆದೆ. ಮನೆಗೆ ಬಹಳ ಹೊತ್ತಾಗಿ ಬಂದೆ. ಅಂದು ರಾಜು ತನ್ನ ಪ್ರೇಮದ ಪ್ರತೀಕವಾಗಿ ಒಂದು ವಜ್ರದ ಉಂಗುರವನ್ನು ನನ್ನ ಬೆರಳಿಗಿಟ್ಟ. ಅದನ್ನು ನಾನು ಯಾರಿಗೂ ತೋರಿಸ ಲಿಲ್ಲ. ಆ ಕಾಣಿಕೆಗೆ ಅಗ್ನಿಸಾಕ್ಷಿ ದೊರೆಯುವ ಗಳಿಗೆಯನ್ನು ಬದುಕಿ ನಲ್ಲಿ ಕಾಣಲು ಕಾಯುತ್ತಿದ್ದೆ. ಆದರೆ ಆ ಗಳಿಗೆ ಬಾರದೆ ಹೋಯಿತು. ಆ ಪ್ರಣಯಕಾಣಿಕೆ ಈಗ ನನ್ನ ಪ್ರಾಣಹರಣಕ್ಕೆ ಅನುಕೂಲವಾಯಿತು. ಅದೇ ವಜ್ರವನ್ನೇ ನಾನು ಇನ್ನು ಕೆಲವು ಕ್ಷಣಗಳಲ್ಲಿ ಅರೆದು ಕುಡಿಯುತ್ತೇನೆ.

ನನ್ನ, ಆನಂದನ ಪ್ರೇಮಭಂಗವಾದ ಸಮಯದಲ್ಲೇ ನನ್ನ ನಿರ್ಭಾಗ್ಯ ಜೀವನವನ್ನು ಮುಗಿಸಿಕೊಳ್ಳಬೇಕೆಂಬ ಯೋಚನೆ ನನ್ನ ಮನವನ್ನು ಅಲುಗಿಸಿತು. ಆದರೆ ತುಂಬು ಜೀವನವನ್ನು ಕಿತ್ತೆಸೆಯಲು ಹಿಂತೆಗೆದೆ. ಅಂದೇ ಆ ಕೃತ್ಯವನ್ನು ಮಾಡಿದ್ದಾಗಿದ್ದರೆ ಎರಡನೆಯ ನಿರಾಶೆಯ ನೋವನ್ನು ನಾನು ತಪ್ಪಿಸಿಕೊಳ್ಳಬಹುದಾಗಿತ್ತು. ಆದರೆ ಬದುಕಿನಲ್ಲಿ ತೇಲಬೇಕೆಂಬ ಆಸೆ ಬೇರೆ ದಿಕ್ಕಿಗೆಳೆಯಿತು. ಆ ದಿಕ್ಕಿನಲ್ಲಿಯೂ ಈಗ ನನಗೆ ನಿರಾಶೆ. ನನಗೆ ಜೀವಿತದಲ್ಲಿ ಯಾವ ಉದ್ದೇಶವೂ ಉಳಿ ದಿಲ್ಲ. ಜಗತ್ತಿನಲ್ಲಿ ನನಗೆ ಇನ್ನು ಸ್ಥಳವೂ ಇಲ್ಲ. ನನ್ನನ್ನು ನೀವು ವಾತ್ಸಲ್ಯದಿಂದ ಸಾಕಿದಿರಿ. ಅದಕ್ಕಾಗಿ ನಾನು ನಿಮಗೆ ಬಿಟ್ಟುಹೋಗು

ತ್ತಿರುವುದು ದುಃಖದ ತುಂಬು ಬಟ್ಟಲು! ಈ ಪ್ರಪಂಚದಲ್ಲಿ ಸುಖ ಕಾಣದೆ ಬೇರೆ ಅಪರಿಚಿತ ಪ್ರಪಂಚಕ್ಕೆ ನಾನು ಧೈರ್ಯವಾಗಿ ಕಾಲಿಡು ತ್ತಿದ್ದೇನೆ. ಆ ಪ್ರಪಂಚ ಎಲ್ಲರಿಗೂ ಅಪರಿಚಿತವೇ. ಯಾವ ಸುದ್ದಿ ಗಾರನೂ ಅಲ್ಲಿಂದ ಈ ಪ್ರಪಂಚಕ್ಕೆ ಮರಳುವುದಿಲ್ಲ. ಅಲ್ಲಿ ನನಗಾಗಿ ಏನು ಕಾದಿದೆಯೊ ಅರಿಯೆ. ಆದರೂ ಆ ಅಜ್ಞಾತವನ್ನೇ ಆಶ್ರಯಿಸಿ ದ್ದೇನೆ. ಈಗಲೂ ಆಶಾವಾದಿಯಾಗಿಯೇ ನಾನು ಈ ನಿರಾಶೆಯ ಜೀವನ ವನ್ನು ಕೊನೆಗಾಣಿಸಿಕೊಳ್ಳುತ್ತೇನೆ. ನಾನು ಇನ್ನು ಯಾರ ಕೈಗೂ ಸಿಗುವುದಿಲ್ಲ. ನೀವು ಈ ಪತ್ರವನ್ನು ಓದಿಕೊಳ್ಳುವ ಹೊತ್ತಿಗೆ ಈ ನೊಂದ ಜೀವ ಆಸೆ–ನಿರಾಶೆಗಳಿಂದ ಸ್ವತಂತ್ರವಾಗಿರುವುದು. ಇವನ್ನೇ ನನ್ನ ಕೊನೆಯ ಮಾತುಗಳೆಂದು ತಿಳಿದುಬಿಡಿ.

ನಿರ್ಭಾಗಿನಿ, ನಿಮ್ಮ ಪುತ್ರಿ,
**ಇಂದಿರೆ**

ಗೋಪಾಲರಾಯರು ಕೊಟಡಿಯಲ್ಲಿ ಬಿಕ್ಕಿಬಿಕ್ಕಿ ಅಳುತ್ತಿದ್ದರು. ಲಕ್ಷಮ್ಮ ನವರು ಅಲ್ಲಿಗೆ ಓಡಿ ಬಂದು ಭೀತಿಯಿಂದ ಕೇಳಿದರು :

" ಏನಾಯಿತು ? ಏನು ! ಅಯ್ಯೋ ! "

" ಇಂದಿರೆ ಇನ್ನಿಲ್ಲ ! " ಎಂದು ತೊದಲಿ ಉರುಳಿದರು. ಉಸಿರಿದ್ದರಲ್ಲವೆ ಮಾತು !

**೩೭**

ಇಂದಿರೆ ದೃಶ್ಯಜಗತ್ತಿನ ಮಾಯಾಪಟಲದ ಹಿಂದೆ ಕಣ್ಮರೆಯಾದಳು. ಮತ್ತೊಂದು ಸೂರ್ಯೋದಯವನ್ನು ನೋಡಲು ಅವಳಿರಲಿಲ್ಲ. ಆ ದಿನ ಇಂದಿರೆ ಇಲ್ಲದ ಜಗತ್ತಿನ ಮೇಲೆ ಸೂರ್ಯನು ತನ್ನ ರಜತ ಕಿರಣಗಳನ್ನು ಬೀರಲಿಲ್ಲ. ಮೇಘಗಳು ತಂಡತಂಡವಾಗಿ ಆಕಾಶವನ್ನು ಮುಸುಕಿವೆ. ಮಳೆಯ ತುಂತುರು ಗಳನ್ನು ಹೊತ್ತು ಗಾಳಿ ಸುಯ್ ಸುಯ್ ಎಂದು ಸುಳಿಸುಳಿಯಾಗಿ ಬೀಸುತ್ತಿದೆ. ಚಳಿ ಮೈಯನ್ನು ಕೊರೆಯುತ್ತಿದೆ. ಮರಗಳ ಎಲೆಗಳಿಂದ ಹನಿಗಳು ಸತತ ವಾಗಿ ಬೀಳುತ್ತಿವೆ. ಎಂದೆಂದಿಗೂ ಕಣ್ಮರೆಯಾದ ಇಂದಿರೆಗಾಗಿ ನಿಸರ್ಗದ ಕಣ್ಣೀರು.

ಜನರು ಅಂದಿನ ಬೆಳಗನ್ನು ಶಪಿಸುತ್ತ ತಮ್ಮ ತಮ್ಮ ಕಾರ್ಯದಲ್ಲಿ ತೊಡಗಿದ್ದಾರೆ. ಬಾನಿನಲ್ಲಿ ಕಾಮನಬಿಲ್ಲಿನ ಸಪ್ತವರ್ಣಗಳು ಪಸರಿಸಿ ಮತ್ತೆ ಮಸಕಾಗುತ್ತಿವೆ. ಹೊತ್ತು ಹನ್ನೊಂದು ಗಂಟೆಯಾದರೂ ಆವರಣ ಇನ್ನೂ ಮಬ್ಬಾಗಿಯೇ ಇದೆ. ತನ್ನನ್ನು ಮರೆಮಾಡಿದ ಮೇಘಸಮುದಾಯವನ್ನು ಸೂರ್ಯನು ಸೀಳಿಕೊಂಡು ಮಂದವಾದ ಪ್ರಭೆಯನ್ನು ಹೊರಸೂಸಿದ್ದಾನೆ. ಅದು ವಾತಾವರಣದ ನೀರವತೆಯಲ್ಲಿ ವಿಲೀನವಾಗಿದೆ.

ಶ್ಮಶಾನಭೂಮಿಯ ಮೇಲೆ ಹತ್ತೆಂಟು ಮಂದಿ ಗುಂಪು ಸೇರಿದ್ದರು. ನೆಲ ತೊಯ್ದುಹೋಗಿತ್ತು. ತುಂತುರು ಮಳೆ ನಿಂತುಹೋಗಿತ್ತು. ಹೊತ್ತು ಅಪರಾಹ್ನ. ಮೋಡಗಳನ್ನು ಹರಿದು ರವಿಯು ಹೊರಗಾಣುತ್ತಿದ್ದ, ಇಂದಿರೆಯ ಬಾಳಿನ ಶಾಂತಿಪರ್ವವನ್ನು ನೋಡಲು. ಅವಳ ಶರೀರ ಮಸಣಮಂಟಪದಲ್ಲಿ ಪವಡಿಸಿತ್ತು. ದಿಬ್ಬಣ ಸಾಗಿಬಂದಿತು. ಗೋಳಿನ ಮೇಳ ನಿಲ್ಲುವಂತಿರಲಿಲ್ಲ. ಎರಡು ಕ್ಷಣ ಕಳೆಯಿತು. ಚಿತೆಗೆ ಬೆಂಕಿಯನ್ನು ಮುಟ್ಟಿಸಿದರು. ಇಂದಿರೆಯ ದೇಹವನ್ನು ರುದ್ರಜ್ವಾಲೆಗಳು ತೋಳ ಸುತ್ತಿ ತಬ್ಬಿದವು.

ಅಷ್ಟೆಲ್ಲ ದೃಶ್ಯವನ್ನು ಒಬ್ಬ ವ್ಯಕ್ತಿ ದೂರದಲ್ಲಿ ಒಂಟಿಯಾಗಿ ನಿಂತು ನೋಡುತ್ತಿದ್ದ. ಅವನು ಧರಿಸಿದ್ದ ತೆಳುವಾದ ಉಡುಪು ನೆನೆದುಹೋಗಿತ್ತು. ತಂಗಾಳಿಯಲ್ಲಿ ಇನ್ನೂ ಆರಿರಲಿಲ್ಲ. ತಲೆಕೂದಲು ಕೆದರಿಹೋಗಿತ್ತು. ಚಳಿಗಾಳಿಗಳ ಪರವೆ ಅವನಿಗಿರಲಿಲ್ಲ. ಅವನ ಕಣ್ಣು ಕೆಂಡವಾಗಿತ್ತು. ಉರಿಯುತ್ತಿದ್ದ ಚಿತೆ ಶಾಂತವಾಯಿತು. ಆ ವ್ಯಕ್ತಿ ನಿಧಾನವಾಗಿ ಹೆಜ್ಜೆಹಾಕುತ್ತ ಅಲ್ಲಿಂದ ಹೊರಟುಹೋದ. ಅವನು ರಾಜು ಎಂದು ಗುರುತಿಸುವುದೇ ಕಷ್ಟವಾಗಿತ್ತು.

ರಾಜು ಸಮಾಚಾರಗಳನ್ನೆಲ್ಲ ಸಂಗ್ರಹಿಸಿದ್ದ. ಅವನು ಕಲಾಶಾಲೆಗೆ ಬಂದಾಗ ಮಧ್ಯಾಹ್ನ ಕಳೆದುಹೋಗಿತ್ತು. ಊಟ ಮಾಡಲಿಲ್ಲ. ಚಿಂತಾಗ್ನಿ ಅವನನ್ನು ದಹಿಸುತ್ತಿತ್ತು. ಎದೆಯಲ್ಲಿ ಸುಡುಹೊಗೆ. ಕಣ್ಣು ಕತ್ತಲುಕಟ್ಟಿತು. ಮನಸ್ಸು ತೆಪ್ಪಗಾಯಿತು. ಮತ್ತೆ ಚೇತರಿಸಿಕೊಂಡಿತು. ಮತ್ತೆ ತೊಳಲಾಟ.

ಪರಿಸ್ಥಿತಿಯನ್ನೆಲ್ಲ ಮತ್ತೊಮ್ಮೆ ರಾಜು ಆಲೋಚಿಸಿದ. ಗತ್ಯಂತರ ಕಾಣಲಿಲ್ಲ. ಇಂದಿರೆ ಇಲ್ಲದ ಜಗತ್ತಿಗೆ ಅಗ್ನಿಸ್ಪರ್ಶಮಾಡಬೇಕೆನಿಸಿತು ಅವನಿಗೆ. ಆ ಶಕ್ತಿ ತನಗಿಲ್ಲದೆ ಹೋಯಿತೆಂದು ರೋಷಗೊಂಡ. ಆ ಪ್ರಳಯಾಗ್ನಿಯಲ್ಲಿ ಜೀವವನ್ನು ಹೋಮಮಾಡುವ ಪುಣ್ಯ ತನಗಿಲ್ಲದೆ ಹೋಯಿತೆಂದು ಬಳಲಿದ.

ಗಡಿಯಾರದಲ್ಲಿ ಗಂಟೆಗಳು ತಾಸವಾಗಿ ತಾಡನಮಾಡಿದವು. ರಾಜುವಿಗೆ ತಕ್ಷಣ ಕೋರ್ಟಿನ ನೆನಪಾಯಿತು. ಆ ದಿನ ವಿಚಾರಣೆಯ ಮುಖ್ಯ ಘಟ್ಟ! ಅದರ ನೆನಪಾಗಿ ಅವನ ಮುಖದ ಮೇಲೆ ಒಂದು ತುಚ್ಛ ನಗೆ ಮಿಂಚಿಹೋಯಿತು. ಪ್ರಪಂಚದ ಎಲ್ಲ ವ್ಯಾಪಾರಗಳಿಂದಲೂ ಅವನ ಮನಸ್ಸು ವಿಮುಖವಾಗಿತ್ತು.

ಇಂದಿರೆ ರಾಜುವಿನ ಶ್ವಾಸವಾಗಿದ್ದಳು. ಅವಳು ಅವನ ಬಾಳ ಇರುಳಿನ ಧ್ರುವತಾರೆ. ಇಂದಿರೆ ತನ್ನವಳಾಗಿ ಉಳಿದಿದ್ದರೆ ತನ್ನ ಬಿಕ್ಕಟ್ಟನ್ನು ಹೇಗೋ ಇದಿರಿಸುವ ಸಮಾಧಾನ ಅವನಲ್ಲಿ ಮೂಡುತ್ತಿತ್ತು. ಹೇಗೋ ಹೆಣಗಾಡುತ್ತಿದ್ದ. ಆದರೆ ಈಗ ಅವನ ಹೃದಯ ಕುಸಿದುಹೋಯಿತು. ಕಣ್ಣು ಮುಚ್ಚಿ ಸುಮ್ಮನೆ ಸ್ವಲ್ಪ ಹೊತ್ತು ಕುಳಿತ. ತನ್ನ ಗತಜೀವನದ ನೆನಪು ಹೃತ್ಪಟಲದ ಮೇಲೆ ಬಿರುಗಾಳಿಯಂತೆ ಬೀಸಿತು. ಮನಸ್ಸಿನಲ್ಲಿ ಏನೋ ಹೊಸ ವಿಚಾರ ಕ್ರಾಂತಿಯುಂಟಾಯಿತು. ಜೀವನ ಅಸಹ್ಯವಾಗಿ ಕಂಡಿತು. ತಾನು ಕಾಮಾಂಕುರದಿಂದ ಕಂಡ ಹಲವು ಸ್ತ್ರೀಯರ ಬಿಂಬಗಳು ಒಂದೊಂದೇ ಚಿತ್ರ ತಾಳಿ ಸುಳಿದು ಹೋದವು. ಎಲ್ಲ ಅವನಿಗೆ ಹೇಯವಾಗಿ ಕಂಡಿತು. ಆನಂದನ ಮದುವೆಗೆ ಮುಂಚೆ ರಾಜು ಸರೋಜಳಿಗಾಗಿ ಹಂಬಲಪಟ್ಟಿದ್ದ. ಕಾಮಭಾವನೆಯಿಂದಲೇ ಅವಳನ್ನು ಕಾಣಲು ಆ ದಿನಗಳಲ್ಲಿ ಸುಂದರರಾಯರ ಮನೆಗೆ ಹೋಗುತ್ತಿದ್ದ. ಅನಂತರ ಆನಂದನ ಸ್ನೇಹದಿಂದ ಅವನಿಗೆ ಇಂದಿರೆಯ ಪರಿಚಯವಾಯಿತು. ಅವಳ ರೂಪವನ್ನು ನೋಡಿದಂದಿನಿಂದಲೇ ಅವಳಲ್ಲಿ ಅವನಿಗೆ ತೀವ್ರವಾದ ಆಸಕ್ತಿ ಹುಟ್ಟಿತು. ಅಂದಿನಿಂದಲೇ ಸರೋಜ ಅವನಿಗೆ ಬೇಡವಾದಳು. ಆನಂದ–ಇಂದಿರೆಯರ ಪರಸ್ಪರ ಪ್ರೇಮವನ್ನರಿತೂ ತನ್ನ ಆಸೆಯನ್ನೇ ಬಲಿಸಿಕೊಂಡ. ಆಶಾಗ್ನಿಯಲ್ಲಿ ಬಹಳ ಕಾಲ ಬೆಂದ. ಆನಂದನ ಪ್ರೇಮವನ್ನು ವಿಧಿಯೇ ಭಂಗಪಡಿಸಿದುದಕ್ಕಾಗಿ ಅವನ ಹೃದಯ ಹಿಗ್ಗಿತು. ಅದೇ ವಿಧಿ ಇಂದಿರೆಯನ್ನು ತಂದು ಶಿಶುವಿಹಾರಕ್ಕೆ ಸೇರಿಸಿದಾಗ ತನ್ನ ಅದೃಷ್ಟದ ಬಾಗಿಲು ತೆರೆಯಿತೆಂದು ಭಾವಿಸಿದ. ವಿಧಿಯನ್ನು ಅಂದು ಅವನು ಕೊಂಡಾಡಿದ. ಇಂದಿರೆಯ ಮನವನ್ನು ಮಾಯೆಗೊಳಿಸಿದ. ವಾದತಂತ್ರದಿಂದ ಅವಳ ಬುದ್ಧಿಯನ್ನು ಸೆಳೆದ. ಕಲೆಯ ಪ್ರಭಾವದಿಂದ ಅವಳ ಅಂತರಂಗವನ್ನು ವಶಪಡಿಸಿಕೊಂಡ. ಅವಳ ನೊಂದ ಜೀವವನ್ನು ಸುಖಾಭಿಲಾಷೆಯಿಂದ ಮತ್ತೆ ನಲಿಸಿದ. ಇಂದಿರೆಗಾಗಿ ಅವನಲ್ಲಿ ತೀವ್ರವಾದ ಉನ್ಮಾದವಿತ್ತು.

ಇಂದು ಇಂದಿರೆ ತಾನಾಗಿ ಸಾವನ್ನು ತಬ್ಬಿದಳು. ಸುಂದರವಾದ ಒಂದು ವನಪುಷ್ಪ ಅರಳುವಾಗಲೇ ಕಾಡುಗಿಚ್ಚಿಗೆ ಸಿಕ್ಕಿ ಸುಟ್ಟುಹೋದಂತಾಯಿತು.

ರಾಜುವಿನ ಮನಸ್ಸು ಮುಂದೋಡದಂತಾಯಿತು. ಇಂದಿರೆಯನ್ನು ತಾನು ಸೆಳೆಯದಿದ್ದರೆ ಬಹುಶಃ ಅವಳು ಬೇರೆಯೊಬ್ಬ ವ್ಯಕ್ತಿಯೊಡನೆ ಸುಖವಾಗಿ ಬಾಳುತ್ತಿದ್ದಳು. ಅಂತಹ ರೂಪವತಿಯೊಡನೆ ಜೀವನದ ಉದ್ದವಾದ ಕಾಲವನ್ನು ಆ ವ್ಯಕ್ತಿಯಾದರೂ ಸವಿಯಬಹುದಾಗಿತ್ತು. ಜೀವನದಲ್ಲಿ ರಾಜುವಿಗೆ ಜಿಗುಪ್ಸೆ ಉಂಟಾಯಿತು. ಎಲ್ಲ ಅಲ್ಪವಾಗಿ ಕಂಡಿತು. ಬದುಕೊಂದು ಬಯಕೆಗಳ ಕಂತೆ. ಬಯಕೆಗಳೆಲ್ಲ ಗಗನಪುಷ್ಪಗಳೇ. ಹಂಬಲದ ಕುಲುಮೆಯಲ್ಲಿ ಸುಮ್ಮನೆ ಬೆಂದು ಬಳಲುವುದು. ಆಸೆಯ ವಿಷಚಕ್ರದಲ್ಲಿ ವ್ಯರ್ಥವಾದ ಸುತ್ತಾಟ. ಬಿಸಿಲು ಗುದುರೆಯ ಬೆನ್ನುಹತ್ತಿ ಸೋತು ಕೊನೆಯಲ್ಲಿ ವಂಚಿತನಾಗುವುದು. ಸ್ವಾರ್ಥತೆಯ ಕನ್ನಡಿಯಲ್ಲಿ ಬಾಳನ್ನು ನೋಡಿ ಭ್ರಾಂತನಾಗುವುದು. ಇತರರ ಬಾಳನ್ನೊ ಬೆಂಕಿಗೆಳೆಯುವುದು.

ರಾಜುವಿನ ಮುಂದೆ ಯಾವ ಧ್ಯೇಯವೂ ಉಳಿದಿರಲಿಲ್ಲ. ಅವನು ಕಲಾ ಸಾಮ್ರಾಜ್ಯದಲ್ಲಿ ತನ್ನ ಆದರ್ಶಸಾಧನೆಯನ್ನು ಸಾಧಿಸಿದ್ದ. ಕಲಾದೇವಿಯ ಗರ್ಭಗುಡಿಯಲ್ಲಿ ಬೆಳಕನ್ನು ಸಂದರ್ಶಿಸಿ ಹೊರಬೀಳುತ್ತಿದ್ದ ಕಲೋಪಾಸಕರ ಸಮೂಹ ಅವನ ಕಣ್ಣೆದುರು ನಿಂತಿತು. ಆ ತೇಜಃಪುಂಜವಾದ ವೃಂದದಲ್ಲಿ ತನ್ನ ಮೂರ್ತಿಯೂ ಬೆಳಗುತ್ತಿದ್ದಂತೆ ರಾಜುವಿಗೆ ಗೋಚರವಾಯಿತು. ಆಗ ತನ್ನ ಜೀವನದ ಎಲ್ಲ ಪ್ರಕರಣಗಳೂ ಮುಗಿದಂತೆ ಭಾಸವಾಯಿತು ಅವನಿಗೆ.

ತಕ್ಷಣ ಅವನಿಗೆ ದೇವರೆಂಬ ಒಂದು ಶಕ್ತಿಯಿದೆಯೆಂದು ಅರಿವಾಯಿತು. ತಾನೇ ರಚಿಸಿದ್ದ ಒಂದು ಚಿತ್ರಪಟ ಆಗ ಎದುರಿಗೆ ಬಿತ್ತರಿಸಿತು. ಅದಕ್ಕೆ ಭಕ್ತಿಯಿಂದ ಕೈಮುಗಿದ. ಅದು ಯೋಗನಿದ್ರೆಯಲ್ಲಿದ್ದ ಪರಶಿವನ ಚಿತ್ರ. ಮನಸ್ಸಿನಲ್ಲಿ ಅಪೂರ್ವವಾದ ಶಾಂತಿ ಮೂಡಿತು. ತನ್ನ ಆಕೃತ್ಯಗಳನ್ನೆಲ್ಲ ಕ್ಷಮಿಸುವಂತೆ ದೈವವನ್ನು ಒಮ್ಮೆ ಪ್ರಾರ್ಥಿಸಿದ. ಅನಂತರ ಕಿಸೆಯಲ್ಲಿದ್ದ ಏನೋ ಒಂದು ಗುಳಿಗೆಯನ್ನು ತೆಗೆದು ಬಾಯಲ್ಲಿ ಇರಿಸಿಕೊಳ್ಳಹೋದ. ಆ ಕ್ಷಣ ಯೋಗಾನಂದಪರವಶನಾದ ಪರಶಿವನ ಕಡೆಗೆ ಮತ್ತೆ ದೃಷ್ಟಿಹರಿಯಿತು. ಅಂತರಂಗದಲ್ಲಿ ಯಾರೋ, ' ರಾಜು, ನೀನು ಅಜ್ಞಾನಿ ' ಎಂದು ಕೂಗಿದಂತೆ ಆಯಿತು. ಮನಸ್ಸಿನಲ್ಲಿ ಮಿಂಚು ಹಾರಿದಂತಾಯಿತು. ಆ ಪಾಷಾಣದ ಗುಳಿಗೆ

ಯನ್ನು ರಾಜು ನುಂಗಲಿಲ್ಲ. ಅದನ್ನು ಕಿಟಕಿಯಿಂದ ದೂರ ಎಸೆದುಬಿಟ್ಟ. ಮತ್ತೆ ಬಹಳ ಆಲೋಚನಾಪರನಾದ. ಮುಖದಲ್ಲಿ ಹೊಸ ಕಾಂತಿ ಹೊರ ಹೊಮ್ಮಿತು. ಮನಸ್ಸಿನಲ್ಲಿ ಒಂದು ಹೊಸ ನಿರ್ಧಾರ ಸಂಚಾರವಾಯಿತು. ಆ ಹೊತ್ತಿಗೆ ಹೊರಗೆ ಕತ್ತಲು ಬಿದ್ದಿತ್ತು. ಒಂದು ಬಟ್ಟಲು ಹಾಲು ತರುವಂತೆ ಚಂದ್ರುವಿಗೆ ಕೂಗಿಹೇಳಿದ. ಚಂದ್ರು ಹಾಲನ್ನು ತಂದಿರಿಸಿದ. ತಾನು ಊಟ ಮಾಡುವುದಿಲ್ಲವೆಂದು ತಿಳಿಸಿದ. ಚಂದ್ರುವಿಗೆ ಏನೊಂದೂ ಅರ್ಥವಾಗಲಿಲ್ಲ. ರಾಜು ಆ ದಿನ ಎರಡು ಹೊತ್ತೂ ಊಟ ಬೇಡವೆಂದಿದ್ದ. ಚಂದ್ರುವಿಗೆ ಮಾತ ನಾಡುವುದಕ್ಕೆ ಅವಕಾಶವೇ ಇಲ್ಲದಂತೆ ಅವನು ಕೊಟಡಿಯ ಬಾಗಿಲನ್ನು ಮುಚ್ಚಿಕೊಂಡಿದ್ದ.

ಬೆಳಗಾದಾಗ ರಾಜುವಿನ ಕೊಟಡಿಯ ಬಾಗಿಲು ಇನ್ನೂ ಮುಚ್ಚಿತ್ತು. ಹೊತ್ತು ಬಹಳವಾಗಿತ್ತು. ಚಂದ್ರು ಬಂದು ಕೊಟಡಿಯ ಬಾಗಿಲನ್ನು ನಿಧಾನ ವಾಗಿ ತಳ್ಳಿದ. ಯಾವ ತಡೆಯೂ ಇಲ್ಲದೆ ಬಾಗಿಲು ತೆರೆಯಿತು. ಹಾಸಿಗೆ ಹಾಸಿದಂತಿತ್ತು. ರಾಜು ಮಾತ್ರ ಕೊಟಡಿಯಲ್ಲಿರಲಿಲ್ಲ!

ಸಂಜೆ ವೃತ್ತಾಂತಪತ್ರಿಕೆಗಳಲ್ಲಿ ಕಿವಿಯನ್ನು ನಿಮಿರಿಸುವ ಒಂದು ಸುದ್ದಿ ದಪ್ಪವಾದ ಅಕ್ಷರಗಳಲ್ಲಿ ಪ್ರಕಟವಾಗಿತ್ತು. ಆ ಸಮಾಚಾರ ನಗರದಲ್ಲಿ ಒಂದು ದೊಡ್ಡ ಕೋಲಾಹಲವನ್ನೆಬ್ಬಿಸಿತು.

'ಸುಪ್ರಸಿದ್ಧ ಕಲಾವಿದ ರಾಜುರವರ ಪಲಾಯನವೆ!' ಎಂದು ಪತ್ರಿಕೆ ಗಳಲ್ಲಿ ಪ್ರಕಟವಾಗಿತ್ತು.

## ೫೮

ರಾತ್ರಿ ಆನಂದ, ಸರೋಜ ಇಬ್ಬರಿಗೂ ನಿದ್ದೆ ಹತ್ತಲಿಲ್ಲ. ಇಂದಿರೆ ವಿಷ ಪಾನ ಮಾಡಿದುದು, ರಾಜು ತಲೆತಪ್ಪಿಸಿಕೊಂಡು ಹೋದುದು—ಒಂದರ ಬೆನ್ನ ಹಿಂದೆ ಒಂದು ನಡೆದುಹೋಗಿತ್ತು. ವಿಚಾರಗಳು ಪೂರ್ತಿಯಾಗಿ ಅವನಿಗೆ ಬಯಲಾಗಿರಲಿಲ್ಲ. ಸುದ್ದಿಯನ್ನು ತಿಳಿದಾಗ ಸರೋಜಳ ಎದೆ ನಡುಗಿತು.

ಬೆಳಗಾಗುವಾಗ ಆನಂದ ರಾಜುವಿನ ಕಲಾಶಾಲೆಯಲ್ಲಿ ಚಂದ್ರುವನ್ನು ಕಂಡ. ಚಂದ್ರುವಿನ ಮುಖದ ಸಂತೋಷ ಮಾಯವಾಗಿತ್ತು. ಅವನು ಕೆಲವು ಚಿತ್ರಗಳನ್ನು ಜೋಡಿಸಿ ತೆಗೆದಿಡುತ್ತಿದ್ದ. ಚಿತ್ರಕಲೆಯಿಂದ ಕಾಂತಿಗೊಂಡಿದ್ದ

ಮಂದಿರಕ್ಕೆ ಸೂತಕ ಸುತ್ತಿಕೊಂಡಂತಿತ್ತು. ಅಂದೇ ಕಲಾಶಾಲೆಯನ್ನು ಪೋಲೀಸಿನ ವಶಕ್ಕೆ ಒಪ್ಪಿಸಬೇಕಾಗಿತ್ತು.

ಚಂದ್ರು ತನ್ನ ಮುಂದಿನ ಜೀವನದ ಯೋಚನೆಯಲ್ಲಿ ಮುಳುಗಿದ್ದ. ಆನಂದ ಬಹಳ ಹತ್ತಿರ ಬರುವವರೆಗೂ ಚಂದ್ರು ಅವನನ್ನು ನೋಡಲಿಲ್ಲ. ತಕ್ಷಣ ಆನಂದನನ್ನು ಕಂಡು ಎದ್ದು ನಿಂತ. ಆನಂದ ಅವನನ್ನು ಕೇಳಿದ:

"ನಿನ್ನೆ ಸಂಜೆ ಪತ್ರಿಕೆಯಲ್ಲಿ ರಾಜುವಿನ ವಿಚಾರ ತಿಳಿಯಿತು."

"ಅವರು ಹಾಗೆ ಮಾಡುತ್ತಾರೆಂದು ಊಹೆಯನ್ನೇ ಮಾಡಿರಲಿಲ್ಲ."

"ನಿನಗೆ ರಾಜು ಏನಾದರೂ ಹೇಳಿದನೆ?"

"ರಾತ್ರಿ ಮಾತನ್ನೇ ಆಡಲಿಲ್ಲ. ಊಟ ಬೇಡ ಅಂದರು. ಹಾಲು ಕುಡಿದು ಮಲಗಿದರು. ಬೆಳಗ್ಗೆ ಅವರು ಕೊಟಡಿಯಲ್ಲಿರಲಿಲ್ಲ!"

"ನಿನ್ನೆ ಬೆಳಗ್ಗೆ ಎಲ್ಲಿಗೆ ಹೋಗಿದ್ದ?"

"ಬೆಳಗ್ಗೆ ಇಂದಿರಮ್ಮ ತೀರಿಕೊಂಡರು ಎಂದು ಯಾರೋ ಸುದ್ದಿ ಮುಟ್ಟಿಸಿದರು. ತಕ್ಷಣ ಮನೆ ಬಿಟ್ಟರು. ವಾಪಸ್ಸು ಬಂದಾಗ ಮಧ್ಯಾಹ್ನ ಆಗಿಹೋಗಿತ್ತು. ಕೊಟಡಿಯಲ್ಲಿ ಒಬ್ಬರೇ ಕುಳಿತಿದ್ದರು. ಸಂಜೆಯೂ ಹೊರಗೆ ಹೋಗಲಿಲ್ಲ."

"ಕೋರ್ಟಿನಲ್ಲಿಯ ಕೇಸೇನಾಯಿತು?"

"ಕೇಸು ಪ್ರತಿಕೂಲವೇ ಆಗುವುದಂತೆ. ಈ ಹೊತ್ತು ಪೋಲೀಸಿನವರಿಗೆ ಮಂದಿರವನ್ನು ವಶಪಡಿಸಬೇಕು."

ಚಂದ್ರುವಿನ ಕಣ್ಣಿನಲ್ಲಿ ನೀರೂರಿತು. ಆನಂದನ ಮರುಕ ಉಮ್ಮಳಿಸಿತು. ಅವನ ಮನಸ್ಸು ಚಂದ್ರುವಿನ ಕಡೆಗೆ ಹರಿಯಿತು.

"ಮುಂದೆ ಏನು ಮಾಡುತ್ತಿ, ಚಂದ್ರೂ?"

"ಸುಶೀಲಾಬಾಯಿ ಹೇಳಿದಂತೆ."

"ಸುಶೀಲಾಬಾಯಿ ಬಂದಿದ್ದರೆ?"

"ನಿನ್ನೆ ರಾತ್ರಿ ಬಂದಿದ್ದರು."

"ಏನು ಹೇಳಿದರು?"

"ಏನಾದರೂ ಮಾಡೋಣ ಎಂದಿದ್ದಾರೆ."

"ರಾಜು–ಇಂದಿರೆಯರ ವಿಚಾರ ಏನು ಹೇಳಿದರು?"

" ಇಂದಿರಮ್ಮ ತೀರಿಕೊಳ್ಳುತ್ತಲೇ ರಾಜು ಆ ನಿರ್ಧಾರ ಮಾಡಿರಬೇಕು, ಎಂದು ಹೇಳಿದರು."

ಆನಂದನಿಗೆ ಹೆಚ್ಚು ವಿರಾಮವಿರಲಿಲ್ಲ. ಊಟವನ್ನು ಮುಗಿಸಿಕೊಂಡು ಕಾಲೇಜಿಗೆ ಹೋಗಬೇಕಿತ್ತು. ಸೈಕಲ್ ಹತ್ತಿ ಮನೆಯ ಕಡೆ ತಿರುಗಿದ.

ಆನಂದ ತಾನು ತಂದಿದ್ದ ಸುದ್ದಿಯನ್ನೆಲ್ಲ ಸರೋಜಳಿಗೆ ತಿಳಿಸಿದ. ಅವನ ಮಾತಿನಿಂದ, ರಾಜು ತಲೆತಪ್ಪಿಸಿಕೊಂಡು ಹೋದುದು ಒಂದು ಅಚ್ಚರಿಯಂತೆ ಕಾಣಲಿಲ್ಲ. ಅಂತಹ ಪರಿಸ್ಥಿತಿಯ ಅಗ್ನಿಕುಂಡದಿಂದ ಸಿಡಿದುಹೋಗಲು ಸೋತ ಮನುಷ್ಯನಿಗಿರುವ ಒಂದು ದಾರಿ ಅದಾಗಿದ್ದಿತು.

ಊಟ ಮಾಡುತ್ತ ಸರೋಜ, ಆನಂದ ಮತ್ತೆ ಅದೇ ವಿಷಯವನ್ನು ಎತ್ತಿದರು.

" ಇಂದಿರೆ ಎಂತಹ ಚೆಲುವೆ! ಅವಳಿಗೆ ಆತ್ಮಹತ್ಯ ಮಾಡಿಕೊಳ್ಳುವ ಗತಿಯೆ ? " ಎಂದು ಸರೋಜ ಬಿಸಿಯುಸಿರು ಬಿಟ್ಟಳು.

ಆ ಮಾತುಗಳು ಆನಂದನ ಕಿವಿಯನ್ನು ಹೊಕ್ಕಾಗ ಅವನ ಕರುಳು ಕಂಪಿಸಿತು. ಇಂದಿರೆಯನ್ನು ದುರಂತಕ್ಕೆ ಎಳೆದುಕೊಂಡುಹೋದ ವ್ಯಕ್ತಿಗಳಲ್ಲಿ ತಾನೇ ಮೊದಲಿಗನು ಎಂದೆನಿಸಿತು. ಅದಕ್ಕಾಗಿ ಪಶ್ಚಾತ್ತಾಪ ಪಡುವ ಕಾಲ ಎಂದೋ ಮಿಂಚಿಹೋಗಿತ್ತು.

" ಅದು ನೊಂದ ಜೀವ, ಸರೋಜ. ದೈವ ಅವಳ ಬದುಕನ್ನು ಹಾಗೆ ಎಳೆದುಕೊಂಡುಹೋಯಿತು."

" ಅವಳಿಗಾದ ಅಷ್ಟು ದೊಡ್ಡ ನಿರಾಶೆ ಏನು ? "

" ರಾಜುವನ್ನು ನಂಬಿ ನಿರಾಶಳಾದಳು."

" ಅಷ್ಟಕ್ಕೇ ಅವಳು ಆತ್ಮಹತ್ಯ ಮಾಡಿಕೊಳ್ಳುವುದೆ ? ಬದುಕಿನಲ್ಲಿ ಅವಳಿಗೆ ಬೇರೆ ದಾರಿಯೇ ಇರಲಿಲ್ಲವೆ ? "

ಆನಂದನಿಗೆ ಅವಳ ಪ್ರಶ್ನೆಯನ್ನು ಉತ್ತರಿಸುವುದು ಕಷ್ಟವಾಯಿತು.

" ಹೆಣ್ಣಿನ ಬದುಕೇ ಕಷ್ಟ. ಒಂದು ಹೆಜ್ಜೆ ತಪ್ಪಿದರೆ ಎಲ್ಲ ಹೆಜ್ಜೆಗಳೂ ತಪ್ಪಿಹೋಗುತ್ತವೆ."

ನಿಜವಾಗಿ ಇಂದಿರೆಗಾದ ಎರಡು ದೊಡ್ಡ ನಿರಾಶೆಗಳನ್ನು ಸರೋಜ ತಿಳಿದಿರಲಿಲ್ಲ. ಅವಳ ಬಾಳಿನ ಪೂರ್ತಿ ತಿಳಿವಳಿಕೆಯಿಲ್ಲದೆ ಮಾತನಾಡಿದ್ದಳು,

ಆದರೆ ಆನಂದ ಪೂರ್ತಿ ತಿಳಿವಳಿಕೆಯನ್ನು ಕೊಡಲು ಸಿದ್ಧನಿರಲಿಲ್ಲ. ಆದ್ದರಿಂದ ಅವಳ ದೃಷ್ಟಿಗೆ ಇಂದಿರೆಯ ಕೃತ್ಯ ಹೆಚ್ಚೆನಿಸಿತು. ಆನಂದ ವಿಚಾರವನ್ನು ಬೇರೆ ಹಾದಿಗೆ ತಿರುಗಿಸಿದ.

" ರಾಜುವಿನ ಪರಿಸ್ಥಿತಿ ಮೊದಲಿಂದಲೂ ನನಗೆ ಗೊತ್ತಿತ್ತು."

" ತಲೆತಪ್ಪಿಸಿಕೊಂಡು ಏಕೆ ಓಡಿಹೋಗಬೇಕಾಗಿತ್ತು ? ಅದರಿಂದ ಏನು ಸಾಧಿಸಿದಂತೆ ಆಯಿತು ? "

ಸರೋಜಳ ಪ್ರಶ್ನೆ ಆನಂದನ ಮನಸ್ಸಿಗೆ ಬೆಳಕನ್ನು ಬೀರಿತು. ಅವಳ ಜೀವನದೃಷ್ಟಿ ಅದರಿಂದ ಹೊರಪಟ್ಟಿತು. ಎಂತಹ ಪ್ರಕರಣಗಳು ಸನ್ನಿಹಿತವಾದರೂ ಮನುಷ್ಯನು ಸಿಲ್ಲಬೇಕು, ಕಾಲುಕೀಳಬಾರದು ಎಂಬ ಭಾವನೆ ಆನಂದನ ಮನಸ್ಸನ್ನು ಮುಟ್ಟಿತು. ಅವನು ಹೇಳಿದ :

" ನಿನ್ನ ಭಾವನೆ ನನಗೆ ಮೆಚ್ಚಿಗೆಯಾಗಿದೆ, ಸರೋಜ. ಬದುಕಿನಲ್ಲಿ ಎಂತಹ ನಿರಾಶೆಯಾದರೂ ಅದರಿಂದ ಓಡಿಹೋಗಬಾರದು. ಹಾಗೆ ಮಾಡಿದರೆ ಏನೂ ಸಾಧಿಸಿದಂತಾಗಲಿಲ್ಲ. ಆದರೆ ರಾಜುವಿನ ವಿಚಾರ ಬೇರೆಯಾಗಿದೆ."

" ಹೇಗೆ ? "

" ಇಂದಿರೆಯಲ್ಲಿ ಅವನಿಗೆ ತೀವ್ರವಾದ ಆಸಕ್ತಿಯಿತ್ತು. ಅವಳು ತೀರಿಕೊಂಡಮೇಲೆ ಅವನಿಗೆ ಜೀವನವೇ ಬೇಡ ಎನಿಸಿರಬೇಕು. ಅಲ್ಲದೆ ಅವನಿಗೆ ಧ್ಯೇಯವಾದರೂ ಏನು ಉಳಿದಿತ್ತು ? ಇಲ್ಲಿಯೇ ಅವನು ಉಳಿದಿದ್ದರೆ ಬಹುಶಃ ಅವನು ಸೆರೆಮನೆ ವಾಸ ಮಾಡಬೇಕಾಗುತ್ತಿತ್ತು. ಮರ್ಯಾದೆ ಕಳೆದುಕೊಂಡು ನಾಯಿಯ ಹಾಗೆ ಬಾಳಬೇಕಾಗುತ್ತಿತ್ತು. ಹಾಗೆ ಬಾಳುವುದರಿಂದ ಯಾವ ಧ್ಯೇಯ ಸಾಧನೆಯಾಗುತ್ತಿತ್ತು ? "

" ಬೇರೆ ಎಲ್ಲಿಯಾದರೂ ಜೀವದಿಂದಿದ್ದರೆ ಅವನ ದೃಷ್ಟಿ ತಪ್ಪು ಎನ್ನುವ ಹಾಗಿಲ್ಲ."

" ಆ ಮಾತು ನನಗೂ ಒಪ್ಪಿಗೆ. ಬಹುಶಃ ಅವನು ಬದುಕಿದ್ದಾನೆ ಎಂದೇ ನನ್ನ ಊಹೆ."

ರಾಜು ಆತ್ಮಹತ್ಯವನ್ನು ಮಾಡಿಕೊಳ್ಳುವುದಿಲ್ಲವೆಂದೇ ಆನಂದನ ಮನಸ್ಸು ಪದೇ ಪದೇ ಹೇಳುತ್ತಿತ್ತು. ಆದರೂ ಸಂದೇಹ ಆಗಾಗ ತಲೆ ಹಾಕುತ್ತಲೇ ಇತ್ತು. ಮನುಷ್ಯನ ಮನೋಗತಿಯನ್ನು ಅಸಾಧಾರಣ ಪ್ರಸಂಗ

ಗಳಲ್ಲಿ ಊಹಿಸುವುದು ಅಸಾಧ್ಯವೆಂದೆನಿಸುತ್ತಿತ್ತು.

ಕಾಲೇಜಿಗೆ ಹೊತ್ತಾಗಿತ್ತು. ಆನಂದ ಆತುರದಲ್ಲಿ ಮನೆಯಿಂದ ಹೊರಬಿದ್ದ.

೫೯

ಆನಂದ ಕಾಲೇಜಿನಿಂದ ಆ ದಿನ ಮುಂಚಿತವಾಗಿ ಬಂದ. ಸರೋಜ ಮಲಗಿದ್ದಳು. ಮುಖದ ಮೇಲೆ ಗೆಲವಿರಲಿಲ್ಲ.

" ಏಕೆ ಸರೋಜ, ಮಲಗಿರುವೆ ? "

ಸರೋಜ ನಿರುತ್ತರಳಾದಳು. ಅವಳ ಮುಖದ ಮೇಲೆ ಲಜ್ಜೆ ಮೂಡಿತು. ಆನಂದ ಮತ್ತೆ ಕೇಳಿದ :

" ಮೈಯಲ್ಲಿ ಹುಷಾರಿಲ್ಲವೆ ? "

ಮತ್ತೆ ಆ ಪ್ರಶ್ನೆಯನ್ನು ಕೇಳಿದಾಗ ಅವಳು ಮಂದವಾಗಿ ನೋಟವನ್ನು ಬೀರಿ ಕೇಳಿದಳು :

" ನಾನೇ ಅದನ್ನು ಹೇಳಬೇಕೆ ? "

ಆನಂದನಿಗೆ ಆಗ ಎಲ್ಲ ಅರಿವಾಯಿತು. ತಾನೇ ಅಷ್ಟನ್ನು ಊಹಿಸ ಬೇಕಾಗಿದ್ದಿತೆಂದೆನಿಸಿತು. ಸರೋಜ ಕೆಲವು ತಿಂಗಳುಗಳಲ್ಲಿ ತಾಯಾಗುವ ಚಿತ್ರ ಅವನಿಗೆ ಹೊಳೆಯಿತು.

" ಇನ್ನು ಮೇಲೆ ನಿನಗೆ ಹೆಚ್ಚು ವಿಶ್ರಾಂತಿ ಅವಶ್ಯ."

" ವಿಶ್ರಾಂತಿ ಇಲ್ಲದೆ ಏನು ನನಗೆ ? ಮನೆಯಲ್ಲಿ ಒಬ್ಬಳೇ ಇರುವುದು ತುಂಬ ಬೇಸರ, ಅಷ್ಟೆ."

ಆನಂದ ಅದೇ ವಿಚಾರವನ್ನು ಯೋಚಿಸಿದ. ಮನೆಯಲ್ಲಿ ಕೆಲಕಾಲ ಮತ್ತೊಬ್ಬ ಹೆಂಗಸು ಇರುವುದು ಅಗತ್ಯವಾಗಿತ್ತು. ಅವನಿಗೆ ಆಗ ಪದ್ಮಳ ನೆನಪಾಯಿತು. ಅವಳು ಬೆಂಗಳೂರಿನಲ್ಲಿ ಸ್ವಲ್ಪ ಕಾಲ ತಮ್ಮೊಡನಿರಬೇಕೆಂದು ಸರೋಜ ಇಷ್ಟಪಟ್ಟಿದ್ದಳು. ಅವಳನ್ನು ಕರೆತರಲು ನಿರ್ಧರಿಸಿದ.

" ಪದ್ಮ ಬೆಂಗಳೂರಿಗೆ ಬರುವ ವಿಚಾರ ಮಾತಿನಲ್ಲೇ ಉಳಿದಿದೆ. ಪುನಃ ಬರೆಯೋಣವೆ ? "

" ನಾನು ಹತ್ತು ಸಲ ಹೇಳಿದ್ದೇನೆ ನಿಮಗೆ. ಸುಮ್ಮನೆ ಬರೆದರೆ ಪದ್ಮ

ಕಾಗದಕ್ಕೆ ರೆಕ್ಕೆಹತ್ತಿ ಬರುವುದಿಲ್ಲ. ನೀವೇ ದೇವನಹಳ್ಳಿಗೆ ಹೋಗಬೇಕು."

"ನಾಳೆ ಒಂದು ಕಾಗದವನ್ನು ಹಾಕಿ ಶನಿವಾರ ಹೊರಡುತ್ತೇನೆ."

ಕಾಗದ ದೇವನಹಳ್ಳಿಯನ್ನು ಸೇರಿದಾಗ ನಾಣಿ ಊರಲ್ಲಿರಲಿಲ್ಲ. ಅಂಚೆಯವನು ಪತ್ರವನ್ನು ತಂದು ಪದ್ಮಳ ಕೈಗೆ ಕೊಟ್ಟ. ಅದು ವೆಂಕಮ್ಮನವರ ಹಸ್ತಗತವಾಗಿದ್ದರೆ ಅದರ ಗತಿ ಏನಾಗುತ್ತಿತ್ತೋ! ಶುಕ್ರವಾರ ಮಧ್ಯಾಹ್ನ ನಾಣಿ ಮನೆಗೆ ಬಂದ. ಅವನ ಮುಖ ಬಹಳ ಪೆಚ್ಚಾಗಿತ್ತು. ಬಹುಶಃ ಅವನು ಜೂಜಿನಲ್ಲಿ ಸೋತಿರಬಹುದು; ಅಥವಾ ನಾಟಕದಲ್ಲಿ ದೊಡ್ಡ ನಷ್ಟವಾಗಿರಬಹುದು ಎಂದು ಮನೆಯಲ್ಲಿ ಊಹಿಸಿದರು. ಪತ್ರವನ್ನು ಅವನು ಪೂರ್ತಿಯಾಗಿ ಓದಿದ. ಶನಿವಾರ ಪ್ರಾತಃಕಾಲವೇ ಅವನು ತಾವರೆಕೆರೆಯ ಜಾತ್ರೆಗೆ ಹೊರಡುವವನಿದ್ದ. ಜಾತ್ರೆಯ ಸಮಯದಲ್ಲಿ ಎರಡು ನಾಟಕಗಳ ಪ್ರದರ್ಶನ ಏರ್ಪಾಡಾಗಿತ್ತು.

"ಪದ್ಮ ಈಗ ಬೆಂಗಳೂರಿಗೆ ಹೋಗೋ ಪ್ರಮೇಯ ಏನು?" ಎಂದು ವೆಂಕಮ್ಮನವರು ಕೇಳಿದರು.

ದೇವರೇ ನಾಣಿಗೆ ಒಳ್ಳೆಯ ಬುದ್ಧಿ ಕೊಟ್ಟಿರಬೇಕು.

"ಅವಳನ್ನು ಸಂಪಿಗೆಗೂ ಕಳಿಸಲಿಲ್ಲ. ಈ ಸಲ ಬೆಂಗಳೂರಿಗೆ ಹೋಗಿ ಬರಲಿ."

"ನನಗೂ ವಯಸ್ಸಾಯಿತು. ಕೈಲಾಗೊಲ್ಲ. ಈಗ ಅವಳು ಬೆಂಗಳೂರಿನಲ್ಲಿ ಕೂತುಬಿಟ್ಟರೆ ಹೇಗಾಗಬೇಕು ಇಲ್ಲಿ?"

"ಹೇಗೋ ಆಗುತ್ತೆ. ಅವಳ ಆರೋಗ್ಯವೂ ಸರಿಯಾಗಿಲ್ಲ. ಅಲ್ಲೇ ಅಷ್ಟು ಮದ್ದು ತೆಗೆದುಕೊಳ್ಳಲಿ. ಆನಂದ ಬಂದರೆ ಕಳಿಸಿಕೊಡು" ಎಂದು ತೀರ್ಮಾನವನ್ನು ಹೇಳಿದ.

ಶನಿವಾರ ಸಂಜೆ ಆನಂದ ದೇವನಹಳ್ಳಿಗೆ ಬಂದ. ನಾಣಿ ಊರಲ್ಲಿರಲಿಲ್ಲ. ತಾನು ಪತ್ರವನ್ನು ಬರೆದಿದ್ದರೂ ನಾಣಿ ಊರಲ್ಲಿಲ್ಲದಿದ್ದುದು ಆನಂದನಿಗೆ ಸರಿ ಎನಿಸಲಿಲ್ಲ. ಆದರೂ ಪದ್ಮಳನ್ನು ಕಳುಹಿಸಿಕೊಡುವಂತೆ ಹೇಳಿಹೋಗಿದ್ದುದರಿಂದ ಅವನಿಗೆ ಸಂತೋಷವಾಯಿತು. ಪದ್ಮಳ ನಲಿವಿಗೆ ಎಣೆಯಿರಲಿಲ್ಲ. ಇಬ್ಬರೂ ಭಾನುವಾರವೇ ಬೆಂಗಳೂರಿಗೆ ಹೊರಟರು.

ಗಾಡಿಯಿಂದ ಇಳಿದು ಮನೆಯನ್ನು ಸೇರುತ್ತಲೆ ಸರೋಜ ಹಿಗ್ಗಿನಿಂದ

ಪದ್ಮಳನ್ನು ಕೈಹಿಡಿದು ಕರೆದುಕೊಂಡು ಒಳಗೆ ಹೋದಳು. ಪದ್ಮ ಸ್ವಲ್ಪ ಹೊತ್ತು ಏನೂ ಮಾತನಾಡದೆ ಬಿಕ್ಕಿಬಿಕ್ಕಿ ಕಣ್ಣೀರಿಟ್ಟಳು. ಅವಳನ್ನು ಸಮಾಧಾನ ಮಾಡುವುದು ಕಷ್ಟವಾಯಿತು.

ಎರಡೇ ದಿನಗಳಲ್ಲಿ ಪದ್ಮ, ಸರೋಜ ಪರಸ್ಪರ ವಿಶ್ವಾಸವನ್ನು ಬೆಳೆಸಿ ಕೊಂಡರು. ಪದ್ಮ ತನ್ನ ದುಃಖವನ್ನೆಲ್ಲ ಸರೋಜಳೆದುರು ತೋಡಿಕೊಂಡು ಹೃದಯವನ್ನು ಹಗುರು ಮಾಡಿಕೊಂಡಳು. ತಾನೊಂದು ಹೊಸ ಪ್ರಪಂಚಕ್ಕೆ ಕಾಲಿಟ್ಟಂತೆ ಬಗೆದಳು. ದೇವನಹಳ್ಳಿಯ ನರಕದಿಂದ ಬೆಂಗಳೂರಿನ ನಾಕ ವನ್ನು ಸೇರಿದಂತೆನಿಸಿತು ಅವಳಿಗೆ. ಆದರೆ ಅವಳ ಉದ್ದವಾದ ಬದುಕು ಸಾಗ ಬೇಕಾಗಿದ್ದುದು ದೇವನಹಳ್ಳಿಯಲ್ಲಿ! ಆದರೂ ಅನುಭವಿಸಬೇಕಾದ ಕಷ್ಟಗಳ ಮನನದಲ್ಲಿ ಅನುಭವಕ್ಕೆ ದೊರಕಿರುವ ಅಲ್ಪ ಸುಖವನ್ನು ಕಳೆದುಕೊಳ್ಳಲು ಪದ್ಮ ಇಷ್ಟಪಡಲಿಲ್ಲ.

ಪದ್ಮ ಮತ್ತು ಸರೋಜ ಯಾವ ಕೆಲಸವನ್ನು ಮಾಡಹೋದರೂ ಒಬ್ಬ ರನ್ನು ಇನ್ನೊಬ್ಬರು ತಡೆಯುತ್ತಿದ್ದರು. ಅದರಿಂದ ಕೆಲಸ ಹಂಚಿಹೋಗಿ ಕೆಲಸ ಮಾಡಿದ ಅನುಭವ ಇಬ್ಬರ ಗಮನವನ್ನೂ ತಪ್ಪಿಸಿಕೊಳ್ಳುತ್ತಿತ್ತು.

"ಸರೋಜ, ಕೆಲಸವನ್ನೆಲ್ಲಾ ನೀನೇ ಮಾಡುತ್ತೀ. ನನಗೆ ಇಲ್ಲೇನಿದೆ ಕೆಲಸ?"

"ನಿನ್ನನ್ನು ಇಲ್ಲಿಗೆ ಕರೆಸಿದ್ದು ಕೆಲಸ ಮಾಡಿಸಿಕೊಳ್ಳುವುದಕ್ಕಲ್ಲ, ಪದ್ಮ."

"ಹಾಗಾದರೆ ನಾನು ನಾಳೆ ದೇವನಹಳ್ಳಿಗೆ ಹೊರಟುಹೋಗುತ್ತೇನೆ."

"ಈಗ ಆ ಸ್ವಾತಂತ್ರ್ಯ ನಿನಗಿಲ್ಲವಲ್ಲಾ!"

"ಏಕಿಲ್ಲ?"

"ನಮ್ಮೂರಿಗೆ ಬಂದಮೇಲೆ ನಿನ್ನ ಸ್ವಾತಂತ್ರ್ಯ ಮುಗಿಯಿತು. ಈಗ ಸ್ವತಂತ್ರ ನಮ್ಮದು. ನಾವು ಹೇಳಿದಂತೆ ನೀನು."

"ನಿನ್ನ ಇಷ್ಟೊಂದು ಅಭಿಮಾನವನ್ನು ನಾನು ಹಿಂತಿರುಗಿಸುವುದು ಹೇಗೆ, ಸರೋಜ?"

"ನೀನು ಹಿಂತಿರುಗಿಸಲೇಬೇಕು. ಹೇಗೆ ಗೊತ್ತೆ?"

"ಇಲ್ಲ, ಹೇಳು."

"ನಾಳೆಯ ವರ್ಷ ನನ್ನ ಉಪಚಾರಗಳಿಗೆ ನೀನು ಬೇಡ ಎನ್ನದೆ ಇರುವುದು." ಇಬ್ಬರೂ ನಗೆಯಾಡಿದರು.

ಕಣ್ಣಿನಲ್ಲಿ ಕೂಡಿದ ನೀರನ್ನು ಸರೋಜಳಿಗೆ ಕಾಣದಂತೆ ಪದ್ಮ ಸೆರಗಿನ ಅಂಚಿನಿಂದ ಒರಸಿಕೊಂಡಳು. ಆ ಸಮಯಕ್ಕೆ ಆನಂದ ಬಂದ.

" ಸಂಜೆ ಸಿನೀಮಾಗೆ ಹೋಗೋಣ " ಎಂದು ಸರೋಜ, ಪದ್ಮ ಇಬ್ಬರ ಕಡೆಗೂ ಆನಂದ ನೋಟ ಬೀರಿದ.

" ಆಗಲೆ ನಾವು ಕಾರ್ಯಕ್ರಮ ಹಾಕಿಬಿಟ್ಟಿದ್ದೆವು. ನೀವೇ ಆ ಸಲಹೆ ಯನ್ನು ಮೊದಲುಮಾಡಿದಿರಿ " ಎಂದು ಸರೋಜ ಹೇಳಿದಳು.

" ನೀವು ಹಾಕಿದ್ದ ಕಾರ್ಯಕ್ರಮ ಏನು ? "

" ' ಜೀವನ ' ಚಿತ್ರಕ್ಕೆ ಹೋಗುವುದು."

ಅವರಿಬ್ಬರೂ ಆ ಚಿತ್ರವನ್ನು ನೋಡಬೇಕೆಂದು ಆನಂದನಿಗೆ ಇಷ್ಟವಿತ್ತು. ಸಂಜೆ ಎಲ್ಲರೂ ಚಿತ್ರಮಂದಿರಕ್ಕೆ ಹೊರಟರು.

' ಜೀವನ ' ಚಿತ್ರದ ವಿನೋದಮಯವಾದ ದೃಶ್ಯಗಳನ್ನು ಕಂಡು ಸರೋಜ, ಪದ್ಮ ನಲಿದರು. ಹೆಣ್ಣು ಜೀವನದ ಕೆಲವು ಉಗ್ರವಾದ ಸತ್ಯದೃಶ್ಯ ಗಳು ಅವರ ಮನಸ್ಸನ್ನು ಕದಡಿದವು. ಪದ್ಮಳ ಮನಸ್ಸಿನ ಮೇಲೆ ಅವು ತಮ್ಮ ಮುದ್ರೆಯನ್ನೊತ್ತಿದವು. ಸರೋಜ ಈಗ ಲಘುದೃಷ್ಟಿಯಿಂದಲೇ ಚಿತ್ರಗಳನ್ನು ನೋಡುತ್ತಿರಲಿಲ್ಲ. ಅವಳ ಮನಸ್ಸು ಜೀವನದ ಜಟಿಲ ಸಮಸ್ಯೆ ಗಳ ಕಡೆಗೂ ಹರಿಯುತ್ತಿತ್ತು. ದೃಷ್ಟಿಕೋನ ಬದಲಾಯಿಸಿತ್ತು.

ಚಿತ್ರ ಮುಗಿಯಿತು. ಬಸ್ಸಿಗಾಗಿ ಕಾಯುವುದು ಆನಂದನಿಗೆ ಬೇಡ ವಾಯಿತು. ಗಾಡಿ ಹತ್ತಿ ಮೂವರೂ ಮನೆಯನ್ನು ಸೇರಿದರು.

ಒಂದೂವರೆ ತಿಂಗಳು ಪದ್ಮಳಿಗೆ ಒಂದು ಹಗಲಿನಂತೆ ಕಳೆದುಹೋಗಿದೆ. ಅವಳು ಈಗ ಮೈತುಂಬಿಕೊಂಡಿದ್ದಾಳೆ. ಮುಖ ಅರಳಿದೆ. ಅಲ್ಲಿ ಚಿಂತೆಯ ಸುಕ್ಕಿಲ್ಲ. ಅವಳಲ್ಲಿ ಪಟ್ಟಣದ ನಾಗರಿಕತೆ ಹೊರಗಾಣುತ್ತಿದೆ. ಮತ್ತೆ ದೃಢ ಕಾಯಳಾಗಿದ್ದಾಳೆ. ಆದರೂ ಒಂದೊಂದು ಸಲ ಸ್ವಲ್ಪ ಎದೆನೋವು ತೋರು ವುದು. ಅದಕ್ಕೂ ಮದ್ದನ್ನು ತೆಗೆದುಕೊಳ್ಳುತ್ತಿದ್ದಾಳೆ. ಸರೋಜಳ ಒತ್ತಾಯ ದಿಂದ ದೇಹಪುಷ್ಟಿಗಾಗಿ ಟಾನಿಕ್ ಮತ್ತು ಹಣ್ಣನ್ನು ತೆಗೆದುಕೊಳ್ಳುತ್ತಿದ್ದಾಳೆ. ಅವಳಲ್ಲಿ ಸುಪ್ತವಾಗಿದ್ದ ದೇಹಸೌಂದರ್ಯ ಈಗ ಹೊರಹೊಮ್ಮುತ್ತಿದೆ.

ಒಂದು ಮಧ್ಯಾಹ್ನ ಸಂಪಿಗೆಯಿಂದ ಒಂದು ಪತ್ರ ಬಂದಿತು. ಅದರಲ್ಲಿ ರಂಗರಾಯರು ಖಾಯಿಲೆಯಿಂದ ಹಾಸಿಗೆ ಹಿಡಿದಿರುವರೆಂಬ ಸುದ್ದಿಯಿತ್ತು.

ಅಲ್ಲದೆ ಪದ್ಮ, ಆನಂದ ಮತ್ತು ಸರೋಜ ಮೂವರನ್ನೂ ಒಮ್ಮೆ ನೋಡ ಬೇಕೆಂದು ಹಂಬಲಪಟ್ಟಿದ್ದರು. ಪದ್ಮಳಿಗೂ ತಂದೆತಾಯಿಗಳನ್ನು ನೋಡ ಬೇಕೆಂಬ ತವಕವಿತ್ತು. ಎಲ್ಲರೂ ಸಂಪಿಗೆಗೆ ಹೊರಡಲು ನಿರ್ಧರಿಸಿದರು. ಹೊರಡುವ ದಿವಸ ಬಂದಿತು. ನಿಲ್ದಾಣದಿಂದ ರೈಲು ಮುಂದುರುಳಿದಾಗ ಪದ್ಮಳಿಗೆ ಏನೋ ಸಂಕಟವಾಯಿತು. ತಾನು ಆ ಸುಂದರವಾದ ನಗರವನ್ನು ತನ್ನ ಜೀವಿತವಲ್ಲಿ ಪುನಃ ನೋಡಬಹುದೋ ಇಲ್ಲವೋ ಎಂಬ ಸಂದೇಹ ಹುಟ್ಟಿತು. ಬೆಂಗಳೂರಿನ ಸುಖದ ದಿನಗಳು ಬಹಳ ಬೇಗ ಕಳೆದುಹೋದಂತೆ ಅವಳಿಗೆ ತೋರಿತು.

## ೬೦

ರಂಗರಾಯರು ವಾರದಿಂದ ಹಾಸಿಗೆ ಹಿಡಿದಿದ್ದರು. ಶರೀರ ಕೃಶವಾಗಿತ್ತು. ಊಟ ಸೇರುತ್ತಿರಲಿಲ್ಲ. ನಿತ್ರಾಣ, ನಿರುತ್ಸಾಹ. ರಾತ್ರಿ ಅರ್ಧ ಎಚ್ಚರದಲ್ಲಿ ಏನೇನೋ ತೊದಲುನುಡಿ.

ನಾಗಮ್ಮನವರು ಸುಮ್ಮನೆ ಕುಳಿತಿರುತ್ತಿದ್ದರು. ಹೃದಯದ ಬೇನೆ ವಾಸಿ ಆಗಿರಲಿಲ್ಲ. ಅದು ತಮ್ಮ ಜನ್ಮಕ್ಕೆ ಹತ್ತಿದ ರೋಗವೆಂದು ಗೋಳಿಡುತ್ತಿದ್ದರು. ಸ್ವಲ್ಪ ಕೆಲಸವನ್ನೂ ಮಾಡುವಂತಿರಲಿಲ್ಲ. ರಂಗರಾಯರ ಖಾಯಿಲೆಯಿಂದ ಅವರು ಮತ್ತೂ ಎದೆಗೆಟ್ಟಿದ್ದರು. ಮನೆಯಲ್ಲಿ ಚಿಂತಾಜನಕ ಪರಿಸ್ಥಿತಿ. ಅಂತಹ ಸಮಯದಲ್ಲಿ ಶಾಮರಾಯರೂ ಅವರ ಧರ್ಮಪತ್ನಿಯೂ ಅವರಿಗೆ ನೆರವಾಗಿದ್ದರು.

ಆನಂದ, ಸರೋಜ ಮತ್ತು ಪದ್ಮ ಮನೆ ಸೇರಿದಾಗ ಮಧ್ಯಾಹ್ನ ಜಾರಿ ಹೋಗಿತ್ತು. ಭಾಗೀರತಮ್ಮನವರು ಅವರಿಗಾಗಿ ಅಡಿಗೆ ಮಾಡಿ ಕಾದಿದ್ದರು. ಐದು ಜೀವಗಳೂ ಒಟ್ಟಿಗೆ ಸೇರಿದಾಗ ಎಲ್ಲರ ಕುತ್ತಿಗೆಗಳೂ ಉಬ್ಬಿದವು. ಯಾರೂ ಕ್ಷಣಕಾಲ ಮಾತನಾಡಲಿಲ್ಲ. ನಾಗಮ್ಮ ಬಿಕ್ಕಿಬಿಕ್ಕಿ ನುಡಿದರು :

" ಮೂವರನ್ನೂ ಕಣ್ಣಲ್ಲಿ ನೋಡುವ ಭಾಗ್ಯ ನನಗೆ ಸಿಕ್ಕಿತು. ನನಗೆ ಇನ್ನೇನು ಬೇಕು ? ಇನ್ನು ಬೇಗನೆ ಕಣ್ಣುಮುಚ್ಚಿಕೊಂಡರೆ ಸಾಕು."

ಆ ಮಾತನ್ನು ಕೇಳಿದಾಗ ಪದ್ಮ, ಸರೋಜ ಇಬ್ಬರ ಹೆಂಗರುಳೂ ನೊಂದಿತು.

" ಹಾಗೇಕೆ ಮಾತನಾಡುತ್ತೀ, ಅಮ್ಮ ? " ಎಂದು ಪದ್ಮ ವಾತ್ಸಲ್ಯವನ್ನು ತೋರಿಸಿದಳು.

ಆ ಮಾತು ನಾಗಮ್ಮನವರ ದುಃಖವನ್ನು ಮತ್ತಷ್ಟು ಹೆಚ್ಚಿಸಿತು.

“ನನಗೆ ಇನ್ನು ಏನು ಆಸೆ ಉಳಿದಿದೆ, ಪದ್ಮ?” ಎಂದು ತಮ್ಮ ನೋವನ್ನು ನುಂಗಿಕೊಂಡರು. ಮಕ್ಕಳ ಮನಸ್ಸಿಗೆ ತಮ್ಮ ಮಾತಿನಿಂದ ನೋವಾಗಬಾರದೆನಿಸಿತು.

ಸರೋಜ, ನಾಗಮ್ಮನವರ ಹಾಸಿಗೆಯ ಬಳಿಯಲ್ಲಿಯೇ ಬಹಳ ಹೊತ್ತು ಕುಳಿತಿರುತ್ತಿದ್ದಳು. ಅವರ ಮನಸ್ಸನ್ನು ಸಮಾಧಾನಪಡಿಸಲು ತನ್ನ ಮಾತುಗಾರಿಕೆಯನ್ನೆಲ್ಲ ಉಪಯೋಗಿಸುತ್ತಿದ್ದಳು. ಅವಳು ತಮ್ಮಲ್ಲಿ ತೋರಿಸಿದ ನಯ, ವಿನಯ ಮತ್ತು ವಿಶ್ವಾಸಗಳಿಂದ ಅವರ ಮನಸ್ಸು ಹಗುರವಾಯಿತು.

ಮಧ್ಯಾಹ್ನ ನಾಗಮ್ಮನವರು ಸರೋಜಳೊಡನೆ ಮಾತನಾಡುತ್ತಿದ್ದಾಗ ಪದ್ಮ ತಾಯಿಯ ಕಿವಿಯಲ್ಲಿ ಏನೋ ಹೇಳಿದಳು. ಸರೋಜ ಆ ಮಾತನ್ನು ಊಹಿಸಿಕೊಂಡಳು. ತಕ್ಷಣ ತಲೆಬಾಗಿ ನಾಚಿಕೆಯನ್ನು ತೋರಿದಳು. ಪದ್ಮಳ ಕಡೆಗೆ ಸುರುಳಿ ನಗೆಯನ್ನು ನಕ್ಕಳು. ನಾಗಮ್ಮನವರ ಬತ್ತಿದ ಮುಖದ ಮೇಲೆ ನಲಿವಿನ ಬುಗ್ಗೆ ಉಕ್ಕಿತು. ಕೆಲವು ಗಂಟೆಗಳ ಕಾಲ ಹರ್ಷಚಿತ್ತರಾಗಿ ತಮ್ಮ ನೋವನ್ನು ಪೂರ್ತಿ ಮರೆತರು.

“ನಮ್ಮ ಮನೆಬೆಳಕು ಆರುವುದಿಲ್ಲ. ಸರೋಜಳಿಗೆ ವಂಶೋದ್ಧಾರಕನೇ ಹುಟ್ಟುತ್ತಾನೆ” ಎಂದರು. ಸುದ್ದಿಯನ್ನು ತಿಳಿದು ಸಮಾಧಾನವನ್ನೇ ಕಾಣದ ರಂಗರಾಯರ ಹೃದಯದಲ್ಲಿ ನಿಜವಾಗಿ ಸಮಾಧಾನ ಉದಯಿಸಿತು.

ಒಂದು ವಾರ ಕಳೆಯಿತು. ಮರುಭೂಮಿಯ ಮೌನ ತುಂಬಿದ್ದ ರಂಗರಾಯರ ಮನೆ ನಗೆಯ ಸಿರಿಬೀಡಾಗಿದೆ. ರೋಗಪೀಡಿತರಾಗಿದ್ದರೂ ನಾಗಮ್ಮನವರಲ್ಲಿ ಗೆಲವುಂಟಾಗಿದೆ. ಅಲ್ಲಿ ಕಾಣುತ್ತಿದ್ದ ನಲಿವಿನ ಹಿನ್ನೆಲೆಯಲ್ಲಿ ಮತ್ತೆ ಮುಸುಕಲು ಕಾದಿರುವ ಚಿಂತೆಯ ಕರಿ ಮೋಡಗಳು ಸುಳಿಯುತ್ತಿವೆ. ಇನ್ನು ಎರಡೇ ದಿನಗಳಲ್ಲಿ ಆನಂದ, ಸರೋಜ ಬೆಂಗಳೂರಿಗೆ ಹೊರಟುಹೋಗುತ್ತಾರೆಂಬುದೇ ಆ ಚಿಂತೆ. ಪದ್ಮಳೇನೋ ಇನ್ನೂ ಅಷ್ಟು ದಿನ ಸಂಪಿಗೆಯಲ್ಲಿರುತ್ತಾಳೆ. ಆದರೆ ಎಷ್ಟು ದಿನ ಅವಳು ಸಂಪಿಗೆಯಲ್ಲಿಯೇ ಉಳಿದಾಳು? ದೇವನಹಳ್ಳಿಗೆ ಅವಳು ಹೋಗಲೇಬೇಕಾಗುವುದು. ಆ ಯೋಚನೆಯಲ್ಲಿ ಅವರ ಹೃದಯ ಭಾರವಾಗುತ್ತಿತ್ತು.

ಆನಂದನ ಮನಸ್ಸಿನಲ್ಲಿ ಒಂದು ಯೋಚನೆ ಕೊರೆಯುತ್ತಲೇ ಇತ್ತು.

ಅದು ರಂಗರಾಯರನ್ನು ಕುರಿತು. ಅವರು ಜೀವನದಲ್ಲಿ ಸೌಖ್ಯದ ಸವಿಯನ್ನೇ ಸವಿದಿರಲಿಲ್ಲ. ಇಡೀ ಬಾಳನ್ನು ಕುಟುಂಬದ ಸುಖಕ್ಕಾಗಿ ತೆಯ್ದರು. ತಮ್ಮ ಕಷ್ಟಾನುಭವದಲ್ಲಿ ಇತರರ ಸುಖದ ಗೋಪುರವನ್ನು ಕಟ್ಟಿಕೊಂಡಿದ್ದರು. ಆದರೆ ಆ ಗೋಪುರ ಉರುಳಿತು. ಪದ್ಮಳ ಬಾಳನೌಕೆ ಕಣ್ಣೀರಿನ ಕಾಲುವೆಯ ಮೇಲೆಯೇ ತೇಲಿಹೋಗಿ ಗತಿ ಮುಟ್ಟಬೇಕೆಂದು ಸತತವಾಗಿ ಮರುಗಬೇಕಾಯಿತು. ಆದರೆ ನಾಣಿಗೆ ಪಾಠ ಕಲಿಸುವವರೆಗೆ ಅವರು ಪದ್ಮಳನ್ನು ಮತ್ತೆ ದೇವನಹಳ್ಳಿಗೆ ಕಳುಹಿಸುವುದಿಲ್ಲವೆಂದು ಮನಸ್ಸುಮಾಡಿದ್ದರು.

ರಂಗರಾಯರು ಆನಂದನ ವಿಚಾರದಲ್ಲಿ ಶಾಂತಿಯನ್ನು ತಾಳಿದ್ದಾರೆ. ಆನಂದ ತನ್ನ ಬದುಕಿನ ಮಾರ್ಗವನ್ನು ಕಂಡುಕೊಂಡು ನಡೆಯುತ್ತಿದಾನೆ. ತಮಗೆ ದೈವ ಆಯುಷ್ಯಭಿಕ್ಷೆಯನ್ನು ನೀಡಿದರೆ ತಮ್ಮ ವಂಶವೃಕ್ಷವನ್ನು ಉಳಿಸುವ ಸಂತತಿಯನ್ನು ನೋಡುತ್ತಾರೆ. ಅದೊಂದು ಆಸೆ ಅವರೆದೆಯಲ್ಲಿ ಇನ್ನೂ ಉಳಿದಿದೆ. ಅವರು ಸರೋಜಳನ್ನು ಹಿಗ್ಗುತುಂಬಿದ ಕಣ್ಣಿನಿಂದ ನೋಡುತ್ತಾರೆ. ಮನಸ್ಸಿಗೆ ನೆಮ್ಮದಿ ಮೂಡುತ್ತದೆ. ಪದ್ಮಳನ್ನು ನೋಡಿದಾಗ ಆ ನೆಮ್ಮದಿ ಅಳಿಸಿಹೋಗಿ, ಮನಸ್ಸಿನ ದುಗುಡ ಹೊಗೆಯಾಡುವುದು. ಅವರ ಮುಪ್ಪಿನ ದಿನಗಳು ಸನ್ನಿಹಿತವಾಗುತ್ತಿವೆ. ವಯಸ್ಸಿನಿಂದ ಶರೀರ ಹಣ್ಣಾಗುತ್ತಿದೆ. ಹಣ್ಣಿನ ತೊಟ್ಟು ಯಾವಾಗ ಕಳಚಿಹೋಗುವುದೋ ?

ಇಷ್ಟೆಲ್ಲ ವಿಚಾರಗಳು ಆನಂದನ ಮನಸ್ಸಿನಲ್ಲಿ ಹುದುಗಿದ್ದವು. ಅವನು ಒಂದು ನಿರ್ಧಾರಕ್ಕೆ ಬಂದಿದ್ದ : ಸಂಪಿಗೆಯನ್ನು ಬಿಟ್ಟು ಎಲ್ಲರೂ ಬೆಂಗಳೂರಿನಲ್ಲಿ ನೆಲಸಬೇಕೆಂದು. ರಂಗರಾಯರಿಗೆ ಅವನು ಹಲವು ಬಾರಿ ಆ ನಿರ್ಧಾರವನ್ನು ತಿಳಿಸಿದ್ದ. ಆದರೆ ಸಂಪಿಗೆಯನ್ನು ಬಿಟ್ಟುಹೋಗಲು ಅವರು ಸುಲಭವಾಗಿ ಸಮ್ಮತಿಸಲಿಲ್ಲ. ಮನೆ, ಭೂಮಿ, ಮಂದಿ—ಸಂಪಿಗೆಯ ಬಂಧನಗಳನ್ನೆಲ್ಲ ತೊರೆದು, ಬೆಂಗಳೂರಿಗೆ ಹೊರಟುಹೋಗುವುದು ಅವರ ಹೃದಯಕ್ಕೆ ಒಪ್ಪಿಗೆಯಾಗಲಿಲ್ಲ. ತಾವು ಬಹಳ ಶ್ರಮಿಸಿ ಕಷ್ಟದಿಂದ ಉಳಿಸಿಕೊಂಡು ಬಂದಿದ್ದ ಮನೆ, ಭೂಮಿಗಳನ್ನು ಪರಹಸ್ತಗತಮಾಡುವುದು ಅವರಿಗೆ ಅಸಹನೀಯವಾಯಿತು. ಅದನ್ನರಿತು ಆನಂದ ತನ್ನ ಮನಸ್ಸನ್ನು ಒತ್ತಿ ನುಡಿಯುತ್ತಿರಲಿಲ್ಲ. ಈಗ ಆನಂದ ಮತ್ತೆ ತನ್ನ ಆಸೆಯನ್ನು ಬಿಚ್ಚಿ ಹೇಳಿದ. ರಂಗರಾಯರು ಅದನ್ನು ಈ ಸನ್ನಿವೇಶದಲ್ಲಿ ವಿರೋಧಿಸಲಿಲ್ಲ. ಸಂಪಿಗೆಯಲ್ಲಿ ತಮಗೆ ಇನ್ನು ಉಳಿದಿರುವ

ಕೆಲಸವೇನು ಎಂಬ ಯೋಚನೆಯೂ ಹೊಳೆಯಿತು. ಬಾಳ ಸಂಜೆಯನ್ನು ಎಲ್ಲಿಯೋ ಶಾಂತವಾಗಿ ಕಳೆದರಾಯಿತು ಎಂದೆನಿಸಿತು. ಆ ಯೋಚನೆಯಲ್ಲಿ ದೃಢತೆಯೇನೂ ಇರಲಿಲ್ಲ. ತಮ್ಮ ದೇಹಸ್ಥಿತಿ ಉತ್ತಮಗೊಳ್ಳುವವರೆಗೂ ವಿಚಾರವನ್ನು ಮುಂದಕ್ಕೆ ಹಾಕಿದರು.

ರಂಗರಾಯರಿಗೆ ಜ್ವರ ಬಿಟ್ಟಿತಾದರೂ ನಿತ್ರಾಣ ಇದ್ದೇ ಇತ್ತು. ಆನಂದನ ರಜ ಮುಗಿಯಿತು. ಬೆಂಗಳೂರಿಗೆ ಹೊರಡಲೇಬೇಕಾಯಿತು. ಆನಂದ, ಸರೋಜ ಬೆಂಗಳೂರಿಗೆ ಹೊರಡುವುದು ಮತ್ತು ಪದ್ಮ ಇನ್ನು ಕೆಲವು ವಾರ ಸಂಪಿಗೆಯಲ್ಲಿಯೇ ಉಳಿಯುವುದು ಎಂದು ನಿಶ್ಚಯವಾಯಿತು.

ಆನಂದನ ಕರುಳನ್ನು ಒಂದು ಯೋಚನೆ ಅಲುಗಿಸುತ್ತಿತ್ತು. ಸಂಪಿಗೆಯ ಮನೆ, ಗದ್ದೆ, ತೋಟಗಳು ಅನೇಕ ತಲೆಮಾರಿನಿಂದ, ಪೀಳಿಗೆಯಿಂದ ಪೀಳಿಗೆಗೆ ಬಂದಿದ್ದವು. ರಂಗರಾಯರಿಗೆ ಅವುಗಳಲ್ಲಿ ಬಹಳ ಮಮತೆ ಇತ್ತು. ತಾನು ಅವುಗಳನ್ನು ಬೇರೆಯವರ ಕೈಲಿರಿಸಿ ಹುಟ್ಟಿದ ಊರಿನ ಸಂಬಂಧವನ್ನೆಲ್ಲ ತೊಡೆದುಹಾಕುವುದೇ ಎಂದು ಅವನ ಮನಸ್ಸಿನಲ್ಲಿ ತಿಕ್ಕಾಟವಾಗುತ್ತಿತ್ತು. ಆಗ ಅವನ ನಿರ್ಧಾರ ಸಡಿಲವಾಗುತ್ತಿತ್ತು. ಮುಖ್ಯವಾಗಿ ತನ್ನ ತಂದೆತಾಯಿಗಳಿಗೆ ಅವರ ಕೊನೆಯ ದಿನಗಳಲ್ಲಿ ತನ್ನ ಕೈನಡೆದಷ್ಟು ಸುಖಶಾಂತಿಗಳನ್ನು ಕೊಡುವುದು ಆನಂದನ ಉದ್ದೇಶವಾಗಿತ್ತು.

## ೬೧

ಸಂಜೆ ಆನಂದ ಶಾಮರಾಯರೊಡನೆ ತಿರುಗಾಡಲು ಹೊರಟ. ಇಬ್ಬರಿಗೂ ದೂರದ ಪರವೆ ಇರಲಿಲ್ಲ. ಬಹಳ ದೂರ ನಡೆದರು. ಆನಂದ ತನ್ನ ಯೋಚನೆಗಳನ್ನೆಲ್ಲ ಶಾಮರಾಯರಿಗೆ ಬಿಡಿಸಿ ಹೇಳಿದ.

" ಎಲ್ಲರೂ ಬೆಂಗಳೂರಿಗೆ ಹೊರಟುಹೋಗುವುದೆಂದು ನನ್ನ ನಿಶ್ಚಯ, ಶಾಮರಾಯರೆ."

" ರಂಗೂ ಒಪ್ಪಿಕೊಂಡನೆ ? "

" ಎಷ್ಟು ಕೇಳಿದರೂ ಸಂಪಿಗೆ ಬಿಡುವುದಕ್ಕೆ ಹಿಂದುಮುಂದು ನೋಡುತ್ತಿದ್ದಾರೆ."

" ಹುಟ್ಟಿ ಬೆಳೆದ ನೆಲ—ಮಮತೆ."

" ಬೆಳಗ್ಗೆ ಮತ್ತೆ ಅದೇ ವಿಚಾರ ಎತ್ತಿದೆ."

" ಏನು ಹೇಳಿದ ? "

" ಹೊರಡುವುದಕ್ಕೆ ಒಪ್ಪಿಗೆ ಕೊಟ್ಟ ಹಾಗೇ ಸುಮ್ಮನೆ ಇದ್ದರು."

" ನಾನೂ ಆ ವಿಚಾರ ಅವನಿಗೆ ಎಷ್ಟೋ ಸಲ ಹೇಳಿದ್ದೇನೆ. ಒಂದು ಸಲ ಆಗಲಿ ಎನ್ನುತ್ತಾನೆ. ಮತ್ತೊಂದು ಸಲ ಮಮತೆ ಅವನ ಮನಸ್ಸನ್ನು ಸುತ್ತಿಕೊಳ್ಳುತ್ತದೆ."

" ಮನೆ, ಜಮೀನಿನ ವ್ಯವಸ್ಥೆ ಹೇಗೆ ಎನ್ನುವ ಯೋಚನೆ ಹತ್ತಿರುವ ಹಾಗೆ ಕಾಣುತ್ತೆ."

" ನನಗೂ ಅದನ್ನು ಎಷ್ಟೋ ಸಲ ಹೇಳಿದ್ದಾನೆ."

" ಶಾಮರಾಯರೆ, ಸಂಪಿಗೆಯಲ್ಲಿ ನಮಗಿರುವ ಬಂಧುಮಿತ್ರರೆಲ್ಲ ನೀವೆ. ನಿಮ್ಮಲ್ಲಿ ಒಂದು ವಿನಂತಿ ಮಾಡಬಹುದೆ ? "

" ವಿಚಾರ ಏನು ಹೇಳು, ಆನಂದ. ಸಂಕೋಚ ಏಕೆ ? ನಾನೂ ನಿಮ್ಮ ಕುಟುಂಬದವನೇ ಆಗಿದ್ದೇನೆ."

" ನಮ್ಮ ಸಮಯಗಳಲ್ಲೆಲ್ಲಾ ದಿಕ್ಕಾಗಿದ್ದೀರಿ."

ಶಾಮರಾಯರ ಮನಸ್ಸು ಅರಳಿತು.

" ಅದಿರಲಿ, ಆನಂದ. ಮಾತನ್ನು ಅರ್ಧಕ್ಕೇ ನಿಲ್ಲಿಸಿಬಿಟ್ಟೆಯಲ್ಲಾ. ವಿಚಾರವನ್ನು ಪೂರ್ತಿ ಹೇಳು."

" ಜಮೀನನ್ನು ಮಾರುವುದಕ್ಕೆ ಅಪ್ಪನ ಮನಸ್ಸು ಒಪ್ಪುವುದಿಲ್ಲ. ಅಜ್ಜನ ಕಾಲದಿಂದ ಬಂದಿರುವ ಭೂಮಿ ಅದು. ಆಪತ್ತಿನ ಸಮಯಗಳಲ್ಲೂ ಕಳೆದುಕೊಳ್ಳದೆ ಉಳಿಸಿಕೊಂಡು ಬಂದಿದ್ದಾನೆ, ಅಪ್ಪ. ಆದರೆ ಅದನ್ನು ಇನ್ನೂ ಕಟ್ಟಿಕೊಂಡು ಸಂಪಿಗೆಯಲ್ಲೇ ಇರುವುದಕ್ಕೆ ಕೈಕಾಲಿನಲ್ಲಿ ಏನೂ ಶಕ್ತಿಯಿಲ್ಲ. ನಮಗೋಸ್ಕರ ಇನ್ನುಮುಂದೆ ಆ ಬೇಸಾಯದ ವ್ಯವಸ್ಥೆಯನ್ನೆಲ್ಲ ನೀವು ನಿರ್ವಹಿಸಬೇಕು."

ಶಾಮರಾಯರು ತಕ್ಷಣ ಯಾವ ಮಾತನ್ನೂ ಆಡಲಿಲ್ಲ. ಆನಂದ ಮುಂದುವರಿಸಿದ :

" ನಮಗಾಗಿ ನೀವು ಅಷ್ಟು ಶ್ರಮವಹಿಸಬೇಕು, ಶಾಮರಾಯರೆ."

ಶಾಮರಾಯರು ಒಂದು ತೀರ್ಮಾನಕ್ಕೆ ಬಂದು ನುಡಿದರು :

"ಮೊದಲೇ ನಾನು ಹೇಳಿದ್ದೇನೆ, ಆನಂದ. ನಾನೂ ನಿಮ್ಮ ಕುಟುಂಬಕ್ಕೆ ಸೇರಿದವನೇ. ರಂಗೂ ನನಗೆ ಎಷ್ಟೋ ಉಪಕಾರ ಮಾಡಿದ್ದಾನೆ. ಅದನ್ನು ನಾನು ಮರೆತಿಲ್ಲ. ನಿಮಗೆಲ್ಲ ಹಿತವಾಗುವ ಹಾಗೆ ನಾನು ನಡೆಯುತ್ತೇನೆ."

ಆನಂದ ಪ್ರಫುಲ್ಲಚಿತ್ತನಾದ. ಶಾಮರಾಯರಲ್ಲಿ ಅವನಿಗಿದ್ದ ಗೌರವ, ವಿಶ್ವಾಸ ದ್ವಿಗುಣವಾಯಿತು.

"ನಾನು, ಸರೋಜ ನಾಳೆಯೇ ಬೆಂಗಳೂರಿಗೆ ಹೊರಡಬೇಕಾಗಿದೆ. ನನ್ನ ರಜ ಮುಗಿಯಿತು. ನಾನು ಹೆಚ್ಚಾಗಿ ನಿಮ್ಮನ್ನೇ ನಂಬಿದ್ದೇನೆ. ಅಪ್ಪನ ಆರೋಗ್ಯವನ್ನು ನೀವೇ ವಿಚಾರಿಸಿ ನನಗೆ ಬರೆಯುತ್ತಿರಿ."

"ನೀನು ಯೋಚನೆಯನ್ನು ಬಹಳ ಹಚ್ಚಿಕೊಳ್ಳಬೇಡ, ಆನಂದ. ಇಲ್ಲಿ ನಾನು ಎಲ್ಲಾ ವಿಚಾರಗಳನ್ನೂ ನೋಡಿಕೊಳ್ಳುತ್ತೇನೆ."

"ನಿಮ್ಮ ಉಪಕಾರವನ್ನು ನಾನು ಎಂದಿಗೂ ಮರೆಯುವ ಹಾಗಿಲ್ಲ."

ಆ ಹೊತ್ತಿಗೆ ಮನೆ ಸಮೀಪಿಸಿತು.

ಮರುದಿನ ಸಂಜೆಯ ಗಾಡಿಗೆ ಆನಂದ, ಸರೋಜ ಬೆಂಗಳೂರಿಗೆ ಹೊರಟರು. ಪದ್ಮ ಸಂಪಿಗೆಯಲ್ಲಿಯೇ ಉಳಿದಳು.

ಮೂರು ತಿಂಗಳು ಕಳೆದುಹೋಗಿದೆ. ನಾಣಿಯಿಂದ ರಂಗರಾಯರಿಗಾಗಲಿ, ಆನಂದನಿಗಾಗಲಿ ಕಾಗದವಿಲ್ಲ. ರಂಗರಾಯರ ತೀರ್ಮಾನ ದೃಢವಾಗಿದೆ. ನಾಣಿಗೆ ಅವರು ಪುನಃ ಕಾಗದ ಬರೆಯುವುದಿಲ್ಲ, ಪದ್ಮಳನ್ನು ದೇವನಹಳ್ಳಿಗೆ ಕಳುಹಿಸುವುದಿಲ್ಲ. ಅವನೇ ತಮ್ಮ ಮನೆಯ ಬಾಗಿಲಿಗೆ ಬರಬೇಕು, ಪಾಠವನ್ನು ಕಲಿತು.

ಒಂದು ದಿನ ಮಧ್ಯಾಹ್ನ ರಂಗರಾಯರೂ ಶಾಮರಾಯರೂ ಮಾತನಾಡುತ್ತಿದ್ದಾರೆ. ಮಾತು ಗದ್ದೆಯ ವಿಚಾರವನ್ನು ಕುರಿತದ್ದು. ಆ ಸಮಯಕ್ಕೆ ಪದ್ಮ ಅರಳಿದ ಮುಖವನ್ನು ತೋರುತ್ತ ಕೊಟಡಿಗೆ ಬಂದಳು.

"ಆನಂದನಿಂದ ಕಾಗದ ಬಂದಿದೆ" ಎಂದು ಕೈಯಲ್ಲಿದ್ದ ಕವರನ್ನು ರಂಗರಾಯರಿಗೆ ಕೊಟ್ಟಳು.

ರಂಗರಾಯರು ಆತುರದಿಂದ ಅದನ್ನು ಬಿಚ್ಚಿ ಪತ್ರವನ್ನು ಓದಿಕೊಂಡರು. ಅವರ ಮುಖದಲ್ಲಿ ಆನಂದದ ಹೊನಲು ಹರಿದಾಡಿತು. ಪತ್ರದಲ್ಲಿ ಸಂತೋಷದ ಸುದ್ದಿಯಿದೆಯೆಂದು ಊಹಿಸಿ ಶಾಮರಾಯರು ಕೇಳಿದರು :

“ಏನು, ಶುಭದ ಶುದ್ದಿ ?”

“ಸೊಸೆಗೆ ಶ್ರೀಮಂತದ ಶಾಸ್ತ್ರ ಗುರುವಾರವಂತೆ. ನಾವೆಲ್ಲರೂ ಬುಧ ವಾರವೇ ಬೆಂಗಳೂರಿಗೆ ಹೊರಡಬೇಕು.”

ನಾಗಮ್ಮನವರ ಹರ್ಷಕ್ಕೆ ಮಿತಿಯಿರಲಿಲ್ಲ. ನಾಲ್ಕು ದಿನಗಳು ಬೇಗ ಸರಿದವು. ಬುಧವಾರ ಅರ್ಧ ಗಂಟೆ ಮುಂಚೆಯೇ ರಂಗರಾಯರು, ನಾಗಮ್ಮ ಮತ್ತು ಪದ್ಮ ಮೂವರೂ ನಿಲ್ದಾಣಕ್ಕೆ ಬಂದರು. ಅವರನ್ನು ಬೀಳ್ಕೊಡಲು ಶಾಮರಾಯರೂ ಹಾಜರಿದ್ದರು.

೬೨

ಈ ಅವಧಿಯಲ್ಲಿ ನಾಣಿಯ ಬಾಳಿನಲ್ಲಿ ಒಂದು ಕ್ರಾಂತಿಯಾಗಿತ್ತು. ಅವನ ಮನೋಭಾವನೆಗಳಲ್ಲಿ ದೊಡ್ಡ ಮಾರ್ಪಾಡಾಯಿತು. ಅವನಲ್ಲಿ ಬೆಳೆದು ಬಲಿತಿದ್ದ ಜೂಜು, ನಾಟಕ, ದೇಶಸಂಚಾರಗಳ ಅಮಲು ಸತ್ಯಜೀವನದ ಅನುಭವಗಳಿಂದ ಇಳಿಯಿತು.

ಈಚಿನ ನಾಟಕಗಳಲ್ಲಿ ನಾಣಿಗೆ ಹೆಚ್ಚು ನಷ್ಟವಾಗಿತ್ತು. ವ್ಯವಸ್ಥಾಪಕ ವರ್ಗದಲ್ಲಿದ್ದ ಅವನ ಸ್ನೇಹಿತರೇ ಅವನಿಗೆ ಮೋಸಮಾಡಿದರು. ಜಾತ್ರೆಗಳಲ್ಲಿ ಅಭಿನಯಿಸಿದ ನಾಟಕಗಳಲ್ಲಿ ಪ್ರೇಕ್ಷಕರು ಹೆಚ್ಚು ಸಂಖ್ಯೆಯಲ್ಲಿಯೇ ನೆರೆದಿರುತ್ತಿದ್ದರು. ಆದರೂ ಆದಾಯ ವೆಚ್ಚಕ್ಕಿಂತ ಕಡಿಮೆಯೇ ಇರುತ್ತಿತ್ತು. ನಾಣಿ ಆದಾಯ–ವೆಚ್ಚಗಳನ್ನು ಮುಟ್ಟಗೊಳಿಸಲು ಸಾಲವನ್ನು ಮಾಡಬೇಕಾಗುತ್ತಿತ್ತು.

ಈಚೆಗೆ ತನ್ನ ಗೆಳೆಯರಲ್ಲಿಯೇ ಏನೋ ಒಳಸಂಚು ನಡೆಯುತ್ತಿರುವ ಸೂಚನೆ ನಾಣಿಗೆ ಕಂಡುಬಂದಿತು. ಟಿಕೆಟ್ಟುಗಳ ಮಾರಾಟದ ಕೆಲಸವನ್ನು ವಾಸು ಮತ್ತು ಭಾಸ್ಕರ ಇಬ್ಬರೂ ನಿರ್ವಹಿಸುತ್ತಿದ್ದರು. ಆ ಸಮಯದಲ್ಲಿ ನಾಣಿ ರಂಗದ ವ್ಯವಸ್ಥೆಯಲ್ಲಿ ತೊಡಗಬೇಕಾಗುತ್ತಿತ್ತು. ಹಣ ಎಷ್ಟು ಕೂಡಿತೆಂಬುದನ್ನು ಅವನು ತಿಳಿಯುತ್ತಿದ್ದುದು ನಾಟಕ ಮುಕ್ತಾಯವಾದನಂತರ, ಹಣವನ್ನು ಎಣಿಕೆಮಾಡಿದಾಗ. ಒಬ್ಬೊಬ್ಬ ಮಿತ್ರನಲ್ಲಿಯೂ ಬೇರೆಯವನ ನಡತೆಯಲ್ಲಿ ಸಂಶಯ ಬಲಿಯುತ್ತಿತ್ತು.

ಎರಡು ವಾರದ ಹಿಂದೆ ನಡೆದ ಚಳ್ಳಕೆರೆ ಜಾತ್ರೆಯಲ್ಲಿ ಕೆಲ ಮಂದಿಯ ಮಿತ್ರದ್ರೋಹ ಪೂರ್ತಿಯಾಗಿ ಬಯಲಾಯಿತು. ಜಾತ್ರೆಯಲ್ಲಿ ‘ಶಾಕುಂತಲ’

ನಾಟಕವನ್ನು ಅಭಿನಯಿಸಿದ್ದರು. ನಾಟಕ ಜನರನ್ನು ಬಹಳ ಆಕರ್ಷಿಸಿತ್ತು. ನಾಟಕರಂಗವನ್ನು ಉತ್ತಮವಾಗಿ ಸಜ್ಜುಗೊಳಿಸುವುದಕ್ಕೂ ಪ್ರಚಾರಕಾರ್ಯಕ್ಕೂ ನಾಣಿ ಹೆಚ್ಚು ಹಣವನ್ನು ಖರ್ಚುಮಾಡಿದ್ದ. ಹಣ ಎಷ್ಟು ಕೂಡಬಹುದೆಂಬ ವಿಚಾರದಲ್ಲಿ ಅವನಿಗೆ ಬಹಳ ಕಾತರವಿತ್ತು. ಆ ನಾಟಕದ ಉತ್ಪನ್ನದಿಂದ ಹಿಂದಿನ ನಾಟಕಗಳಲ್ಲಿ ತಾನು ಮಾಡಿದ್ದ ಇನ್ನೂರು ರೂಪಾಯಿಗಳ ಸಾಲವನ್ನು ತೀರಿಸುವುದಲ್ಲದೆ ನಾಟಕಮಂಡಲಿಗೆ ಅಷ್ಟು ನಿಧಿಯನ್ನೂ ಕೂಡಿಸಬೇಕೆಂದು ಅವನ ಆಸೆಯಾಗಿತ್ತು.

ನಾಟಕಮಂದಿರ ಆಟಕ್ಕೆ ಅರ್ಧಗಂಟೆ ಮುಂಚಿತವಾಗಿಯೇ ಪ್ರೇಕ್ಷಕರಿಂದ ಕಿಕ್ಕಿರಿಯಿತು. ದ್ವಾರದ ಒಂದು ಪಕ್ಕದಲ್ಲಿ ವಾಸು ಗಂಡಸರಿಗೆ ಟಿಕೆಟ್ಟುಗಳನ್ನು ಹಂಚುತ್ತಿದ್ದ. ನಾಣಿ ಆ ಸಮಯಕ್ಕೆ ಬಂದು ಶೇಖರವಾಗಿದ್ದ ಹಣವನ್ನು ಗಮನಿಸಿದ. ವಾಸುವಿನ ಮುಂದಿದ್ದ ಖಜಾನೆ ತುಂಬಿತ್ತು. ಅದರಲ್ಲಿ ಹತ್ತು, ಐದು ರೂಪಾಯಿ ನೋಟುಗಳೇ ಮೊತ್ತದಲ್ಲಿ ನೂರೈವತ್ತು ರೂಪಾಯಿಗಳವರೆಗೆ ಇರಬಹುದೆಂದು ಅವನು ಲೆಕ್ಕಹಾಕಿಕೊಂಡ. ಭಾಸ್ಕರನ ಖಜಾನೆ ಅರ್ಧ ತುಂಬಿದ್ದಿತು. ನಾಣಿ ಹಿಗ್ಗುಹೃದಯದಿಂದ ರಂಗದ ಕಡೆಗೆ ಹೊರಟುಹೋದ.

ಸ್ವಲ್ಪ ಹೊತ್ತಿನಲ್ಲಿ ಗಂಡಸರೂ ಭಾಸ್ಕರನ ಕಡೆಗೇ ಟಿಕೆಟ್ಟಿಗಾಗಿ ನುಗ್ಗಿ ಬಂದರು. ಬೇರೆ ಪಕ್ಕದಲ್ಲಿ ಟಿಕೆಟ್ಟನ್ನು ಮಾರುತ್ತಿದ್ದ ವಾಸು ಅಲ್ಲಿರಲಿಲ್ಲ. ಗಂಡಸರಿಗಾಗಿ ಏರ್ಪಡಿಸಿದ ಸೀಟುಗಳು ತುಂಬಿರಬಹುದೆಂದು ಅವನು ಸಂದೇಹಪಟ್ಟ. ಆದರೂ ತನಗೆ ಒಂದು ಮಾತನ್ನೂ ತಿಳಿಸದೆ ವಾಸು ಹೊರಟು ಹೋದುದು ಅವನಿಗೆ ತಪ್ಪಾಗಿ ಕಂಡಿತು. ನಾಣಿಗೆ ವಿಚಾರವನ್ನು ಹೇಳಿಕಳು ಹಿಸಿದ. ಗಂಡಸರಿಗಾಗಿ ಇನ್ನೂ ಕೆಲವು ಸೀಟುಗಳು ಉಳಿದಿದ್ದವು. ನಾಣಿಗೂ ತಿಳಿಸದೆ ವಾಸು ಹಣದೊಂದಿಗೆ ಹೊರಟುಹೋಗಿದ್ದ. ನಾಣಿಯ ಎದೆ ತಕ್ಷಣ ಕುಸಿದುಹೋಯಿತು. ಅವನೇ ಮತ್ತೊಂದು ಕಡೆಯಲ್ಲಿ ಟಿಕೆಟ್ಟನ್ನು ಹಂಚಿ ದೊಂಬಿಯನ್ನು ತಪ್ಪಿಸಬೇಕಾಯಿತು. ಆಟಕ್ಕೆ ಇನ್ನೂ ಹತ್ತು ನಿಮಿಷ ಉಳಿದಿರುವಂತೆಯೇ ಸಭಾಂಗಣ ಪ್ರೇಕ್ಷಕರಿಂದ ತುಂಬಿಹೋಯಿತು. ಟಿಕೆಟ್ಟಿನ ಮಾರಾಟವನ್ನು ನಿಲ್ಲಿಸಲಾಯಿತು. ನಾಣಿ ಭಾಸ್ಕರನ ಖಜಾನೆಯನ್ನು ತೆಗೆದು ಕೊಂಡು ಒಳಕೋಣೆಗೆ ಹೋದ. ಅದರಿಂದ ಭಾಸ್ಕರನಿಗೆ ಬಹಳ ಅಸಮಾಧಾನ ವಾಯಿತು. ಒಳಗೆ ವಿಚಾರಿಸಿದಾಗ ಮತ್ತಿಬ್ಬರು ಟಿಕೆಟ್ ಕಲೆಕ್ಟರುಗಳು

ಪತ್ತೆಯಿಲ್ಲವೆಂದು ತಿಳಿದುಬಂದಿತು. ಅವರು ಹೆಚ್ಚು ಬೆಲೆಬಾಳುವ ಎರಡು ಸೀರೆಗಳನ್ನು ಕದ್ದುಕೊಂಡು ಕಾಲುಕಿತ್ತಿದ್ದರು. ನಾಣಿಗೆ ನಡೆದಿದ್ದ ಪಿತೂರಿಯ ಕತೆ ಪೂರ್ತಿಯಾಗಿ ಅರ್ಥವಾಯಿತು.

ಆ ದಿನ ನಾಟಕ ಸ್ವಲ್ಪ ಹೊತ್ತಾಗಿ ಆರಂಭವಾದರೂ ಬಹಳ ಯಶಸ್ವಿಯಾಗಿ ನಡೆಯಿತು. ಅದೇ ಆ ನಾಟಕಮಂಡಲಿಯ ಕೊನೆಯ ನಾಟಕ. ಬಹಳ ಬಾರಿ ಪ್ರೇಕ್ಷಕರಿಂದ ಕರತಾಡನವಾಯಿತು. ನಾಟಕ ಮುಕ್ತಾಯವಾದಾಗ ರಂಗದ ಹಿಂದೆ ಮೂವರು ಮಂಡಲಿಯ ಗೆಳೆಯರು ಹೊಡೆದಾಡುತ್ತಿದ್ದರು. ಅವರಲ್ಲೊಬ್ಬ ರಂಗಕ್ಕೆ ಬೆಂಕಿ ಹಚ್ಚಲು ಕಡ್ಡಿಗೀರಿದ. ಮತ್ತೊಬ್ಬ ಅಷ್ಟರಲ್ಲಿಯೇ ಅವನನ್ನು ತಿವಿಯಲು ಚಾಕು ಬಿಚ್ಚಿದ. ಆ ಹೊತ್ತಿಗೆ ನಾಣಿ ಅಲ್ಲಿಗೆ ಹೋದ. ಅವರಿಬ್ಬರೂ ನಾಣಿಯ ಮೇಲೆ ಕಿಡಿಕಿಡಿಯಾದರು. ಕೂಡಲೆ ಹಣವನ್ನು ಎಣಿಸುವಂತೆ ಅವನನ್ನು ಕೇಳಿದರು. ನಾಣಿಗೆ ಗಾಬರಿಯಾಯಿತು. ಹಣವನ್ನು ಎಣಿಸಿದರು. ಇನ್ನೂರೈವತ್ತು ರೂಪಾಯಿ ಸ್ವಲ್ಪ ಚಿಲ್ಲರೆ ಇತ್ತು. ಖರ್ಚೇ ಇನ್ನೂರೈವತ್ತು ರೂಪಾಯಿಗೆ ಮೀರಿತ್ತು. ನಾಣಿಗೆ ರೋಷವುಂಟಾಯಿತು. ಅವನು ಭಾಸ್ಕರನನ್ನು ಜರಿದು ಮಾತನಾಡಿದ. ಭಾಸ್ಕರ ನಾಣಿಯಲ್ಲಿಯೇ ಇತರರಿಗೆ ಸಂದೇಹ ಉಂಟಾಗುವಂತೆ ಮಾತನಾಡಿದ. ಅಲ್ಲದೆ ಸುಮಾರು ಮುನ್ನೂರು ರೂಪಾಯಿಗೆ ಕಡಿಮೆಯಿಲ್ಲದೆ ವಾಸು ಅಪಹರಿಸಿರಬಹುದೆಂದು ಅವನೇ ಊಹಿಸಿ ಹೇಳಿದ. ಹಿಂದಿನ ಇನ್ನೂ ಹಲವು ಪ್ರಸಂಗಗಳಲ್ಲಿ ವಾಸು ಮಾಡಿದ್ದ ಮೋಸವನ್ನೂ ಬಯಲುಮಾಡಿದ. ಅಂತಹ ಒಂದೊಂದು ಪ್ರಸಂಗದಲ್ಲಿಯೂ ಭಾಸ್ಕರನು ಅವನಿಗೆ ಸಹಕಾರಿಯಾಗಿದ್ದನೆಂದು ಇತರರು ಸುಲಭವಾಗಿ ತರ್ಕಿಸಿದರು. ಖರ್ಚನ್ನೂ ಮತ್ತು ಕಳವಿನಿಂದುಂಟಾದ ನಷ್ಟವನ್ನೂ ಹೇಗೆ ತೀರಿಸುವುದೆಂದು ನಾಣಿ ಗೆಳೆಯರನ್ನು ಕೇಳಿದ. ಅವರು ಒಬ್ಬರನ್ನೊಬ್ಬರು ಮೂದಲಿಸಿದರು. ಒಬ್ಬರೂ ಒಂದು ಬಿಡಿಕಾಸನ್ನೂ ಕೊಡಲು ಮುಂದೆ ಬರಲಿಲ್ಲ. ಅಂದು ಶೇಖರವಾದ ಹಣವನ್ನು ಎಲ್ಲರಿಗೂ ಸಮವಾಗಿ ಹಂಚಿಬಿಡುವಂತೆ ನಾಲ್ಕಾರು ಮಂದಿ ಒತ್ತಾಯದಿಂದ ಕೇಳಿದರು. ನಾಣಿ ಖರ್ಚಿನ ವಿಚಾರವನ್ನೂ, ಮಂಡಲಿಗಾಗಿ ತಾನು ಮಾಡಿದ್ದ ಇನ್ನೂರು ರೂಪಾಯಿಯ ಸಾಲದ ವಿಚಾರವನ್ನೂ ಎತ್ತಿದ. ಅವರು ರೂಕ್ಷ ಜನರಂತೆ ವರ್ತಿಸಿದರು. ನಾಣಿಯ ಮೈಮೇಲೆ ಹಾರಿ ಹಣವನ್ನು ಅಪಹರಿಸಿಕೊಂಡು ಎಲ್ಲರಿಗೂ

ಹಂಚಿದರು. ತಾನು ಸಿಟ್ಟಾದರೆ ಪರಿಸ್ಥಿತಿ ಹೊಡೆದಾಟಕ್ಕೆ ಎಡೆಗೊಡಬಹು ದೆಂದು ನಾಣಿ ಸುಮ್ಮನಾದ. ಮಂಡಲಿಯ ಸರ್ವಸ್ವವನ್ನು ಮಾರಿದರೂ ಅವನು ಅಂದಿನ ನಾಟಕಕ್ಕಾಗಿ ಮಾಡಿದ್ದ ಖರ್ಚು ತೀರಲಿಲ್ಲ. ಮತ್ತೆ ಅವನು ನೂರು ರೂಪಾಯಿಯ ಸಾಲವನ್ನು ಮಾಡಲೇಬೇಕಾಯಿತು. ಅಂದಿಗೆ ಅವನ ನಾಟಕದ ಚಟುವಟಿಕೆಗಳು ಮುಕ್ತಾಯವಾದವು.

ತನ್ನ ಅವ್ಯವಸ್ಥಿತ ವ್ಯವಹಾರಗಳಲ್ಲಿ ಸರ್ವತೋಮುಖವಾಗಿ ಸೋತು, ನೊಂದು ನಾಣಿ ಪಶ್ಚಾತ್ತಾಪಪಟ್ಟ. ಆದರೆ ಅವನಿಗೆ ಪಶ್ಚಾತ್ತಾಪ ಹುಟ್ಟಿದುದು ಕಾಲವೆಲ್ಲ ಮಿೀರಿಹೋದಮೇಲೆ. ತನ್ನ ಕೃತಿಗಳಿಗಾಗಿ ಅವನು ಕೇಡನ್ನು ಅನುಭವಿಸಲೇಬೇಕಾಗಿತ್ತು.

ಗೃಹಜೀವನದ ಸುಖವನ್ನು ನಾಣಿ ಈಗ ನೆನೆದ. ಪದ್ಮ ದೇವನಹಳ್ಳಿ ಯನ್ನು ಬಿಟ್ಟುಹೋದಂದಿನಿಂದ ಅವನಿಗೆ ಸ್ವಲ್ಪವೂ ಸುಖವಿರಲಿಲ್ಲ. ನಾಟಕ ಗಳ ಹುಚ್ಚಿನಲ್ಲಿ ಮಾಡಿದ ಸಾಲ ಹೊರೆಯಾಗಿ ಹೆಗಲನ್ನು ಏರಿತ್ತು. ವೆಂಕಮ್ಮ ನವರ ದೇಹಸ್ಥಿತಿಯೂ ಅಸ್ಥಿರವಾಗಿತ್ತು. ಮನೆಯಲ್ಲಿ ಹೊತ್ತಿಗೆ ಸರಿಯಾಗಿ ಊಟವನ್ನು ಕಾಣುವುದೂ ಕಷ್ಟವಾಯಿತು. ಒಂದೊಂದು ದಿನ ಅಡಿಗೆಯನ್ನು ನಾಣಿಯೇ ಮಾಡಬೇಕಾಗುತ್ತಿತ್ತು. ದಿನೇ ದಿನೇ ಅವನಿಗೆ ಬೇಸರ ಹೆಚ್ಚಿತು. ಬೇಸರದಲ್ಲಿ ತಾಯಿಗೂ ಮಗನಿಗೂ ಅಸಮಾಧಾನದ ಮಾತು ಬೆಳೆಯುತ್ತಿತ್ತು. ಪದ್ಮಳು ಹೊರಟುಹೋದಂದಿನಿಂದಲೇ ತನ್ನ ಸುಖವೂ ಹೊರಟುಹೋದಂತೆ ವೆಂಕಮ್ಮನವರಿಗೆ ಭಾವನೆಯಾಯಿತು.

ನಾಣಿ ಗದ್ದೆಯನ್ನು ಸರಿಯಾಗಿ ನೋಡಿಕೊಂಡಿರಲಿಲ್ಲ. ಅದರಿಂದ ಉತ್ಪನ್ನದ ಬಹಳ ಭಾಗವನ್ನು ರೈತರು ನುಂಗಿದರು. ಅನ್ನಕ್ಕೂ ನಾಣಿಗೆ ಕಷ್ಟವಾಯಿತು. ಹಳ್ಳಿಯಲ್ಲಿ ಅವನಿಗೆ ಯಾರ ಸಹಾನುಭೂತಿಯೂ ಇರಲಿಲ್ಲ. ಯಾರೂ ಅವನಿಗೆ ಮರ್ಯಾದೆ ಕೊಡುತ್ತಿರಲಿಲ್ಲ. ಎಲ್ಲರೂ ಅವನನ್ನು ಗೇಲಿ ಮಾಡುತ್ತಿದ್ದರು. ನಾಟಕಮಂದಿರದ ಕೆಲವರು ಅವನಿಗೆ ಶತ್ರುಗಳಾದರು. ಮುಂದೆ ಬಾಳಿನ ದಾರಿ ಯಾವುದೆಂದು ಅವನಿಗೆ ದಿಕ್ಕುತೋರದಾಯಿತು.

ನಾಣಿಯ ಸೋತ ಮನಸ್ಸು ಪದ್ಮಳ ಕಡೆಗೇ ತಿರುಗುವುದು. ಅವಳಿಗೆ ತನ್ನಲ್ಲಿದ್ದ ಪ್ರೇಮವನ್ನು ಈಗ ಅಳತೆ ಹಾಕುವನು. ಅದು ಬೆಟ್ಟದಂತೆ ರಾಶಿಯಾಗಿ ಕಣ್ಣನ್ನು ಮುತ್ತುವುದು. ಅದಕ್ಕೆ ತಾನು ಮಾಡಿದುದೇನೆಂದು

ಚಿಂತಿಸುವನು. ಅವಳನ್ನು ನೂರು ಬಗೆಯಲ್ಲಿ ನೋಯಿಸಿದ ಪ್ರಕರಣಗಳು ನೆನಪಿನಲ್ಲಿ ಸಾಕ್ಷಿಯಾಗುವುವು. ರಂಗರಾಯರಿಂದ ತನಗೆ ಪತ್ರಗಳಿಲ್ಲ. ಆನಂದ ನಿಂದಲೂ ಪತ್ರಗಳಿಲ್ಲ. ಬಹುಶಃ ಇಬ್ಬರೂ ತನ್ನ ಮೇಲೆ ಕೋಪಗೊಂಡಿರ ಬಹುದು. ತನ್ನೊಡನೆ ಪತ್ರವ್ಯವಹಾರವೂ ಅವರಿಗೆ ಅಸಹನೀಯವಾಗಿರಬೇಕು. ಇನ್ನು ಪದ್ಮ ತನಗೆ ಏನೆಂದು ಪತ್ರ ಬರೆಯಬೇಕು! ನಾಣಿಯ ಮನದಲ್ಲಿ ಆಗ ಚಿಂತೆ, ಪಶ್ಚಾತ್ತಾಪ ಎರಡೂ ಒಟ್ಟಿಗೆ ಹುಟ್ಟಿದವು. ಅವನನ್ನೇ ಒಂದು ಪತ್ರ ಹಾಕುವಂತೆ ವೆಂಕಮ್ಮನವರು ಪದೇ ಪದೇ ಕೇಳುತ್ತಿದ್ದರು. ಅವನನ್ನೇ ಹೋಗಿ ಪದ್ಮಳನ್ನು ಕರೆತರಲು ಒತ್ತಾಯಮಾಡುತ್ತಿದ್ದರು. ಆಕೆಯ ಕಣ್ಣಿನಲ್ಲಿಯೂ ಪಶ್ಚಾತ್ತಾಪದ ಕಣ್ಣೀರು. ತಾನೇ ಹೋಗಿ ಕ್ಷಮಾಪಣೆಯನ್ನು ಕೇಳುವುದೇ ಎಂಬ ಯೋಚನೆ ನಾಣಿಗೆ ಮೂಡುತ್ತಿತ್ತು. ಆದರೆ ಅಭಿಮಾನ ಅದಕ್ಕೆ ಅಡ್ಡಿಬರುತ್ತಿತ್ತು. ತನಗೆ ಇನ್ನೆಲ್ಲಿದೆ ಅಭಿಮಾನ, ಎಂದು ತನ್ನ ವಿಚಾರದಲ್ಲಿ ತನಗೇ ತುಚ್ಛ ಭಾವನೆ ಹುಟ್ಟುತ್ತಿತ್ತು. ಆದರೂ ರಂಗರಾಯರಿಂದ ಒಂದು ಕಾಗದವನ್ನು ನಿರೀಕ್ಷಿಸುತ್ತಾ ಕಾಲವನ್ನು ತಳ್ಳುತ್ತಿದ್ದ. ಅವರ ಕೋಪ ಆರುವು ದೆಂಬ ನಂಬಿಕೆ ಅವನಿಗೆ ಆಸೆಯನ್ನು ಕೊಟ್ಟಿತ್ತು. ಪದ್ಮಳಿಗಾಗಿ ಅವನ ತವಕ ದಿನದಿನವೂ ಹೆಚ್ಚುತ್ತಿತ್ತು.

ಒಂದು ಸಂಜೆ ನಾಣಿ ಗದ್ದೆಯಿಂದ ಬರುತ್ತಿದ್ದ. ಊರಿನ ಗೌಡ ಬೇರೆ ದಾರಿಯಿಂದ ಬಂದು ಪ್ರಾಸಂಗಿಕವಾಗಿ ಸಂಧಿಸಿದ. ಗೌಡನಿಗೆ ಮುಖವನ್ನು ತೋರಿಸುವುದಕ್ಕೂ ನಾಣಿಗೆ ಧೈರ್ಯವಿರಲಿಲ್ಲ. ಯಾವ ಮಾತನ್ನೂ ಆಡದೆ ಮನೆದಾರಿ ಹಿಡಿದು ಮುಂದೆ ನಡೆಯಲು ಹೆಜ್ಜೆ ಹಾಕಿದ. ಗೌಡನೇ ಅವನನ್ನು ಮಾತನಾಡಿಸಿದ. ಅವನ ಮಾತು ಬಹಳ ಹರಿತವಾಗಿತ್ತು. ಪದ್ಮಳ ಬಾಳನ್ನು ನಾಣಿ ಕ್ಲೇಶಗೊಳಿಸಿದ ಹಲವು ಚಿತ್ರಗಳನ್ನು ಅವನು ದಾರುಣವಾಗಿ ಬಣ್ಣಿಸಿದ. ನಾಣಿಯ ಮನಸ್ಸನ್ನು ಆ ಮಾತುಗಳು ಗರಗಸದಂತೆ ಕುಯ್ದು ನೋಯಿಸಿ ದವು. ಅವನು ತನ್ನ ಕೃತ್ಯಗಳಿಗಾಗಿ ಬಹಳ ದುಃಖಗೊಂಡ. ಇಡೀ ಊರು ಅವನನ್ನು ಅಪರಾಧಿಯೆಂದು ಹಳಿಯುತ್ತಿದ್ದುದನ್ನು ಅವನು ಸಹಿಸಬೇಕಾಗಿತ್ತು. ಗೌಡನಿಗೆ ಅವನು ಹೇಳಿದ ಮಾತಿನಲ್ಲಿ ನೋವಿನ ದನಿಯಿತ್ತು. ಆದರೆ ಯಾವ ಉತ್ತರವೂ ಇರಲಿಲ್ಲ.

೬೩

ದೇವನಹಳ್ಳಿಯಲ್ಲಿ ತನ್ನ ಬದುಕಿನ ಉಗ್ರ ಚಿತ್ರಗಳನ್ನು ಪದ್ಮ ಒಂದಲ್ಲ ಒಂದು ಸಮಯದಲ್ಲಿ ರಂಗರಾಯರಿಗೆ ಚಿತ್ರಿಸಿದ್ದಳು. ತಂದೆಗೆ ಅದನ್ನೆಲ್ಲ ತೋಡಿಕೊಂಡು ಸ್ವಲ್ಪ ಸಮಾಧಾನವನ್ನು ಕಂಡುಕೊಂಡಿದ್ದಳು. ರಂಗರಾಯರ ಮನಸ್ಸಿನಲ್ಲಿ ನಾಣಿಯ ನಡತೆಗಾಗಿ ಕೋಪ ಆರದೆ ಕಿಡಿಯಾಡುತ್ತಿತ್ತು. ಅಂತಹ ಪರಸ್ಪರ ವೈಷಮ್ಯ ತನ್ನ ಬದುಕನ್ನು ಹೇಗೆ ಮುಂದೆ ನಡೆಸೀತು ಎಂದು ಪದ್ಮಳಿಗೆ ಕಸವಿಸಿಯಾಗುತ್ತಿತ್ತು. ಈಗ ನಾಣಿಯ ಮನಸ್ಸು ಮಾರ್ಪಟ್ಟಿರಬಹುದು ಎಂಬ ಆಶಾಭಾವನೆ ಒಂದು ಕಡೆ ಅಥವಾ ತನ್ನ ಮೇಲೆ ರೋಷ ಮತ್ತೂ ಉಮ್ಮಳಿಸಿ ತನ್ನ ಚಿಂತೆಯನ್ನೇ ಅವನ ಮನದಿಂದ ದೂರಮಾಡಿರಬಹುದು ಎಂಬ ನಿರಾಶಾಭಾವನೆ ಮತ್ತೊಂದು ಕಡೆ ಎರಡು ಭಾವನೆಗಳೂ ಅವಳ ಊಹೆಯನ್ನು ಗಾಳಿಯ ಪಟದಂತೆ ಹಾರಾಡಿಸುತ್ತಿದ್ದವು. ಈ ಹೊಯ್ದಾಟ ದಲ್ಲೂ ತಂದೆ, ತಾಯಿ, ಅಣ್ಣ, ಅತ್ತಿಗೆ ಇವರ ವಿಶ್ವಾಸದ ಆವರಣ ಅವಳಿಗೆ ಸುಖದ ಬೀಡಾಗಿತ್ತು. ಆದರೂ ಅಂತಹ ಸಮಾಧಾನದಲ್ಲಿ ಸ್ಥಿರತೆಯಿರಲಿಲ್ಲ. ಅದು ಕೈಜಾರಿಬಿದ್ದ ಕನ್ನಡಿಯಂತೆ ಒಡೆದು ಒಂದು ಕ್ಷಣದಲ್ಲಿ ನೂರು ಚೂರಾಗು ವುದು. ನಾಣಿ ಯೋಗ್ಯನಾಗಲಿ ಅಯೋಗ್ಯನಾಗಲಿ, ತನ್ನ ಸಮಗ್ರಜೀವನ ನಡೆಯಬೇಕಾದದು ಅವನೊಡನೆ ಎಂಬ ನಿಶ್ಚಯವನ್ನು ಆಗ ಅವಳು ಮನ ಗಾಣುವಳು. ನಾಣಿಗೆ ಒಂದು ಪತ್ರವನ್ನು ಬರೆಯುವಂತೆ ರಂಗರಾಯರನ್ನು ಕೇಳುವಳು. ಅವರು ಅದಕ್ಕೆ ಕಿವಿಗೊಡುವುದಿಲ್ಲ. ನಾಣಿ ತನ್ನ ನಡತೆಯನ್ನು ತಿದ್ದಿಕೊಳ್ಳುವವರೆಗೂ ಮಗಳನ್ನು ಅವರ ಮನೆಗೆ ಕಳಿಸುವುದಿಲ್ಲ ಎನ್ನುವರು. ಪದ್ಮ ಸುಮ್ಮನಿದ್ದುಬಿಡುವಳು.

ಒಂದು ಮಧ್ಯಾಹ್ನ ನಾಣಿಗೂ ವೆಂಕಮ್ಮನವರಿಗೂ ಬಿಸಿಮಾತು ನಡೆಯು ತ್ತಿತ್ತು. ಇಬ್ಬರ ಬೇಸರವೂ ಬೆಟ್ಟದಷ್ಟು ಭಾರವಾಗಿತ್ತು. ತನ್ನ ಮತ್ತು ಪದ್ಮಳ ಬದುಕು ಹಾಳಾದುದಕ್ಕೆ ವೆಂಕಮ್ಮನವರೇ ಕಾರಣರೆಂದು ನಾಣಿ ನುಡಿದ. ಆ ಮಾತು ಅವರ ಹೃದಯವನ್ನು ತಿವಿಯಿತು. ಆಕೆ ಕಣ್ಣೀರಿಡುತ್ತಿದ್ದರು. ಊಟವೂ ಬೇಡವೆಂದು ನಾಣಿ ಹಾರಾಡುತ್ತಿದ್ದ. ಆ ಸಮಯಕ್ಕೆ ಅಂಚೆಯ ವನು ಒಂದು ಪತ್ರವನ್ನು ತಂದು ನಾಣಿಯ ಕೈಲಿರಿಸಿದ. ತನ್ನ ನಾಟಕ ಮಂಡಲಿಗೆ ತಿಲಾಪರ್ಣ ಮಾಡಿದಂದಿನಿಂದ ನಾಣಿಗೆ ಯಾವ ಅಂಚೆಯೂ

ಬಂದಿರಲಿಲ್ಲ. ಪತ್ರವನ್ನು ಒಡೆದು ನೋಡಿದ. ಬೆಂಗಳೂರಿನಿಂದ ಬಂದಿದ್ದಿತು. ಆನಂದ ಬರೆದಿದ್ದ. ನಾಣಿಯ ಹೃದಯವನ್ನು ಆಸೆ ಮುಸುಕಿತು. ಪತ್ರವನ್ನು ಓದಿಕೊಂಡ :

ನಾಣಿ,

ಈ ಪತ್ರವನ್ನು ನಾನು ನೊಂದ ಮನಸ್ಸಿನಿಂದ ಬರೆದಿದ್ದೇನೆ. ನಮ್ಮೆಲ್ಲರನ್ನೂ ನೀನು ಪೂರ್ತಿಯಾಗಿ ಮರೆತಿರಬಹುದು. ಹಾಗಿಲ್ಲ ದಿದ್ದರೆ ನೀನು ನಮಗೆ ಒಂದು ಪತ್ರವನ್ನಾದರೂ ಬರೆಯುತ್ತಿದ್ದೆ. ಐದು ತಿಂಗಳು ಜಾರಿಹೋದರೂ ದೇವನಹಳ್ಳಿಯಿಂದ ನಮಗೆ ಯಾವ ಸುದ್ದಿಯೂ ದೊರೆತಿಲ್ಲ. ನೀನು ಸುಖವಾಗಿದ್ದೀಯೆಂದೇ ನಮ್ಮ ಆಶಯ. ಈ ಐದು ತಿಂಗಳಲ್ಲಿ ಪದ್ಮ ನಿನ್ನ ಹಂಬಲದಲ್ಲಿ ಬೆಂದುಹೋಗಿದ್ದಾಳೆ. ಅವಳನ್ನೂ ನೀನು ಮರೆತುಬಿಟ್ಟೆಯಾ ? ಅಪ್ಪ ಅವಳ ವಿಚಾರವಾಗಿ ಏನೇನೋ ನಿರ್ಧಾರವನ್ನು ಮಾಡುತ್ತಿದ್ದಾನೆ. ಮಗಳ ಬದುಕು ಕೆಟ್ಟರೆ ಹೆತ್ತ ಹೊಟ್ಟೆಗಾಗುವ ದುಃಖ ಎಷ್ಟೆಂಬುದನ್ನು ನಿನ್ನ ಊಹೆಯು ತಿಳಿಯಲಾರದು. ನಿನಗೆ ನೀತಿಬೋಧೆಮಾಡುವ ಯೋಗ್ಯತೆ ನನಗಿಲ್ಲ. ದಯವಿಟ್ಟು ತಪ್ಪುತಿಳಿಯಬಾರದು.

ಪದ್ಮ ಈಗ ಆರೋಗ್ಯವಾಗಿದ್ದಾಳೆ. ಅವಳಿಗೆ ಇಲ್ಲಿ ಎಲ್ಲ ಸುಖ ಗಳೂ ಇವೆ. ಆದರೆ ಅವಳ ಪಾಲಿಗೆ ಅವೆಲ್ಲ ಶೂನ್ಯ. ಪದ್ಮ ನಿರಪರಾಧಿ ಯಲ್ಲವೆ ? ಅವಳ ಮೇಲೆ ಏಕೆ ಇಷ್ಟೊಂದು ನಿಷ್ಕರುಣೆ ? ಈಗಲಾದರೂ ನಮಗೆ ಕ್ಷಮಾಭಿಕ್ಷೆಯನ್ನು ನೀಡುವೆಯಾ ?

ಮತ್ತೊಂದು ವಿಚಾರ. ಬೆಂಗಳೂರಿನಲ್ಲಿ ನನ್ನ ಸ್ವಂತ ಮನೆಯಲ್ಲಿ ಗುರುವಾರ ಒಂದು ಶುಭಕಾರ್ಯವನ್ನು ಏರ್ಪಡಿಸಲಾಗಿದೆ. ಅದಕ್ಕೆ ನಿನಗೆ ಹೃತ್ಪೂರ್ವಕವಾದ ಆಹ್ವಾನ. ಅಪ್ಪ, ಅಮ್ಮ ಮತ್ತು ಪದ್ಮ ಎಲ್ಲರೂ ಆ ಸಂದರ್ಭಕ್ಕೆ ಬಂದಿರುತ್ತಾರೆ. ನೀನೂ ಬರಬೇಕೆಂದು ನಮ್ಮ ಆಸೆ. ಕಾರ್ಯ ಮುಗಿದನಂತರ ಪದ್ಮಳನ್ನು ನೀನು ಕರೆದುಕೊಂಡು ಹೋಗುವುದಾದರೆ ಸಂತೋಷವಾಗಿ ಕಳುಹಿಸಿಕೊಡುತ್ತೇವೆ.

ವಿಶ್ವಾಸವಿರಲಿ,
**ಆನಂದ**

ಆ ಕಾಗದವನ್ನು ಓದಿ ಮುಗಿಸುವ ಹೊತ್ತಿಗೆ ನಾಣಿಯ ಕಣ್ಣಿನಲ್ಲಿ ನೀರೂರಿತು. ಎದೆಯಲ್ಲಿ ಹೊಸ ಆಸೆ ಅಂಕುರಿಸಿತು. ವೆಂಕಮ್ಮನವರು ಕಾಗದದ ಸಾರಾಂಶವನ್ನು ಕೇಳಿ ದುಃಖ, ಸಂತೋಷಗಳಿಂದ ಬಿಕ್ಕಿದರು. ದುಃಖ ತಕ್ಷಣ ತೇಲಿಹೋಗಿ ಮುಖದಲ್ಲಿ ಸಂತೋಷದ ಬುಗ್ಗೆಯುಕ್ಕಿತು. ಮತ್ತೆ ಪದ್ಮ ತಮ್ಮ ಮನೆಯನ್ನು ಸೇರುವ ದಿನವನ್ನು ಕನಸು ಕಂಡರು. ಇನ್ನುಮುಂದೆ ತಮ್ಮ ಜೀವವನ್ನಾದರೂ ತೆಯ್ದು ಅವಳಿಗೆ ಸುಖವನ್ನೆರೆಯಲು ಮನಸ್ಸು ಮಾಡಿಕೊಂಡರು.

ಗುರುವಾರ ಬೆಳಗಿನ ಗಾಡಿಗೆ ಬೆಂಗಳೂರಿಗೆ ಹೊರಡುವುದೆಂದು ನಾಣಿ ನಿಶ್ಚಯಿಸಿದ. ಆ ದಿನವನ್ನೇ ತಾಳ್ಮೆಯಿಲ್ಲದೆ ಅವನು ಎದುರುನೋಡುತ್ತಿದ್ದ. ಮೂರು ದಿನಗಳು ಅವನಿಗೆ ಬಹಳ ಉದ್ದವಾಗಿ ಕಂಡಿತು.

೬೪

ಗುರುವಾರ. ಆನಂದನ ಮನೆಯಲ್ಲಿ ಸಡಗರ. ಆಪ್ತಬಂಧುವರ್ಗವೆಲ್ಲ ನೆರೆದಿದೆ. ಹಾಸ್ಯ, ವಿನೋದಗಳಲ್ಲಿ ಎಲ್ಲರೂ ಹರ್ಷದಿಂದ ಭಾಗಿಗಳಾಗಿದ್ದಾರೆ.

ಸಂಜೆ ಹೆಂಗಸರ ಕಾರ್ಯಕ್ರಮ. ಕಮಲಮ್ಮನವರ ಉತ್ಸಾಹ ಆ ದಿನ ನೂರ್ಮಡಿಯಾಗಿದೆ. ಓಡಾಟವೆಲ್ಲ ಅವರದೆ. ಅವರ ಜೊತೆಗೆ ಪದ್ಮ, ನಾಗಮ್ಮನವರು ಒಂದು ಕಡೆ ಕುಳಿತುಕೊಂಡು ಆನಂದದಿಂದ ದೃಶ್ಯಗಳನ್ನು ನೋಡುತ್ತಿದ್ದಾರೆ. ಅವರಿಗೆ ತಾವೂ ಹಕ್ಕಿಯಂತೆ ಆಗ ಹಾರಾಡಬೇಕೆನಿಸುತ್ತದೆ. ಆದರೆ ಕೈಕಾಲುಗಳಲ್ಲಿ ಶಕ್ತಿಯಿಲ್ಲ.

ಸರೋಜ ಹೊಸ ಕಾಂತಿಯನ್ನು ಹೊರಹೊಮ್ಮಿಸುತ್ತಿದ್ದಾಳೆ. ಪ್ರಕಾಶಮಾನವಾದ ವಿದ್ಯುದ್ದೀಪದ ಬೆಳಕಿನಲ್ಲಿ ಅವಳ ಉಡುಪು ಕೋರೈಸುತ್ತಿದೆ. ಆರತಿ ವಿಜೃಂಭಣೆಯಿಂದ ನಡೆಯಿತು. ಬಾಗಿನಗಳನ್ನು ಹಂಚಿದರು.

ಅಲ್ಲಿ ನೆರೆದಿದ್ದವರಲ್ಲಿ ಒಬ್ಬ ಜೀವಿಗೆ ಉಳಿದವರೆಲ್ಲರಿಗಿಂತ ಒಂದು ಪಾಲಿನ ಹೆಚ್ಚು ಸಂತೋಷವಾಗಿತ್ತು. ಅವಳು ಪದ್ಮ. ಅವಳ ಆನಂದಕ್ಕೆ ಎಣೆಯಿರಲಿಲ್ಲ. ನಾಣಿಯೂ ಆ ಸಂತೋಷಕೂಟಕ್ಕೆ ಬಂದಿದ್ದುದೇ ಅವಳ ಅಷ್ಟು ಸಂತೋಷಕ್ಕೆ ಕಾರಣ. ಉತ್ತಮವಾದ ಉಡುಪಿನಿಂದ ಪದ್ಮಳ ಚೆಲುವು ಪುಟಗೊಂಡಿತ್ತು. ಅವಳ ಹೊಸ ರೂಪವನ್ನು ಕಂಡು ನಾಣಿ ಬೆರಗಾಗಿದ್ದ.

ಅವಳ ಮೇಲೆ ತನ್ನ ದೀನದೃಷ್ಟಿಯನ್ನು ಹಲವು ಬಾರಿ ಬೀರಿದ. ಅವನ ನೋಟದಲ್ಲಿ ಪದ್ಮ ತನ್ನ ಹಿಂದಿನ ಕತೆಯನ್ನು ಮರೆತುಬಿಟ್ಟಳು. ಅಲ್ಲದೆ ತನ್ನ ಕನಸಿನ ಮನೆಯಲ್ಲಿ ಅಂತಹದೇ ಒಂದು ಉತ್ಸವವನ್ನು ಕಂಡಳು. ಅಲ್ಲಿ ತಾನು ಮತ್ತು ನಾಣಿ ಉತ್ಸವಮೂರ್ತಿಗಳಂತೆ ಕಂಗೊಳಿಸಿದರು.

ಕಾರ್ಯಕ್ರಮ ಮುಗಿಯಿತು. ರಾತ್ರಿ ರುಚಿಯೂಟವಾಯಿತು.

ರಾತ್ರಿ ಏಕಾಂತದಲ್ಲಿ ನಾಣಿ ಪದ್ಮಳನ್ನು ಮಾತನಾಡಿಸಿದ. ಮಾತಿನಲ್ಲಿ ಸಂಕೋಚ ಮೂಡುತ್ತಿತ್ತು. ಪದ್ಮ ಮಾತನಾಡದೆ ಸ್ವಲ್ಪ ಹೊತ್ತು ಸುಮ್ಮನೆ ಉಬ್ಬಿದ ಕತ್ತಿನಿಂದ ಬಿಕ್ಕಿದಳು. ನಾಣಿಯ ಕರುಳು ಮರುಕದಿಂದ ಕಂಪಿಸಿತು. ಮಾತನಾಡಲು ಅವನ ಧೈರ್ಯವೇ ಕುಸಿದುಹೋಯಿತು.

"ನಾನು ಬಹಳ ತಪ್ಪಿತಸ್ಥ, ಪದ್ಮ. ಅಕ್ಷಮ್ಯ ಅಪರಾಧವನ್ನು ಮಾಡಿದ್ದೇನೆ."

"........ನನ್ನ ದುರದೃಷ್ಟ ಹಾಗಿದ್ದರೆ ಯಾರೇನು ಮಾಡುತ್ತಾರೆ?"

"ದುರದೃಷ್ಟ ನನ್ನದು, ಪದ್ಮ. ನೀನು ನಮ್ಮ ಮನೆಯನ್ನು ಬಿಟ್ಟ ಗಳಿಗೆಯಿಂದಲೇ ದುರದೃಷ್ಟ ನನ್ನ ಬೆನ್ನುಹತ್ತಿತು."

"ಈ ಜೀವ ಎಷ್ಟು ನೊಂದಿದೆ, ನಿಮಗೆ ಗೊತ್ತೆ?"

ಪದ್ಮಳ ಕಣ್ಣಂಚಿನಿಂದ ಕಂಬನಿಯುರುಳಿತು. ಕರವಸ್ತ್ರದಿಂದ ನಾಣಿ ಕಣ್ಣನ್ನೊರಸಿದ. ನ್ಯಾಯಸ್ಥಾನದಲ್ಲಿ ನಿಲ್ಲುವ ಅಪರಾಧಿಯಂತೆ ಸ್ವಲ್ಪ ಹೊತ್ತು ಸುಮ್ಮನೆ ನಿಂತ.

"ನಿನ್ನ ತಾಳ್ಮೆ ಹಿಮಾಲಯದಷ್ಟು ದೊಡ್ಡದು, ಪದ್ಮ."

"ಅದೊಂದಿಲ್ಲದಿದ್ದರೆ ನಾನು ಎಂದೋ ನೀರುಪಾಲಾಗುತ್ತಿದ್ದೆ."

"ಅಂತಹ ಮಾತನ್ನಾಡಬೇಡ, ಪದ್ಮ. ನನ್ನ ನೊಂದ ಹೃದಯ ಬಿರಿದು ಹೋಗುತ್ತದೆ."

"ನನ್ನಲ್ಲಿ ನಿಮಗೆ ನಿಜವಾಗಿ ಅಷ್ಟೊಂದು ಮರುಕವೆ?"

"ಈ ಪಾಪಿಯನ್ನು ನೀನು ಕ್ಷಮಿಸುವುದಿಲ್ಲವೆ?"

ಪದ್ಮಳ ಹೃದಯ ಆವೇಗಗೊಂಡಿತು. ಕ್ಷಣದಲ್ಲಿ ಪುಲಕಿತವಾಯಿತು. ಅಗ್ನಿಸಾಕ್ಷಿಯಾಗಿ ಮದುವೆಯಾದ ತನ್ನ ಪತಿ, ನಾಣಿ. ಅವನಿಗಾಗಿ ತನ್ನ ಕರುಳು ಐದು ತಿಂಗಳಿಂದ ಎಷ್ಟು ಮೊರೆಯುತ್ತಿತ್ತು! ಅವನೇ ಈಗ ತನ್ನ

ತಪ್ಪನ್ನೊಪ್ಪಿಕೊಂಡು ಬಂದಿದ್ದ. ಪದ್ಮಳಿಗೂ ಹೊಸ ಜೀವ ಬಂದಂತಾಗಿತ್ತು. ಅವಳ ತುಟಿ ಅಲುಗುತ್ತಿತ್ತು.

"ನಾನು ಯಾವಾಗಲೂ ನಿಮ್ಮ ದಾಸಿ" ಎಂದಳು ಪದ್ಮ.

"ಪದ್ಮ, ಇನ್ನು ನಮ್ಮದು ಹೊಸ ಬಾಳು" ಎಂದು ಅವಳ ಕೈಯನ್ನು ಬಿಗಿಯಾಗಿ ಹಿಡಿದ.

೩೫

ಬೆಳಗ್ಗೆ ರಂಗರಾಯರೂ ನಾಣಿಯೂ ಕೊಟಡಿಯಲ್ಲಿ ಕುಳಿತಿದ್ದರು. ರಂಗರಾಯರು ಹಸನ್ಮುಖಿಗಳಾಗಿದ್ದರು. ಒಂದೇ ದಿನದಲ್ಲಿ ಅವರಿಗೆ ಹತ್ತು ವರ್ಷಗಳ ವಯಸ್ಸು ಕಡಿಮೆಯಾದಂತೆ ಕಾಣುತ್ತಿತ್ತು. ನಾಣಿಯೊಡನೆ ಅವರು ಆಡಿದ ಮಾತುಗಳು ಕರುಣಾಜನಕವಾಗಿದ್ದವು.

"ನೀನು ಬಂದದ್ದು ಬಹಳ ಸಂತೋಷ, ನಾಣಿ."

"ನಿಮ್ಮನ್ನು ಸಂತೋಷಗೊಳಿಸುವುದಕ್ಕಿಂತ ಹೆಚ್ಚಿನದೇನಿದೆ ನನಗೆ?"

ಆ ಮಾತು ಅವನಿಗೆ ಕಪಟವೆಂದೆನಿಸಿತು, ಭೂತಕಾಲದ ದೃಷ್ಟಿಯಿಂದ. ನಾಣಿ ಕೆಳದನಿಯಲ್ಲಿ ಮಾತನಾಡಿದ. ರಂಗರಾಯರ ಮನಸ್ಸು ಪರಿಣಾಮ ಗೊಂಡಿತು, ಅವನ ನಯವಾದ ನುಡಿಯಿಂದ.

"ನಾನು ಬಹಳ ನೊಂದವನು, ನಾಣಿ."

ಆ ನೋವಿಗೆ ತಾನೇ ಕಾರಣನೆಂದೆನಿಸಿತು ನಾಣಿಗೆ. ತಾನೇ ಮೊದಲು ಮಾತನಾಡುವುದು ಉತ್ತಮವೆಂದು ತಿಳಿದ.

"ನನ್ನದೊಂದು ಪ್ರಾರ್ಥನೆ."

"ಏನು ಪ್ರಾರ್ಥನೆ?"

"ನಾವು ಹಿಂದಿನ ಕತೆಯನ್ನೆಲ್ಲ ಮರೆತುಬಿಡೋಣ. ನಾನು ಬಹಳ ತಪ್ಪು ಮಾಡಿದ್ದೇನೆ. ಪಶ್ಚಾತ್ತಾಪವೂ ಉಂಟಾಗಿದೆ."

ರಂಗರಾಯರ ಹೃದಯದಲ್ಲಿ ತೃಪ್ತಿ ತುಂಬಿ ತುಳುಕಾಡಿತು.

"ಕಳೆದುಹೋದದ್ದನ್ನು ಕಟ್ಟಿಕೊಂಡರೆ ಪ್ರಯೋಜನ ಏನು? ಅದರಿಂದ ಮುಂದಿನ ಸುಖಕ್ಕೂ ಅಡ್ಡಿ. ಮಕ್ಕಳ ಸುಖಕ್ಕೋಸ್ಕರ ನಾನು ಬಾಳನ್ನೇ ತೇಯ್ದೆ. ಈ ಬಾಳಸಂಜೆಯಲ್ಲಿ ನನ್ನ ಪಾಲಿಗೆ ಇನ್ನು ಒಂದೇ ಆಸೆ ಉಳಿದಿದೆ,

ಪದ್ಮ ನಿನ್ನೊಡನೆ ಸುಖವಾಗಿ ಬಾಳಬೇಕು. ಅವಳು ದೇವನಹಳ್ಳಿಯಲ್ಲಿ ಯಾವ ಸುಖವನ್ನೂ ಕಾಣಳು, ಬಡತನದಲ್ಲಿಯೇ ಬೆಳೆಯಬೇಕಾಯಿತು. ಮದುವೆಯಾದನಂತರ ಅವಳ ಸುಖದ ದಿನಗಳು ಬರಬಹುದೆಂದು ಆಸೆ ಕಟ್ಟಿಕೊಂಡೆ. ಹೆಣ್ಣುಮಕ್ಕಳಿಗೆ ಎಷ್ಟು ಆಸೆಗಳಿರುತ್ತವೆ, ನಿನಗೆ ಗೊತ್ತೆ? ಅವರು ಎಷ್ಟೋ ಕನಸುಗಳನ್ನು ಕಟ್ಟಿಕೊಳ್ಳುತ್ತಾರೆ. ಪದ್ಮಳ ಪಾಲಿಗೆ ಈವರೆಗೆ ಬಂದಿರುವುದೇನು? ಅವಳ ಬದುಕು ಕಣ್ಣೀರಿನ ಬದುಕೇ ಆಯಿತು. ಮುಪ್ಪಿನಲ್ಲಿಯಾದರೂ ನನಗೆ ಮನಶ್ಶಾಂತಿ ಬೇಡವೆ? ಪದ್ಮಳ ಪೂರ್ತಿ ಹೊಣೆಗಾರಿಕೆ ನಿನ್ನದಲ್ಲವೆ? ಅದಕ್ಕೆ ಅಗ್ನಿಸಾಕ್ಷಿ ಇಲ್ಲವೆ?"

ರಂಗರಾಯರು ಈ ಆವೇಗದಿಂದ ಮಾತನಾಡಿ ಸ್ವಲ್ಪ ಹೊತ್ತು ಸುಮ್ಮನಾದರು. ಅವರ ಮಾತು ನಾಣಿಯ ಮೇಲೆ ಪೂರ್ತಿ ಪರಿಣಾಮ ಮಾಡಿತು.

"ನನ್ನನ್ನು ಇನ್ನೂ ನಂಬುವುದಿಲ್ಲವೆ?" ಎಂದು ದೈನ್ಯದಿಂದ ಕೇಳಿದ.

ರಂಗರಾಯರು ಸಮಾಧಾನದಿಂದ ನುಡಿದರು :

"ನಿಮ್ಮ ಸುಖಕ್ಕೋಸ್ಕರ ನಾನು ಇಷ್ಟೆಲ್ಲಾ ಹೇಳಿದೆ. ದೇವರು ಹಾಗೆ ನಡೆಸಲಿ."

ಆ ಹೊತ್ತಿಗೆ ಪದ್ಮಳಿಂದ ಊಟಕ್ಕೆ ಕರೆಬಂತು. ಆನಂದ ಊಟವನ್ನು ಮುಗಿಸಿಕೊಂಡು ಕಾಲೇಜಿಗೆ ಹೊರಟುಹೋಗಿದ್ದ. ನಾಣಿ ಸ್ನಾನದ ಮನೆಗೆ ಹೋದ. ಅವನು ಕೈಕಾಲು ತೊಳೆದುಕೊಂಡು ಬರುವ ವೇಳೆಗೆ ಪದ್ಮ ಬಡಿಸಿದ್ದಳು. ಆ ಮಧ್ಯಾಹ್ನ ನಾಣಿ ಒಂದು ತುತ್ತನ್ನು ಹೆಚ್ಚಾಗಿಯೇ ಊಟ ಮಾಡಿದ.

ಕಾಲೇಜಿನಿಂದ ಆನಂದ ಬಂದ. ಸಂಜೆ ಅವನು ನಾಣಿಯೊಡನೆ ತಿರುಗಾಡಲು ಹೊರಟ. ಕಬ್ಬನ್ ಪಾರ್ಕಿನಲ್ಲಿ ಸ್ವಲ್ಪ ಹೊತ್ತು ಸುತ್ತಾಡಿ ಹಸುರು ಹುಲ್ಲಿನ ಮೇಲೆ ಕುಳಿತರು.

"ನಾಳೆ ನಮ್ಮೊಡನೆ ನೀನೂ ದೇವನಹಳ್ಳಿಗೆ ಹೊರಡಬೇಕು, ಆನಂದ."

"ನಾಳೆ ನಾಡಿದ್ದು ನೀವು ಹೊರಡುವಂತಿಲ್ಲ. ಸರೋಜ ಒತ್ತಾಯ ಮಾಡಿದ್ದಾಳೆ."

"ಅಲ್ಲಿ ಕೆಲಸಗಳಿವೆ, ಹೊರಡಬೇಕಲ್ಲ."

" ಇಷ್ಟು ಬೇಗ ನಮ್ಮೂರು ಬೇಜಾರಾಯಿತೆ ? "

" ನಮ್ಮೂರಿನ ಮೋಹದಿಂದ ನಿಮ್ಮೂರು ಬೇಜಾರಾಗದೆ ಉಂಟೆ ? "

" ನಮ್ಮೂರಿನಲ್ಲಿಲ್ಲದ ಮೋಹ ಯಾವುದಯ್ಯಾ ನಿಮ್ಮೂರಿನಲ್ಲಿ ? "

" ಇದೆ."

" ಹೇಳು. ಅದನ್ನು ನೋಡುವುದಕ್ಕೆ ನಿಮ್ಮೂರಿಗೆ ಒಂದು ಸಲ ಖಂಡಿತ ಬರುತ್ತೇವೆ."

" ನಮ್ಮೂರಿನಲ್ಲಿ ಉದ್ದವಾದ ಕೆರೆಯ ಏರಿ, ಮುಂದಕ್ಕೆ ಮುಳ್ಳಿನ ಕಾಲು ದಾರಿ! ನಿಮ್ಮೂರಿನಲ್ಲಿ ಕಬ್ಬನ್ ಪಾರ್ಕ್, ಲಾಲ್ ಬಾಗ್! " ಇಬ್ಬರೂ ನಗೆಯಲ್ಲಿ ತೇಲಿದರು.

" ನಮ್ಮೂರು ಬೆಂಗಳೂರು ಎಂದು ನಿನಗೆ ಹೇಳಿದವರು ಯಾರು, ನಾಣಿ ? ನಮ್ಮೂರು ಸಂಪಿಗೆ."

ಅಷ್ಟು ಹೊತ್ತಿಗೆ ಕತ್ತಲು ತೆರೆತೆರೆಯಾಗಿ ಸುತ್ತಿಬಂದಿತು. ಮೂಡಲಲ್ಲಿ ಒಂದು ದೊಡ್ಡ ನಕ್ಷತ್ರ ಇಣಿಕಿತು. ಸ್ವಲ್ಪ ಹೊತ್ತಿನಲ್ಲಿ ಬೆಳಕಿನ ಕಿಡಿಗಳಂತೆ ತಾರಾಗಣ ಬೆಳಗಲಾರಂಭಿಸಿತು. ಆನಂದ, ನಾಣಿ ರೆಸ್ಟೋರಾಂಟಿನಲ್ಲಿ ಕಾಫಿ ಕುಡಿದರು. ನಿಧಾನವಾಗಿ ಮನೆಯ ದಾರಿಯನ್ನು ಹಿಡಿದರು.

ಶನಿವಾರ ನಾಣಿಯನ್ನು ಹೊರಡಲು ಬಿಡಲಿಲ್ಲ. ಸರೋಜ, ಕಮಲಮ್ಮನವರು ಉತ್ಸಾಹದಿಂದ ಬಗೆಬಗೆಯ ತಿಂಡಿ ಮಾಡಿದರು. ಅವರಿಗೆ ತನ್ನಲ್ಲಿದ್ದ ವಿಶ್ವಾಸವೆಷ್ಟೆಂಬುದನ್ನು ಪದ್ಮ ಅಳೆಯಲಾರದೇ ಹೋದಳು. ಭಾನುವಾರ ನಾಣಿ, ಪದ್ಮ ದೇವನಹಳ್ಳಿಗೆ ಹೊರಟರು. ಮನೆಯಲ್ಲಿ ಎಲ್ಲರೂ ಅವರ ಅಗಲಿಕೆಗಾಗಿ ಮರುಗಿದರು. ನಾಗಮ್ಮನವರ, ರಂಗರಾಯರ ಮುಖಗಳನ್ನು ನೋಡಿ ಪದ್ಮ ಕಣ್ಣೀರಿಟ್ಟಳು. ಆ ಮುದಿ ಜೀವಗಳು ಮಗಳ ಅಗಲಿಕೆಗಾಗಿ ದುಃಖಿತವಾದವು.

## ೬೬

ಆನಂದನ ಮನೆಯಲ್ಲಿ ಮೂವರು ಉಳಿದುಕೊಂಡರು—ಆನಂದ, ರಂಗರಾಯರು ಮತ್ತು ನಾಗಮ್ಮನವರು. ಪದ್ಮ, ನಾಣಿ ದೇವನಹಳ್ಳಿಗೆ ಹೊರಟು ಹೋದರು. ಏಳನೆಯ ತಿಂಗಳು ಮುಗಿಯುವ ದಿನಗಳಲ್ಲಿ ಸರೋಜ ತಾಯಿಯ ಮನೆಗೆ ಹೋದಳು.

ಒಂದು ತಿಂಗಳು ಕಳೆಯಿತು. ರಂಗರಾಯರ ಶಕ್ತಿ ದಿನೇ ದಿನೇ ಕುಗ್ಗುತ್ತಿತ್ತು. ಮನೆಯಲ್ಲಿಯೇ ಯಾವಾಗಲೂ ಕುಳಿತಿರುತ್ತಿದ್ದರು. ಹೊರಗೆ ಅಡ್ಡಾಡುವುದಕ್ಕೂ ಹೋಗುತ್ತಿರಲಿಲ್ಲ. ಸಂಜೆ ಮನೆಯ ಮುಂದೆ ಶತಪಥ ಸುತ್ತುತ್ತಿದ್ದರು. ಸ್ವಲ್ಪ ಹೊತ್ತಿನಲ್ಲಿ ಅದೂ ಬೇಸರವಾಗಿ ಕೊಟಡಿಯಲ್ಲಿ ಸುಮ್ಮನೆ ಕುಳಿತುಬಿಡುತ್ತಿದ್ದರು. ಅವರ ಮನಸ್ಸಿನಲ್ಲಿ ಯಾವ ಹೊಯ್ದಾಟವೂ ಇರಲಿಲ್ಲ. ಮನಸ್ಸು ಭೂತಕಾಲದ ಕಡೆಗೆ ಹರಿಯುತ್ತದೆ. ತಮ್ಮ ಬಾಳಿನ ಕೆಲಸಗಳೆಲ್ಲ ಮುಗಿದುವೆಂದು ತಿಳಿಯುತ್ತಾರೆ. ಮನಸ್ಸು ಎಲ್ಲ ಪ್ರಾಪಂಚಿಕ ವಿಷಯಗಳಿಂದಲೂ ವಿಮುಖವಾಗುತ್ತದೆ. ಬಾಳಿಗೂ ಆಚೆಗೆ ಅವರ ಯೋಚನೆಗಳು ಬಹಳ ಕಾಲ ಸುತ್ತಾಡುತ್ತವೆ. ಆಗ ಅವರಿಗೆ ಸಂಪಿಗೆಯ ನೆನಪಾಗುವುದು. ಅಲ್ಲಿಗೆ ಹೊರಡಲು ಮನ ಆತುರಪಡುವುದು. ಆದರೆ ಬೇರೆ ಯಾವುದೋ ಮನ ಬೆಂಗಳೂರಿನಲ್ಲಿಯೇ ಇನ್ನೂ ಸ್ವಲ್ಪ ಕಾಲವಿರುವಂತೆ ಪ್ರೇರೇಪಿಸುತ್ತದೆ. ಈ ಮನೋಗತಿಯಲ್ಲಿ ಅವರು ನಾಗಮ್ಮನವರನ್ನು ನೋಡುತ್ತಾರೆ. ಯಾವುದೋ ಚಿಂತೆ ಅವರ ಹೃದಯವನ್ನು ಹಿಂಡುವುದು. ನಿಧಾನವಾಗಿ ಅವರು ಸಮಾಧಾನವನ್ನು ತಂದುಕೊಳ್ಳಬೇಕಾಗುವುದು. ಮಾನವನು ಪ್ರಪಂಚವೆಂಬ ಚದುರಂಗದ ಆಟದಲ್ಲಿ ಕಾಯಿಗಳಿದ್ದಂತೆ. ಆಟವನ್ನಾಡುವವನು ದೇವರು. ತಮ್ಮ ಬದುಕು ಅವನ ಕೈನಡೆಸಿದಂತೆ. ಅವನ ನಿಶ್ಚಯವನ್ನು ಯಾರೂ ಬೇರೆಮಾಡುವಂತಿಲ್ಲ. ಈ ಯೋಚನೆಗಳು ಒಡೆದು ಹೋಳಾದ ಅವರ ಮನಶ್ಶಾಂತಿಯನ್ನು ಮತ್ತೆ ಕೂಡಿಸುವುವು.

ನಾಗಮ್ಮನವರಿಗೆ ಕಾಲವನ್ನು ದೂಡುವುದು ಕಷ್ಟ. ಶಕ್ತಿ ಕುಂದಿದ ದೇಹಧರ್ಮ. ಅಡಿಗೆಯವಳು ಅಡಿಗೆ ಮಾಡುತ್ತಾಳೆ, ಮನೆಗೆಲಸ ಮಾಡುತ್ತಾಳೆ. ಒಂದೊಂದು ದಿನ ಸುಂದರರಾಯರ ಕಾರು ಬಂದು ಮನೆಯ ಮುಂದೆ ನಿಲ್ಲುತ್ತದೆ. ನಾಗಮ್ಮನವರೂ, ರಂಗರಾಯರೂ ಸೊಸೆಯನ್ನು ನೋಡಿಕೊಂಡು ಬರಲು ಸುಂದರರಾಯರ ಮನೆಗೆ ಹೋಗುತ್ತಾರೆ. ಹಿರಿಹಿರಿ ಹಿಗ್ಗುತ್ತಾರೆ. ಆದರೆ ರಂಗರಾಯರು ಅದೇಕೋ ಕ್ರಮಕ್ರಮವಾಗಿ ಎಲ್ಲ ಬಗೆಯ ಮಮತೆಯಿಂದಲೂ ನಿರ್ಲಿಪ್ತರಾಗುತ್ತಿರುವಂತೆ ಕಾಣುತ್ತಾರೆ.

ಎರಡು ತಿಂಗಳು ಬೇಗ ಉರುಳಿತು. ಆನಂದನಿಗೆ ಕುಲದೀಪಕನೇ ಹುಟ್ಟಿದ. ಕಮಲಮ್ಮನವರು ಮಗಳನ್ನು ಬಹಳ ಜಾಗರೂಕತೆಯಿಂದ ನೋಡಿ

ಕೊಂಡರು. ಮಗು ಅವರ ಅಪ್ಪನ ಪ್ರತಿರೂಪವಾಗಿದೆಯೆಂದು ಎಲ್ಲರಿಗೂ ಸಾರಿದರು. ಅವರ ಸಂತೋಷದ ಕಟ್ಟೆ ಒಡೆಯುವಂತಿತ್ತು.

ಮಗುವಿಗೆ ನಾಮಕರಣವಾಗಬೇಕು. ಮನೆಯಲ್ಲಿ ಅಮಿತವಾದ ಉತ್ಸಾಹ. ಪುರೋಹಿತರು ಶುಭ ದಿನವನ್ನು ನಿಶ್ಚಯಿಸಿದರು. ಆನಂದನಿಗೆ ಅಂತಹ ಸಂತೋಷ ಸಮಯದಲ್ಲಿ ತಂಗಿಯ ನೆನಪಾಯಿತು. ನಾಲ್ಕು ದಿನ ಮುಂಚೆಯೇ ದೇವನಹಳ್ಳಿಗೆ ಒಂದು ಪತ್ರವನ್ನು ಬರೆದ. ನಾಣಿಯನ್ನೂ ಅವನ ಕುಟುಂಬ ವನ್ನೂ ಮಗನ ನಾಮಕರಣದ ಸಂದರ್ಭಕ್ಕೆ ಬರುವಂತೆ ಆದರದಿಂದ ಆಮಂತ್ರಿಸಿದ.

ನಾಮಕರಣದ ದಿನ ಬಂಧುಬಳಗ ನೆರೆದಿದೆ. ಆನಂದನ ಕರೆಯೋಲೆ ಯಂತೆ ನಾಣಿ, ಪದ್ಮ ಬಂದಿದ್ದಾರೆ. ಮಗುವಿಗೆ ವೇಣುಗೋಪಾಲನೆಂದು ನಾಮಕರಣ. ಈಗ ನಾಣಿ, ಪದ್ಮ ಇಬ್ಬರ ಹೃದಯಗಳನ್ನು ದಾಂಪತ್ಯ ಸುಖ ಬಂಧಿಸಿದೆ. ಅವರ ಪರಸ್ಪರ ಸುಮಧುರ ಪ್ರೇಮ ರಂಗರಾಯರನ್ನು ಹರ್ಷಚಿತ್ತರನ್ನಾಗಿ ಮಾಡಿದೆ. ಪದ್ಮಳ ಮುಖದಮೇಲೆ ಹೊಸಕಳೆ ಮೂಡಿತ್ತು. ನಾಗಮ್ಮನವರು ಅದರ ಕಾರಣವನ್ನು ತಿಳಿದುಕೊಂಡು ಹರ್ಷದ ಉಯ್ಯಾಲೆ ಯಲ್ಲಿ ತೂಗಾಡಿದರು. ಅವರ ಅಂತರ್ಯದಲ್ಲಿ ಯಾವುದೋ ಆಸೆಯ ಹಣತೆ ಪ್ರಜ್ವಲವಾಗಿ ಬೆಳಗಿತು.

ಸಂಜೆಗೆ ಆನಂದ ಮತ್ತು ನಾಣಿ ಗಾಳಿಸೇವನೆಗೆ ಹೊರಟರು. ಹಾಸ್ಯದ ನುಡಿಗಳಲ್ಲಿಯೇ ದಾರಿಯನ್ನು ತುಳಿದರು.

"ನಮ್ಮೂರಿಗೆ ಯಾವಾಗ ಬರುತ್ತಿ, ಆನಂದ?"

"ಬರಲೇಬೇಕಾಗಿದೆಯಲ್ಲಾ."

"ನೀನು ಮನಸ್ಸುಮಾಡಬೇಕಲ್ಲ."

"ಮನಸ್ಸು ಮಾಡುವುದು ಹಾಗಿರಲಿ, ಮಹಾರಾಯ. ನಾನು ಬರಲೇ ಬೇಕಾಗಿದೆ. ಅದು ನನ್ನ ಕರ್ತವ್ಯ."

ಬರುವುದು, ಬಿಡುವುದು ಮನಸ್ಸಿನ ಸಂತೋಷ; ಕರ್ತವ್ಯ ಏನಿದೆ, ಅದರಲ್ಲಿ?"

"ನನ್ನ ಕರೆಯೋಲೆಗೆ ನೀನು ಬರಲಿಲ್ಲವೆ? ನಾನೂ ನಿನ್ನ ಕರೆಯೋಲೆಗೆ ಬರುವುದು ನನ್ನ ಕರ್ತವ್ಯವಲ್ಲವೆ?"

" ಎಷ್ಟೋ ಸಲ ನಾನೇ ಕರೆಯುತ್ತಿದ್ದೇನೆ, ಇನ್ನು ನನ್ನ ಕರೆಯೋಲೆ ಯಾವುದು ? "

" ಇದೆ, ನಿನಗೇ ಗೊತ್ತಾಗುತ್ತೆ."

" ಯಾವುದು ಅದು ? ಹೇಳು."

" ನಾನು ಅದನ್ನು ಹೇಳಬೇಕೆ ? "

" ಹೇಳಿಬಿಡು."

" ಐದು ತಿಂಗಳ ಹಿಂದೆ ನಿನಗೆ ನಾನು ಒಂದು ಕರೆಯೋಲೆಯನ್ನು ಕಳಿಸಿದ್ದೆನಲ್ಲಾ, ಅದೇ ಸಂದರ್ಭಕ್ಕೆ ನಿನ್ನಿಂದಲೂ ಕರೆಯೋಲೆಯನ್ನು ನಿರೀಕ್ಷಿಸುತ್ತಿದ್ದೇನೆ. ಆದರೆ ನೀನು ಗೋಪ್ಯವಾಗಿಯೇ ಎಲ್ಲ ವಿಚಾರಗಳನ್ನೂ ನಡೆಸಿಕೊಳ್ಳುವ ಹಾಗೆ ಕಾಣುತ್ತೀ " ಎಂದು ಆನಂದ ಗಹಗಹಿಸಿ ನಕ್ಕ.

ನಾಣಿಗೆ ಆನಂದನ ಮಾತು ಪೂರ್ತಿಯಾಗಿ ಅರ್ಥವಾಯಿತು. ಆ ವಿಚಾರದ ಕಡೆಗೆ ನಾಣಿಯ ಯೋಚನೆ ತಕ್ಷಣ ಹರಿಯಲಿಲ್ಲ. ಸರೋಜಳ ಶ್ರೀಮಂತದ ದಿವಸ ತಾನು ಕಂಡ ಚಿತ್ರಗಳು ನಾಣಿಗೆ ನೆನಪಾದವು. ಒಂದೆರಡು ತಿಂಗಳಲ್ಲಿ ಪದ್ಮ ಅದಕ್ಕೆ ತಕ್ಕವಳಾಗುವಳು ಎಂಬ ತಿಳಿವಳಿಕೆ ಅವನಿಗುಂಟಾಯಿತು.

" ಎಲ್ಲಾ ನೀನು ತೋರಿಸಿದ ದಾರಿ " ಎಂದು ನಾಣಿ ಪ್ರತಿಯಾಗಿ ನಕ್ಕ.

ಮುಂದಿನ ದಿನ ಬೆಳಗಿನ ಗಾಡಿಗೆ ನಾಣಿ, ಪದ್ಮ ಪ್ರಯಾಣವನ್ನು ಬೆಳೆಸಿದರು.

೬೭

ಎರಡು ತಿಂಗಳು ಜಾರಿತು. ನಾಣಿಯಿಂದ ಆನಂದನಿಗೆ ಒಂದು ಪತ್ರ ಬಂದಿತು. ಪದ್ಮಳ ಶ್ರೀಮಂತಕ್ಕೆ ಎಲ್ಲರಿಗೂ ಆಹ್ವಾನ ಬಂದಿದ್ದಿತು. ರಂಗರಾಯರು, ನಾಗಮ್ಮನವರು, ಆನಂದ ಒಂದು ದಿನ ಮುಂಚಿತವಾಗಿ ದೇವನಹಳ್ಳಿಗೆ ಹೊರಟರು. ಆ ಶುಭಕಾರ್ಯ ಹರ್ಷದಲ್ಲಿ ನಡೆಯಿತು. ಎಲ್ಲರೂ ದೇವನಹಳ್ಳಿಯಲ್ಲಿಯೇ ಎರಡು ದಿನ ಉಳಿಯಬೇಕಾಯಿತು—ನಾಣಿಯ ಆಸೆ, ವೆಂಕಮ್ಮನವರ ಒತ್ತಾಯ. ಪದ್ಮ ಹೆಮ್ಮೆಯಿಂದ ಓಲಾಡಿದಳು. ಎರಡು ದಿನ ಒಂದು ಹಗಲಿನಂತೆ ಕಳೆಯಿತು. ಎಲ್ಲರೂ ಬೆಂಗಳೂರಿಗೆ ಹೊರಟರು.

ರಂಗರಾಯರು ಉತ್ಸಾಹದಲ್ಲಿ ತಮ್ಮ ದೇಹದ ಗತಿಯನ್ನು ಪೂರ್ತಿಯಾಗಿ ನಿರ್ಲಕ್ಷಿಸಿದ್ದರು. ದುರ್ಬಲಗೊಂಡ ಅವರ ಹೃದಯ ಅವರ ಅರಿವೇ ಇಲ್ಲದೆ ಹೇಗೋ ಬಡಿಯುತ್ತಿತ್ತು.

ಹೆಂಡತಿ ಮಗುವನ್ನು ಆನಂದ ಮನೆಗೆ ಕರೆದುಕೊಂಡು ಬಂದಿದ್ದಾನೆ. ವೇಣುವಿನ ಆಟಪಾಟಗಳನ್ನು ನೋಡುತ್ತ ರಂಗರಾಯರು ಸುಲಭವಾಗಿ ಕಾಲವನ್ನು ನೂಕುತ್ತಾರೆ.

ರಂಗರಾಯರ ಮನಸ್ಸು ಇತ್ತೀಚೆಗೆ ಮತ್ತೂ ವಿಚಿತ್ರವಾಗಿದೆ. ಅವರು ವೇಣುವಿನ ಜೊತೆಗೂ ಈಗ ಹೆಚ್ಚಾಗಿ ಸೇರುವುದಿಲ್ಲ. ಮಗು 'ತಾತ' ಎಂದು ಕೂಗಿದರೆ ಆಗ ಅದನ್ನು ಅಪ್ಪಿಕೊಂಡು ಸ್ವಲ್ಪ ಹೊತ್ತು ತಾವೂ ಒಂದು ಮಗುವಿನಂತೆ ನಲಿದಾಡುತ್ತಾರೆ. ಅನಂತರ ಕೊಟಡಿಯಲ್ಲಿ ಆಲೋಚನಾಪರರಾಗಿ ಸುಮ್ಮನೆ ಕುಳಿತಿರುತ್ತಾರೆ. ಒಂದೊಂದು ಸಲ ಏನೋ ಸಂದೇಹ ತೋರಿ ಮುಖದಲ್ಲಿ ಅಶಾಂತಿ ಮೂಡುತ್ತದೆ. ತಕ್ಷಣ ಎದ್ದು ಹೋಗಿ ಅವರು ಭಗವದ್ಗೀತೆಯನ್ನು ತೆಗೆಯುತ್ತಾರೆ. ಯಾವುವೋ ಕೆಲವು ಶ್ಲೋಕಗಳನ್ನು ಮನಸ್ಸಿನಲ್ಲಿಯೇ ನಾಲ್ಕಾರು ಬಾರಿ ಪಠಿಸಿಕೊಳ್ಳುತ್ತಾರೆ. ಮತ್ತೆ ಆರಾಮಾಸನದ ಮೇಲೆ ಕುಳಿತುಕೊಳ್ಳುತ್ತಾರೆ. ಆಗ ಅವರ ಮುಖದ ಮೇಲೆ ಅಶಾಂತಿ ತೋರುವುದಿಲ್ಲ.

ಒಂದು ದಿನ ಬೆಳಗ್ಗೆ ರಂಗರಾಯರು ಹಾಸಿಗೆಯಿಂದ ಏಳುತ್ತಿರುವಂತೆಯೇ ತಾವು ಸಂಪಿಗೆಗೆ ಹೊರಡುವುದಾಗಿ ಆನಂದನಿಗೆ ಹೇಳಿದರು. ಆನಂದನಿಗೆ ಅವರ ನಿರ್ಧಾರ ಅಚ್ಚರಿಯನ್ನುಂಟುಮಾಡಿತು.

"ಇದೇನಪ್ಪ, ಇಷ್ಟು ಆತುರವಾಗಿ ಸಂಪಿಗೆಗೆ ಹೊರಟಿದ್ದೀ?"

"ಇನ್ನು ತಡ ಮಾಡುವ ಹಾಗಿಲ್ಲ, ಆನಂದ."

"ನನಗೆ ಏನೂ ಅರ್ಥವೇ ಆಗುತ್ತಾ ಇಲ್ಲ."

"ನಿನ್ನೆಯ ದಿನ ಕನಸಿನಲ್ಲಿ ನನಗೆ ಕರೆ ಬಂದುಹೋಯಿತು."

"ಅದು ಕನಸೇ ಸರಿ."

"ಪ್ರಪಂಚವೇ ಒಂದು ದೊಡ್ಡ ಕನಸು. ಅದರಲ್ಲಿ ಸಿಕ್ಕಿಕೊಂಡಿರುವವರೆಗೂ ಆ ಕನಸಿನಿಂದ ಎಚ್ಚರವಾಗುವುದಿಲ್ಲ."

"ನೀನು ವಿಚಿತ್ರವಾಗಿ ಮಾತನಾಡುತ್ತೀ, ಅಪ್ಪ."

"ವಿಚಿತ್ರವಾದ ಬೇರೆ ಯಾವುದೋ ಪ್ರಪಂಚ ನನ್ನೆದುರು ಸುಳಿದಾಡುತ್ತಿದೆ."

"ಹೀಗೆಲ್ಲ ಮಾತನಾಡಬೇಡ, ಅಪ್ಪ."

"ನನ್ನ ಬಾಳಿನ ಕೆಲಸಗಳೆಲ್ಲ ಮುಗಿದಿವೆ, ಆನಂದ. ಟಿಕೆಟ್ ತೆಗೆದು ಕೊಂಡು ಗಾಡಿಯನ್ನು ಕಾಯುತ್ತ ನಿಂತಿರುವ ಪ್ರಯಾಣಿಕನ ಹಾಗೆ ನಾನು ಸಿದ್ಧನಾದ್ದೇನೆ."

"ಅಂತಹ ಚಿಂತೆಯನ್ನೆಲ್ಲ ಬಿಟ್ಟುಬಿಡು."

"ಎಲ್ಲ ಚಿಂತೆಗಳನ್ನೂ ನಾನು ಬಿಟ್ಟದ್ದೇನೆ. ಒಂದು ಚಿಂತೆ ಮಾತ್ರ ಉಳಿದಿದೆ. ಅದಕ್ಕೆ ಪರಿಹಾರವಿಲ್ಲ."

"ಯಾರ ಚಿಂತೆ ?"

"ನಿಮ್ಮ ಅಮ್ಮನ ಚಿಂತೆ. ಅವಳ ಬದುಕು ಕೊನೆಗೂ ದುಃಖದಲ್ಲಿಯೇ ಕೊನೆಮುಟ್ಟಬೇಕಾಯಿತು !"

"ಅಷ್ಟೊಂದು ಆಲೋಚನಾಪರನಾದರೆ ಹೇಗೆ, ಅಪ್ಪ ? ನೀನು ಚಿಂತೆ ಯನ್ನು ತುಂಬ ಹಚ್ಚಿಕೊಳ್ಳುತ್ತೀ."

"ಬಾಳಿನ ಗಾಲಿಯ ಮೇಲೆ ಯಾರಿಗೂ ಹತೋಟಿ ಇಲ್ಲ. ಅದನ್ನು ನಡೆಸುವವನ ಕೈ ಅವನದು ! ಚಿಂತೆಯಿಂದ ಪ್ರಯೋಜನವೇನು ?"

ಆ ಸಮಯಕ್ಕೆ ಸರೋಜ ಅಲ್ಲಿಗೆ ಬಂದಳು. ಆನಂದನನ್ನು ಊಟಕ್ಕೆ ಕರೆದಳು. ಕಾಲೇಜಿಗೆ ಹೊತ್ತಾಗಿತ್ತು. ರಂಗರಾಯರ ಮುಖ ದುಃಖಪೂರ್ಣ ವಾದುದನ್ನು ಕಂಡು ಸರೋಜಳೂ ಪೆಚ್ಚಾದಳು.

ರಂಗರಾಯರು ಸಂಪಿಗೆಗೆ ಹೊರಟುಬಿಟ್ಟರು. ಅವರನ್ನು ಯಾರೂ ತಡೆಯಲಾಗಲಿಲ್ಲ. ಅಲ್ಲಿ ತಮಗೆ ಮನಶ್ಯಾಂತಿ ದೊರೆಯುವುದೆಂದು ಹೇಳಿದರು. ನಾಗಮ್ಮನವರೂ ಎರಡು ದಿನ ಸಂಪಿಗೆಯಲ್ಲಿರಬೇಕೆಂದು ಇಷ್ಟಪಟ್ಟರು. ಅದರಂತೆ ಆನಂದ ಅವರಿಬ್ಬರನ್ನೂ ಮಧ್ಯಾಹ್ನದ ಗಾಡಿಗೆ ಸಂಪಿಗೆಗೆ ಕಳುಹಿಸ ಬೇಕಾಯಿತು. ಅದರಿಂದ ಅವನ ಮನಶ್ಯಾಂತಿ ಭಂಗವಾಯಿತು.

ರಂಗರಾಯರು ಸಂಪಿಗೆಗೆ ಬಂದ ಸಮಾಚಾರ ಶಾಮರಾಯರಿಗೆ ತಿಳಿ ಯಿತು. ಅವರಿಗೆ ಒಂದು ಪತ್ರವನ್ನೂ ಹಾಕಿರಲಿಲ್ಲ. ಕೂಡಲೆ ಬಂದು ಮಾತನಾಡಿಸಿದರು.

" ಇದೇನು ರಂಗೂ, ಹಠಾತ್ತಾಗಿ ಬಂದುಬಿಟ್ಟೆ ? "

" ನಾನು ಲೆಕ್ಕಹಾಕಿದ ಗಳಿಗೆ ಬಂದುಬಿಟ್ಟಿತು, ಶಾಮೂ."

" ಇದೇನಪ್ಪ, ಹೀಗೆ ಮಾತಾಡುತ್ತೀ ? "

" ಸಂಪಿಗೆಯಲ್ಲಿ ಪ್ರಾಣ ಬಿಟ್ಟರೆ ನನ್ನ ಆತ್ಮಕ್ಕೆ ಶಾಂತಿ ! "

ರಂಗರಾಯರ ನಿಶ್ಚಯದ ಮಾತನ್ನು ಕೇಳಿ ಶಾಮರಾಯರು ದಂಗು ಬಡಿದುಹೋದರು.

೬೮

ಮುಂದಿನ ದಿವಸ ಬೆಳಗ್ಗೆ ರಂಗರಾಯರು ಹಾಸಿಗೆಯಿಂದ ಏಳಲಿಲ್ಲ. ಅವರ ತುಟಿ ಬಿಕ್ಕುತ್ತಿತ್ತು. ನಾಗಮ್ಮನವರು ಇನ್ನೂ ಮಲಗಿದ್ದರು. ಅಡಿಗೆಯ ಹೆಂಗಸು ಕಾಫಿಯನ್ನು ಸಿದ್ಧಮಾಡಿ ರಂಗರಾಯರ ಕೊಟಡಿಗೆ ಬಂದು ಅವರ ಸ್ಥಿತಿಯನ್ನು ನೋಡಿದಳು. ಆಕೆಗೆ ಗಾಬರಿಯಾಯಿತು. ರಂಗರಾಯರ ಪ್ರಜ್ಞೆ ಎಲ್ಲಿಯೋ ತೂರಾಡುತ್ತಿತ್ತು. ಮಾತನಾಡಲು ನಾಲಗೆ ಹೊರಳದು. ಅಡಿಗೆ ಹೆಂಗಸು ತಕ್ಷಣ ನಾಗಮ್ಮನವರನ್ನು ಎಚ್ಚರಿಸಿದಳು. ಪರಿಸ್ಥಿತಿಯನ್ನು ಕಂಡು ಅವರ ಎದೆ ಬಡಿದುಕೊಳ್ಳಹತ್ತಿತು. ಶಾಮರಾಯರಿಗೆ ಹೇಳಿಕಳುಹಿಸಿದರು. ಅವರು ಧಾವಿಸಿ ಬಂದರು.

ರಂಗರಾಯರು ನಾಗಮ್ಮನವರ ಕಡೆಗೆ ದೀನರಾಗಿ ನೋಟಬೀರಿದರು. ಅವರ ಕಣ್ಣಿನಲ್ಲಿ ನೀರುಕ್ಕಿತು. ನಾಗಮ್ಮನವರು ಹೊರಳುತ್ತ ಬಿಕ್ಕಿಬಿಕ್ಕಿ ಅತ್ತರು. ಆ ಎರಡು ಮುದಿಹಕ್ಕಿಗಳು ಬಾಳಿನ ಬಹು ವರ್ಷಗಳನ್ನು ಒಂದೇ ಗೂಡಿನಲ್ಲಿ ಕಳೆದಿದ್ದವು. ಈಗ ಒಂದು ಹಕ್ಕಿ ಗೂಡಿನಿಂದ ಹಾರಿಹೋಗಲು ರೆಕ್ಕೆಯನ್ನು ಕೊಡವುತ್ತಿತ್ತು. ಮತ್ತೊಂದು ಹಕ್ಕಿ ಮುಂದೆ ಕಾದಿದ್ದ ಚಿರವಾದ ಅಗಲಿಕೆಗಾಗಿ ಗೋಳಿಡುತ್ತಿತ್ತು.

ರಂಗರಾಯರು ಶಾಮರಾಯರಿಗೆ ಏನೋ ಹೇಳಲು ಬಯಸುತ್ತಾರೆ. ನಾಲಗೆ ಬಿದ್ದುಹೋಗಿದೆ, ಎಚ್ಚರ ಜಾರಿಹೋಗುತ್ತಿದೆ, ಮತ್ತೆ ಎಂದಿಗೂ ಬಾರದಂತೆ. ಶಾಮರಾಯರಿಗೆ ದಿಕ್ಕುತೋರದಾಯಿತು. ತಡಮಾಡದೆ ಅವರು ಬೆಂಗಳೂರಿಗೂ, ದೇವನಹಳ್ಳಿಗೂ ತಂತಿಸುದ್ದಿಯನ್ನು ಮುಟ್ಟಿಸಿದರು.

ಸಂಜೆಯ ಹೊತ್ತಿಗೆ ರಂಗರಾಯರ ಕುಟುಂಬವೆಲ್ಲ ಬಂದು ಕೂಡಿತು.

ಮನೆಯ ಮೇಲೆ ಅಶುಭ ಭಾರವಾಗಿ ತೂಗಾಡುತ್ತಿತ್ತು. ಎಲ್ಲರೂ ಅಳುತ್ತಿದ್ದರು. ದೊಡ್ಡವರೆಲ್ಲ ಅಳುತ್ತಿದ್ದುದನ್ನು ನೋಡಿ ವೇಣುವೂ ಗಟ್ಟಿಯಾಗಿ ಅಳಹತ್ತಿದ. ಆನಂದ ಅವನನ್ನು ಸಮಾಧಾನಪಡಿಸಲು ಯತ್ನಿಸಲಿಲ್ಲ. ಅವನ ಹೃದಯವೇ ಒಡೆದುಹೋಗಿತ್ತು. ರಂಗರಾಯರ ಹೃದಯದ ಬಡಿತ ಕ್ರಮವಾಗಿ ನಿಧಾನ ವಾಗುತ್ತಿತ್ತು. ಅವರು ಆನಂದನ ಕಡೆಗೆ ಕಷ್ಟದಿಂದ ನೋಟವನ್ನು ತಿರುಗಿಸಿ ದರು. ಆನಂದ ವೇಣುವನ್ನು ಎತ್ತಿಕೊಂಡು ಅವರ ಪಕ್ಕದಲ್ಲಿ ಕುಳಿತ. ನಿಧಾನವಾಗಿ ಅವರು ವೇಣುವಿನ ಮೈಮೇಲೆ ಕೈಯನ್ನಾಡಿಸಿದರು. ನಂದಿ ಹೋಗುತ್ತಿದ್ದ ಅವರ ಕಣ್ಣು ಮತ್ತೆ ಒದ್ದೆಯಾಗಿ ಮಿನುಗಿತು. ಆ ಮಿನುಗಿನಲ್ಲಿ ತೃಪ್ತಿ ತುಂಬಿ ಕಾಣುತ್ತಿತ್ತು. ಅವರ ಕಣ್ಣು ಪದ್ಮಳ ಕಡೆಗೆ ಹೊರಳಿತು. ಅವಳು ಗಟ್ಟಿಯಾಗಿ ರೋದಿಸಿದಳು. ನಾಣಿ ಅವಳನ್ನು ಸಮಾಧಾನಪಡಿಸಬೇಕಾ ಯಿತು. ಕೊನೆಗೆ ನಾಗಮ್ಮನವರನ್ನು ನೋಡಿ ಸ್ವಲ್ಪ ಬಿಕ್ಕಿದರು. ನಾಗಮ್ಮ ನವರು ನೆಲದಮೇಲೆ ಬಿದ್ದು ಮಗುವಿನಂತೆ ಅತ್ತರು. ರಂಗರಾಯರ ಮುಖವರ್ಣ ಬದಲಾಯಿಸಿತು. ತಾವು ಕಾಲಿಡಲಿದ್ದ ನೂತನ ಪ್ರಪಂಚದ ಕಡೆಗೆ ಅವರ ದೃಷ್ಟಿ ನೆಟ್ಟುಹೋಯಿತು. ಯಾರ ಕೂಗೂ ಮತ್ತೆ ಆ ದೃಷ್ಟಿಯನ್ನು ಅಲುಗಿಸು ವಂತಿರಲಿಲ್ಲ.

ಮನೆ ಈಗ ಗೋಳಿನ ಕಡಲಾಯಿತು. ಆನಂದ, ನಾಣಿ ಎಲ್ಲರನ್ನೂ ಸಮಾಧಾನಪಡಿಸಲು ಯತ್ನಿಸಿದರು. ಬಾಳಿನ ಸಂಜೆಗತ್ತಲಿನಲ್ಲಿ ನಾಗಮ್ಮ ನವರನ್ನು ದುಃಖವು ಬೆಂಕಿಯಂತೆ ದಹಿಸುತ್ತಿತ್ತು. ಬದುಕಿನಲ್ಲಿ ಕೊನೆಯ ವರೆಗೂ ಉಳಿಯುವ ದುಃಖ ಅದು.

ಶಾಮರಾಯರು ಆನಂದನಿಗೆ ಆಪತ್ತಿನಲ್ಲಿ ಬಹಳ ಸಹಾಯಕರಾದರು. ಆನಂದ ಅವರಿಗೆ ಎಂದಿಗೂ ಋಣಿಯಾದ. ಅವರ ನೆರವಿನಿಂದ ಉತ್ತರಕ್ರಿಯೆ ಗಳೆಲ್ಲ ಸಕ್ರಮವಾಗಿ ನಡೆದುಹೋದವು. ಎಲ್ಲರೂ ಊರಿಗೆ ಹೊರಡುವ ದಿನ ಬಂದಿತು.

ಇತ್ತ ಪದ್ಮ ತಾಯಾಗುವ ದಿನ ಹತ್ತಿರವಾಗಿತ್ತು. ಅವಳನ್ನು ದೇವನ ಹಳ್ಳಿಗೆ ಕರೆದುಕೊಂಡುಹೋಗಲು ನಾಣಿ ಆತುರನಾಗಿದ್ದ. ಸಂಪಿಗೆಯನ್ನು ಬಿಟ್ಟರೆ ನಾಗಮ್ಮನವರ ಶೋಕ ಸ್ವಲ್ಪವಾದರೂ ತಗ್ಗಬಹುದೆಂದು ಆನಂದ ಊಹಿಸಿದ. ಈ ಕಾರಣಗಳಿಂದ ರಂಗರಾಯರ ಅಂತ್ಯಕರ್ಮಗಳು ಮುಗಿದ

ಎರಡೇ ದಿನದಲ್ಲಿ ನಾಣಿ, ಪದ್ಮ ದೇವನಹಳ್ಳಿಗೆ ಪ್ರಯಾಣಮಾಡಿದರು. ಆನಂದ, ಸರೋಜ, ವೇಣು ಮತ್ತು ನಾಗಮ್ಮ ಬೆಂಗಳೂರಿಗೆ ಹೊರಟುಹೋದರು.

ನಾಗಮ್ಮನವರನ್ನು ಬೆಂಗಳೂರಿಗೆ ಹೊರಡಿಸಲು ಆನಂದ ಪಟ್ಟ ಶ್ರಮ ಅಷ್ಟಿಷ್ಟಲ್ಲ.

" ನನ್ನ ಅಂತ್ಯಕರ್ಮಗಳನ್ನು ಮುಗಿಸಿಕೊಂಡು ಎಲ್ಲರೂ ಸಂಪಿಗೆಯನ್ನು ಬಿಟ್ಟರಾಯಿತು " ಎಂದು ಗೋಳಾಡಿದರು. ಕೊನೆಗೆ ಶಾಮರಾಯರು ಅವರನ್ನು ಗದರಿಸಬೇಕಾಯಿತು.

ಸಂಪಿಗೆಯ ಮನೆ ಬರಿದಾಯಿತು.

## ೬೯

ನಾಣಿಯ ಮನೆಯನ್ನು ಈಗ ಒಂದು ಹೊಸ ಜೀವ ಬೆಳಗಿದೆ. ಮಗುವಿನ ಹೆಸರು ರಮಾ. ವೆಂಕಮ್ಮನವರು ಮೊಮ್ಮಗಳ ಮಮತೆಯಲ್ಲಿ ಪ್ರಪಂಚವನ್ನೇ ಮರೆತುಬಿಟ್ಟಿದ್ದಾರೆ. ನಾಣಿ–ಪದ್ಮರ ಜೀವನದಲ್ಲಿ ವಸಂತ ಮೂಡಿದೆ.

ರಂಗರಾಯರು ದಿವಂಗತರಾಗಿ ಒಂದು ವರ್ಷ ಉರುಳುತ್ತಿದೆ. ಅವರ ವಾರ್ಷಿಕ ಕರ್ಮಗಳನ್ನು ಬೆಂಗಳೂರಿನಲ್ಲಿಯೇ ನಡೆಸಲು ಆನಂದ ನಿಶ್ಚಯಿಸಿದ್ದಾನೆ.

ನಾಣಿ ಒಂದು ದಿವಸ ಮುಂಚಿತವಾಗಿ ಕುಟುಂಬದೊಡನೆ ಬೆಂಗಳೂರಿಗೆ ಬಂದ. ಶಾಮರಾಯರೂ ಸಂಪಿಗೆಯಿಂದ ಬಂದರು. ಮತ್ತೆ ರಂಗರಾಯರ ತ್ಯಾಗಮಯ ಜೀವನದ ನೆನಪು ಎಲ್ಲರ ಮನಗಳಲ್ಲಿಯೂ ದುಃಖವನ್ನುಕ್ಕಿಸಿತು. ಆದರೆ ಕಾಲ ಮನಸ್ಸಿಗಾಗಿದ್ದ ಗಾಯವನ್ನು ಬಹುಮಟ್ಟಿಗೆ ಮಾಗಿಸಿತ್ತು. ನಾಗಮ್ಮನವರನ್ನು ಸಮಾಧಾನಪಡಿಸುವುದು ಮಾತ್ರ ಕಷ್ಟವಾಯಿತು. ಕೊರಗಿ ಕೊರಗಿ ಅವರು ಸಜೀವ ಅಸ್ಥಿಪಂಜರವಾಗಿದ್ದರು.

ಕಾರ್ಯ ಮುಗಿಯಿತು. ಸಂಪಿಗೆಯಲ್ಲಿ ಕೆಲಸಗಳಿದ್ದುದರಿಂದ ಶಾಮರಾಯರು ಬೆಳಗಿನ ಗಾಡಿಗೆ ಹೊರಟುಹೋದರು. ಸರೋಜಳ ಒತ್ತಾಯದಿಂದ ಪದ್ಮ ಬೆಂಗಳೂರಿನಲ್ಲಿಯೇ ಎರಡು ದಿನ ನಿಂತಳು. ರಮಾಳ ಚೆಲುವನ್ನು ಕಂಡು ಸರೋಜ ಹಿಗ್ಗಿಹೋದಳು.

" ಈ ಸಲ ನಿನಗೆ ರಮಾಗಿಂತ ಚೆಲುವೆಯಾದ ಮಗಳು ಹುಟ್ಟುತ್ತಾಳೆ "

ಎಂದು ಪದ್ಮ ನಗುನಗುತ್ತಾ ಹೇಳಿದಳು. ಸರೋಜ ಎರಡನೆಯ ಬಾರಿ ತಾಯಾಗುವವಳಿದ್ದಳು.

ಎರಡು ದಿನ ಸಂತೋಷವಾಗಿದ್ದು ನಾಣಿ, ಪದ್ಮ ಮತ್ತು ರಮಾ ದೇವನ ಹಳ್ಳಿಗೆ ಹೊರಟುಹೋದರು.

ನಾಗಮ್ಮನವರ ಶಕ್ತಿ ಬಹಳ ಕುಂದಿತು. ಊಟವನ್ನು ಬಿಟ್ಟರು. ರಾತ್ರಿಯಲ್ಲಿ ನಿದ್ರೆಹತ್ತುತ್ತಿರಲಿಲ್ಲ. ತಮ್ಮ ಉಳಿದ ಬದುಕನ್ನೆಲ್ಲ ಅರೆ ಎಚ್ಚರದಲ್ಲಿ ಕಳೆಯುತ್ತಿದ್ದರು. ಅವರನ್ನು ನೋಡಿಕೊಳ್ಳಲು ಆನಂದ ಒಬ್ಬ ಸೇವಕಿಯನ್ನೇ ಗೊತ್ತುಮಾಡಬೇಕಾಯಿತು.

"ಸಾವಿಗೂ ನಾನು ಬೇಡವಾದೆ" ಎಂದು ಎಚ್ಚರವಿದ್ದಾಗ ಕೊರಗುತ್ತ ಇದ್ದರು.

ಹಾಗೆ ಅವರು ಹೆಚ್ಚು ದಿನ ಕೊರಗಲಿಲ್ಲ. ಬಹುಶಃ ಸಾವಿಗೂ ಅವರ ಮೇಲೆ ಕನಿಕರ ಹುಟ್ಟಿರಬಹುದು. ಒಂದು ದಿನ ಬೆಳಗಿನ ಜಾವ ಅವರು ತೀರಿಕೊಂಡರು. ಅವರ ಅಂತ್ಯಕರ್ಮಗಳೂ ನಡೆದುಹೋದವು.

"ಇನ್ನು ಮುಂದೆ ನಾನು ತಬ್ಬಲಿಯಾದೆ" ಎಂದು ಆನಂದ ಒಂದು ಬಾರಿ ಮಗುವಿನಂತೆ ಅತ್ತುಬಿಟ್ಟ. ಶಾಮರಾಯರು ಅವನನ್ನು ಸಮಾಧಾನಪಡಿಸಿದರು.

ಆನಂದ ಕೊಟಡಿಯಲ್ಲಿ ಕುಳಿತುಕೊಂಡು ಬಹಳ ಕಾಲ ಆಲೋಚನಾಪರನಾಗುವನು. ತನ್ನ ತಂದೆತಾಯಿಗಳ ತ್ಯಾಗಮಯ ಜೀವನದ ದಾರುಣ ಚಿತ್ರಗಳು ನೆನಪಿನ ತೆರೆಯ ಮೇಲೆ ಜಾರಿಹೋಗುವುವು. ಅವನ ಕರುಳು ಉಮ್ಮಳಿಸಿ ಕಣ್ಣನ್ನು ತೇವ ಮಾಡುವುದು. ಸರೋಜ ಅವನನ್ನು ಆ ಸ್ಥಿತಿಯಲ್ಲಿ ಕಂಡರೆ ತಕ್ಷಣ ನಗುವನ್ನು ಬೀರುವನು. ದಿನ ತುಂಬಿರುವ ಹೆಂಡತಿಯ ಮನಸ್ಸು ವ್ಯಾಕುಲಗೊಂಡೀತೆಂದು ಎಚ್ಚರಗೊಳ್ಳುತ್ತಾನೆ. ತಾನೇ ಅವಳಿಗೆ ಸಮಾಧಾನದ ಮಾತನ್ನು ಹೇಳುತ್ತಾನೆ.

ಎರಡು ತಿಂಗಳು ಕಳೆಯಿತು. ಆನಂದನ ಮನೆಯಲ್ಲಿ ಮತ್ತೊಂದು ಶುಭ ಸಂದರ್ಭ. ಜೀವನದಲ್ಲಿ ಮತ್ತೊಂದು ಆನಂದ. ಪದ್ಮ ನುಡಿದ ಭವಿಷ್ಯವಾಣಿ ಸುಳ್ಳಾಗಲಿಲ್ಲ. ಸರೋಜ ಚೆಲುವಾದ ಹೆಣ್ಣನ್ನು ಹಡೆದಳು. ಕಮಲಮ್ಮನವರ ಇಷ್ಟದಂತೆ ಮಗುವನ್ನು ಉಮಾ ಎಂದು ಕರೆದರು.

## ೭೦

ಕಾಲಚಕ್ರ ಸಂತತವಾಗಿ ಉರುಳಿತು. ಆ ಚಕ್ರದೊಂದಿಗೆ ಆನಂದನ ಬಾಳ ಚಕ್ರವೂ ಮುಂದೆ ಮುಂದೆ ಉರುಳಿತು. ಕಾಲಕ್ಕೆ ಕಡಿವಾಣವನ್ನು ಹಾಕುವವರು ಯಾರು? ಮರಗಳು ಚಿಗುರುವುವು. ಚಿಗುರೆಲೆಗಳು ಹಸುರು ಮೂಡಿ ಹಣ್ಣಾಗುವುವು. ಹಣ್ಣೆಲೆಗಳು ತೊಟ್ಟು ಕಳಚಿ ಬಿದ್ದು ಹೋಗುವುವು. ಮತ್ತೆ ಚಿಗುರೆಲೆಗಳು. ಪ್ರಕೃತಿವ್ಯಾಪಾರಗಳು ಚಕ್ರಾಕಾರವಾಗಿ ನಿರಂತರ ನಡೆಯುವುವು. ಅವೆಲ್ಲ ಕಾಲನ ಹೆಜ್ಜೆಗುರುತುಗಳು.

ಹತ್ತು ವರ್ಷಗಳು ಬಹಳ ಉದ್ದ ಕಾಲ. ಅಷ್ಟು ಉದ್ದವಾದ ಕಾಲದಲ್ಲಿ ಮಾನವನ ಬಾಳಿನಲ್ಲಿ ಎಣಿಕೆಗೆ ಸಿಗದ ಬದಲಾವಣೆಗಳಾಗಬಹುದು. ವ್ಯಕ್ತಿಯ ದೃಷ್ಟಿಕೋನವೇ ಮಾರ್ಪಡಬಹುದು. ಅನುಭವಗಳ ಮೂಸೆಯಲ್ಲಿ ಅವನು ಜೀವನದ ಒಂದು ಹೊಸ ಮೀಮಾಂಸೆಯನ್ನೇ ಕಂಡುಕೊಳ್ಳಬಹುದು. ಶಾಂತವಾದ ಕೊಳದಲ್ಲಿ ನಿಂತಿರುವ ತಿಳಿನೀರಿನಂತೆ ಮನಸ್ಸು ಶುಭ್ರವಾಗಬಹುದು.

ಆನಂದನ ಜೀವನದಲ್ಲಿ ನಾಲ್ಕು ದಿನ ನಲಿವನ್ನುಕ್ಕಿಸಿದ ಕೆಲವರು ಈಗ ಕಣ್ಮರೆಯಾಗಿದ್ದಾರೆ. ಅವರ ನೆನಪೂ ಈಗ ಸ್ವಲ್ಪ ಮಸಕುಮಸಕು. ಆನಂದ ಬಾಳಿನ ಕಹಿ–ಸಿಹಿಗಳೆರಡನ್ನೂ ಉಂಡಿದ್ದಾನೆ. ಇಷ್ಟ–ಅನಿಷ್ಟಗಳು ನಡೆದು ಹೋಗಿವೆ. ಜೀವನ ಯಾವಾಗಲೂ ದ್ವಂದ್ವಗಳ ತಾಕಲಾಟದಲ್ಲಿಯೇ ಮುಂದೆ ಗಾಣಬೇಕು. ವಿವಿಧ ಶಕ್ತಿಗಳ ಕದನಕ್ಷೇತ್ರ ಈ ಜೀವನ. ಅದನ್ನು ಯಾವ ಸೂತ್ರಕ್ಕೂ ಒಳಪಡಿಸುವಂತಿಲ್ಲ. ಬುದ್ಧಿ ಬಿಡಿಸಲಾರದ ಒಗಟಿ ಅದೊಂದು. ಬುದ್ಧಿವಂತಿಕೆಯಿರುವುದು ಪ್ರಯತ್ನಶೀಲತೆಯಲ್ಲಿ, ಅನಿವಾರ್ಯವಾದ ಆಗು–ಹೋಗುಗಳನ್ನು ಇದಿರಿಸಲು ಬೇಕಾದ ಸಮಾಧಾನಚಿತ್ತತೆಯಲ್ಲಿ.

ಅನಿಷ್ಟವೆಂದು ಭಾವಿಸಿದ್ದ ಎಷ್ಟೋ ವಿಷಯಗಳಲ್ಲಿ ಆನಂದ ರುಚಿಯನ್ನು ಕಂಡುಕೊಂಡಿದ್ದಾನೆ. ಭವಿಷ್ಯ ನಮ್ಮ ನಕ್ಷೆಯಂತಲ್ಲ. ಮನುಷ್ಯನಿಗೂ ಮೀರಿದ ಶಕ್ತಿಯೊಂದರ ಕೈವಾಡ ಜೀವನದ ಹೆಜ್ಜೆಹೆಜ್ಜೆಯಲ್ಲಿಯೂ ಕಂಡುಬರುತ್ತದೆ. ಬಾಳ ದೋಣಿ ಸಾಗುತ್ತಿರುವಾಗ ಅದೃಷ್ಟ ಊನವಾದರೆ ಮಾರ್ಗಮಧ್ಯದಲ್ಲಿಯೆ ಮುಳುಗಿಹೋಗಬಹುದು, ಅಲೆಗಳ ಹೊಡೆತಕ್ಕೆ ಸಿಕ್ಕಿ ನುಚ್ಚುನೂರಾಗಬಹುದು, ಇಲ್ಲವೆ ಚಂಡಮಾರುತದ ತೋಳಿಗೆ ಸಿಕ್ಕಿಕೊಂಡು ನಲಿವು–ಗೆಲವುಗಳನ್ನು ಕೊಟ್ಟವರೆಲ್ಲರಿಂದ ದೂರವಾಗಿ ಸಾವಿರಾರು ಮೈಲಿಗಳಾಚೆ ಬೀಳಬಹುದು.

ಕಿಂಚಿತ್ತು ಆಸೆಯುಳಿದಿದ್ದರೂ ದೋಣಿ ತೇಲಿಕೊಂಡು ಹೋಗಲೇಬೇಕು, ದಡವನ್ನು ಮುಟ್ಟಲೇಬೇಕು ಎಂಬ ಕಿಚ್ಚಿಲ್ಲದಿದ್ದರೆ ಅಂಬಿಗತನವೆಲ್ಲಿಯದು ?

ಫೆಬ್ರವರಿ ತಿಂಗಳು ಕಾಲಿಡಲಿದೆ. ಅದೇ ತಾನೆ ಕಾಲೇಜಿನಿಂದ ಹಿಂದಿರುಗಿ ಬಂದ ಆನಂದ ಕಾಫಿ ಕುಡಿಯುತ್ತ ಕುಳಿತಿದ್ದಾನೆ. ಸರೋಜ ಅವನ ಪಕ್ಕದಲ್ಲಿ ಜಡೆಹಾಕಿಕೊಳ್ಳುತ್ತ ನಿಂತಿದ್ದಾಳೆ.

" ಇವತ್ತಿಗೆ ಇಪ್ಪತ್ತು ವರ್ಷಗಳಾದವು ನಮ್ಮ ಮದುವೆಯಾಗಿ, ನೆನಪು ಇದೆಯೆ, ಸರೋಜಾ ? "

" ನೀವು ತಮಾಷೆ ಮಾಡುತ್ತೀರೋ ಏನೋ, ನಾನು ಹೇಳಿದರೆ."

" ಏನು ತಮಾಷೆ, ಸರೋಜಾ ? ಪೂರ್ತಿ ಹೇಳು."

" ನನಗೆ ಇವತ್ತು ಎದ್ದಾಗಿನಿಂದ ಏನೋ ಉಲ್ಲಾಸ. ಈ ಉಲ್ಲಾಸಕ್ಕೆ ಕಾರಣ ತಿಳಿಯಲಿಲ್ಲ. ಈಗ ನೀವು ಹೇಳಿದ ಮೇಲೆ ಅದಕ್ಕೇ ಎಂದು ಗೊತ್ತಾಯಿತು."

" ಹೃದಯದಲ್ಲಿರುವುದು ಒಂದೊಂದು ಸಲ ಮನಸ್ಸಿಗೇ ಗೊತ್ತಾಗುವುದಿಲ್ಲ."

" ಹೌದು " ಎಂದು ಸರೋಜ ನಕ್ಕಳು.

ಆನಂದನ ಮನಸ್ಸು ಮತ್ತೆ ಎಲ್ಲಿಯೋ ಅಲೆದಾಡುತ್ತಿತ್ತು.

" ಏಪ್ರಿಲ್ ಒಂದರಿಂದ ಬೇಸಗೆ ರಜ ಆರಂಭವಾಗುತ್ತೆ, ಸರೋಜ " ಎಂದು ಎಚ್ಚರ ತಿಳಿದವನಂತೆ ಮಾತನ್ನು ಮುಂದುವರಿಸಿದ.

" ರಜಾದಲ್ಲಿ ಏನು ಪ್ರೋಗ್ರಾಂ ? "

" ಒಂದೇ ಕಡೆಯಲ್ಲಿ ಅಂಟಿ ಕುಳಿತಿರುವುದು ನನಗೆ ಬೇಸರವಾಗಿದೆ. ಹೊರಗೆ ಸುತ್ತಾಡಿಕೊಂಡು ಬರೋಣ. ನೀನು ಏನು ಹೇಳುತ್ತಿ ? "

" ಎಲ್ಲಿಗೆ ಎಂದು ನಿಮ್ಮ ಯೋಚನೆ ? "

" ಮದರಾಸು, ಕಲ್ಕತ್ತ, ಆಗ್ರಾ, ಕಾಶಿ—ಹಿಂದಿರುಗುವಾಗ ಅಜಂತ, ಎಲ್ಲೋರ, ಮಂತ್ರಾಲಯ, ರಾಮೇಶ್ವರ."

" ಹೊಸಲು ದಾಟೋಣ ಎಂದರೆ ಬೆಟ್ಟವನ್ನೇ ಹಾರೋಣ ಎನ್ನುತ್ತೀರಿ."

ಆನಂದ ನಕ್ಕ.

" ನನಗೂ ಒಂದೇ ಊರಿನಲ್ಲಿದ್ದು ಬೇಸರಿಕೆ. ಸ್ವಲ್ಪ ದೇಶ ಸುತ್ತೋಣ."

“ ಅಪ್ಪ ಕಾಶೀಯಾತ್ರೆ ಮಾಡಬೇಕು ಎಂದು ಆಸೆಪಟ್ಟಿದ್ದರು. ಅದು ಆಗದೇಹೋಯಿತು. ನಾವಾದರೂ ಅವರ ಇಷ್ಟ ಪೂರ್ತಿ ಮಾಡೋಣ.”

ಅಷ್ಟು ಹೊತ್ತಿಗೆ ಹೊರಗೆ ಕಾರಿನ ಶಬ್ದವಾಯಿತು. ಸುಂದರರಾಯರೂ ಕಮಲಮ್ಮನವರೂ ಮಗಳನ್ನು ನೋಡಲು ಬಂದಿದ್ದರು. ಮಾತು ಸಾಗಿತು. ಪ್ರಾಸಂಗಿಕವಾಗಿ ಆನಂದ ತನ್ನ ಪ್ರವಾಸದ ವಿಷಯವನ್ನೆತ್ತಿದ. ತಮ್ಮೊಡನೆ ಹೊರಡುವಂತೆ ಸುಂದರರಾಯರನ್ನು ಆಹ್ವಾನಿಸಿದ.

“ ನನ್ನ ರಕ್ತದ ಒತ್ತಡ ಇನ್ನೂ ಸರಿಯಾಗಿಲ್ಲ. ಅಷ್ಟು ದೀರ್ಘವಾದ ಪ್ರಯಾಣವನ್ನು ನಾನು ತಡೆಯಲಾರೆ. ನೀವು ಅಗತ್ಯ ಹೋಗಿ ಬನ್ನಿ ” ಎಂದು ಸಂತೋಷವನ್ನು ಸೂಚಿಸಿದರು. ಕಮಲಮ್ಮನವರು ಅವರ ಪ್ರವಾಸದ ಸಮಾಚಾರವನ್ನು ತಿಳಿದು ಹಿಗ್ಗಿದರು.

ಗಂಟೆ ಎಂಟೂವರೆಯಾಯಿತು. ಸುಂದರರಾಯರು ಹೊರಡಲೆದ್ದರು. ಆನಂದ, ಸರೋಜ ಅವರೊಡನೆ ಕಾರಿನವರೆಗೆ ಹೋಗಿಬಂದರು.

ಏಪ್ರಿಲ್ ಬಂದಿತು. ಮೊದಲನೆಯ ದಿವಸವೇ ಆನಂದ, ಸರೋಜ ಪೂರ್ವ ಸಿದ್ಧತೆಗಳನ್ನೆಲ್ಲ ಮಾಡಿಕೊಂಡರು. ವೇಣು ಮತ್ತು ಉಮಾ ಇಬ್ಬರ ಉತ್ಸಾಹಕ್ಕೆ ಪಾರವಿರಲಿಲ್ಲ. ಅವರು ಮುಂದಿನ ಬೆಳಗನ್ನು ಎದುರುನೋಡುವುದರಲ್ಲಿ ರಾತ್ರಿ ನಿದ್ದೆಯನ್ನೇ ಮಾಡಲಿಲ್ಲ.

ಬೆಳಗ್ಗೆ ಎಂಟೂವರೆ ಗಂಟೆಗೆ ಆನಂದ, ಸರೋಜ, ವೇಣು ಮತ್ತು ಉಮಾ ರೈಲ್ವೆ ನಿಲ್ದಾಣದಲ್ಲಿ ಸಿದ್ಧರಾದರು. ಸುಂದರರಾಯರೂ ಕಮಲಮ್ಮನವರೂ ಅಲ್ಲಿಗೆ ಬಂದರು. ಇನ್ನು ಮೂರು ನಾಲ್ಕು ವಾರಗಳ ಕಾಲ ಮೊಮ್ಮಕ್ಕಳನ್ನು ನೋಡಲಾಗುವುದಿಲ್ಲವೆಂದು ಅವರಿಗೆ ವ್ಯಾಕುಲ. ಆದರೂ ಅವರಿಗೆ ಏನೋ ಒಂದು ಅವ್ಯಕ್ತ ಆನಂದ. ಮೊಮ್ಮಕ್ಕಳನ್ನು ಎಷ್ಟು ಮುತ್ತಿಟ್ಟರೂ ಹೃದಯಕ್ಕೆ ತೃಪ್ತಿಯಿಲ್ಲ.

ಗಾರ್ಡ್ ಸೀಟಿಯನ್ನು ಊದಿದ. ರೈಲು ಸರಿಯಿತು. ಮುದುಕರಿಬ್ಬರೂ ರೈಲು ಕಣ್ಮರೆಯಾಗುವವರೆಗೂ ಕತ್ತನ್ನು ಬೇರೆ ಕಡೆ ತಿರುಗಿಸಲಿಲ್ಲ.

ಮದರಾಸಿನಲ್ಲಿ ಎರಡು ದಿನ ಉಳಿದರು. ತಿರುವಳ್ಳಿಕೇಣಿಯ ಮರಳು ದಂಡೆ, ಪಾರ್ಥಸಾರಥಿಯ ದೇವಸ್ಥಾನ, ಅಡ್ಯಾರ್ ರಾಮಕೃಷ್ಣಾಶ್ರಮ— ಅನೇಕ ಪ್ರೇಕ್ಷಣೀಯ ಸ್ಥಳಗಳಲ್ಲಿ ಸುತ್ತಾಡಿದರು. ಕಲ್ಕತ್ತೆಗೆ ಪ್ರಯಾಣವನ್ನು ಮುಂದುವರಿಸಿದರು.

ಕಲ್ಕತ್ತೆಯಲ್ಲಿ ವಿಕ್ಟೋರಿಯ ಮೆಮೋರಿಯಲ್ ಹಾಲ್, ಹೌರಾ ಸೇತುವೆ—ಎಲ್ಲ ಕಡೆಗಳಲ್ಲಿಯೂ ಸುತ್ತಾಡಿಯಾಯಿತು. ಅಲ್ಲಿ ಎರಡು ದಿನ ಕಳೆಯಿತು. ಅನಂತರ ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಹೊರಟರು. ಕಾಳಿಕಾ ದೇವಾಲಯವನ್ನು ಹೊಕ್ಕರು. ದೇವಮಾನವರಾದ ಶ್ರೀ ರಾಮಕೃಷ್ಣ ಪರಮ ಹಂಸರ ಆರಾಧ್ಯದೈವ ಮಹಾಕಾಳಿಯ ದರ್ಶನವನ್ನು ಮಾಡಿದರು. ಆ ವಿಗ್ರಹದ ತೇಜಸ್ಸು ಹೃದಯವನ್ನು ನಡುಗಿಸುವಂತಿತ್ತು. ದೇವಿಗೆ ಪೂಜೆ, ಮಂಗಳಾರತಿ ನಡೆಯಿತು. ಘಂಟಾನಾದ ನಿಶ್ಶಬ್ದ ವಾತಾವರಣದಲ್ಲಿ ತಾನತಾನವಾಗಿ ತರಂಗ ಗಳನ್ನು ಹರಡಿತು. ಅನಂತರ ಪರಮಹಂಸರು, ಪೂಜ್ಯ ಮಾತೆಯವರು, ಸ್ವಾಮಿ ವಿವೇಕಾನಂದರು ತಪಸ್ಸು ಮಾಡುತ್ತಿದ್ದ ಸ್ಥಳಗಳನ್ನು ನೋಡಿದರು. ಅವರು ಬಳಸುತ್ತಿದ್ದ ವಸ್ತುಗಳನ್ನು ನೋಡಿದರು.

ಆಶ್ರಮದ ಶಾಂತ ವಾತಾವರಣದಲ್ಲಿ ಸಂಚರಿಸುತ್ತಿದ್ದಾಗ ಉಮಾ "ಅಪ್ಪಾ, ಅಲ್ಲಿ ನೋಡು, ಒಬ್ಬ ಸನ್ಯಾಸಿ ಏನೋ ಓದುತ್ತಾ ಕುಳಿತಿದ್ದಾನೆ" ಎಂದು ಬೆಟ್ಟುಮಾಡಿ ತೋರಿಸಿದಳು.

"'ಶ್' ಹಾಗೆ ಬೆಟ್ಟುಮಾಡಿ ತೋರಿಸಿ ಗಟ್ಟಿಯಾಗಿ ಕೂಗಬಾರದು. ಸನ್ಯಾಸಿ ಎನ್ನಬಾರದು, ಸ್ವಾಮೀಜಿ ಎನ್ನಬೇಕು" ಎಂದು ಸರೋಜ ತಿಳಿವಳಿಕೆ ಹೇಳಿದಳು.

ಆನಂದ ಮತ್ತೆ ಮತ್ತೆ ಆ ಸನ್ಯಾಸಿಯ ಕಡೆಗೆ ನೋಡಿದ. ಸನ್ಯಾಸಿಯ ಮುಖದ ಮೇಲೆ ಬೆಳೆದಿದ್ದ ಕೂದಲು ಒಳಗಿನಿಂದ ಚಿಮ್ಮುತ್ತಿದ್ದ ತೇಜಸ್ಸನ್ನು ಮರೆಮಾಡಿತ್ತು. ಅವರು ಕಾವಿಯನ್ನು ಧರಿಸಿದ್ದರು. ಮಂದಸ್ಮಿತ ಮುಖದ ಮೇಲೆ ಮಿಂಚಿನ ರೇಖೆಯಂತೆ ತಿಳಿನಗೆ. ದೂರದ ನೋಟಕ್ಕೆ ಆ ಸನ್ಯಾಸಿಯಲ್ಲಿ ಆನಂದನಿಗೆ ಪೂಜ್ಯಭಾವನೆಯುಂಟಾಯಿತು.

ಕಲ್ಕತ್ತೆಗೆ ಹಿಂದಿರುಗಿದರು.

ಮೂರನೆಯ ರಾತ್ರಿ ಕಾಶೀ ಪಟ್ಟಣಕ್ಕೆ ಪ್ರಯಾಣ ಬೆಳೆಸಲು ರೈಲು ಹತ್ತಿದರು. ರಾತ್ರಿಯ ಪ್ರಯಾಣ. ಕಾಲು ಚಾಚಿಕೊಳ್ಳುವುದಕ್ಕೆ ಅನುಕೂಲ ವಾಗಲೆಂದು ಆನಂದ ಸೆಕೆಂಡ್ ಕ್ಲಾಸಿನ ಟಿಕೆಟ್ಟನ್ನು ಕೊಂಡ. ಎಲ್ಲರೂ ರೈಲು ಹತ್ತಿ ಕುಳಿತರು.

"ಅಕೋ ಅಪ್ಪಾ, ನಿನ್ನೆ ನಾವು ಆಶ್ರಮದಲ್ಲಿ ನೋಡಿದ ಸ್ವಾಮೀಜಿ"

ಎಂದು ಉಮಾ ಬೆಟ್ಟುಮಾಡದೆ ಹೇಳಿದಳು.

ಆನಂದ ಕತ್ತನ್ನು ತಿರುಗಿಸಿ ಸ್ವಾಮೀಜಿಯನ್ನು ಗುರುತು ಹಚ್ಚಿದ. ತಾವು ಕುಳಿತಿದ್ದ ಬೋಗಿಗೇ ಬರುವಂತೆ ಹಿಂದಿಯಲ್ಲಿ ಅವರಿಗೆ ಹೇಳಿದ. ಅವರು ನಗುತ್ತ ಒಪ್ಪಿಕೊಂಡರು.

" ತಾವು ಎಲ್ಲಿಗೆ ? " ಎಂದು ಸ್ವಾಮೀಜಿ ಇಂಗ್ಲೀಷಿನಲ್ಲಿ ಮಾತನಾಡಿದರು.

" ಬನಾರಸ್‌ಗೆ ಹೊರಟಿದ್ದೇವೆ. ತಾವು ? "

" ನಾನೂ ಅಲ್ಲಿಗೇ."

" ಹಾಗಾದರೆ ನಮಗೆ ತಮ್ಮ ಜೊತೆಯಾಯಿತು."

" ನೀವು ಮೈಸೂರಿನವರೆಂದು ಕಾಣುತ್ತೀರಿ ? "

" ಹೌದು, ನಾವು ಮೈಸೂರಿನವರು."

ಸ್ವಾಮೀಜಿ ಉಮಾಳ ಕಡೆಗೆ ನೋಡಿ ಮುಗುಳ್ನಗೆ ನಕ್ಕರು.

" ಸ್ವಾಮೀಜಿಗೆ ನಮಸ್ಕಾರ ಮಾಡಿ " ಎಂದು ವೇಣು ಮತ್ತು ಉಮಾ ಇಬ್ಬರಿಗೂ ಆನಂದ ಹೇಳಿದ. ಅವರು ನಮಸ್ಕಾರ ಮಾಡಿದರು.

" ನೀನು ಯಾವ ಕ್ಲಾಸ್ ಓದುತ್ತಿದ್ದೀಯಮ್ಮಾ, ಉಮಾ ? " ಎಂದು ಸ್ವಾಮೀಜಿ ನಯವಾಗಿ ಕೇಳಿದರು, ಕನ್ನಡದಲ್ಲಿ.

" ನಾನು ಮಿಡಲ್ ಮೂರನೇ ಕ್ಲಾಸು, ವೇಣು ಹೈಸ್ಕೂಲ್ ಎರಡನೇ ಕ್ಲಾಸು."

ಸ್ವಾಮೀಜಿಗೆ ಕನ್ನಡ ಬರುತ್ತದೆಂದು ತಿಳಿದು ಆನಂದನಿಗೆ ಆಶ್ಚರ್ಯ ವಾಯಿತು.

" ತಮಗೆ ಕನ್ನಡ ಬರುತ್ತದೆಯೋ, ಸ್ವಾಮೀಜಿ ? " ಎಂದು ಕೇಳಿದ.

" ನಾನಾ ಭಾಷೆಗಳ ಜನರು ಆಶ್ರಮಗಳಿಗೆ ಬಂದುಹೋಗುತ್ತಾರೆ. ಅದರಿಂದ ಎಲ್ಲ ಭಾಷೆಗಳ ಪರಿಚಯವೂ ಅಷ್ಟಷ್ಟಿದೆ."

ಬನಾರಸ್ ಸ್ಟೇಷನ್ನಿನಲ್ಲಿ ಎಲ್ಲರೂ ಇಳಿದರು. ಪ್ರಯಾಣದ ಅವಧಿಯಲ್ಲಿ ಆನಂದನಿಗೆ ಸ್ವಾಮೀಜಿಯವರ ಗಾಢ ಪರಿಚಯವಾಗಿದ್ದಿತು. ಸ್ಟೇಷನ್ನಿನಿಂದ ಸುಮಾರು ನಾಲ್ಕು ಮೈಲಿ ದೂರದ ಮೈಸೂರು ಛತ್ರದಲ್ಲಿ ಆನಂದ ಸಾಮಾನನ್ನು ಇಳಿಸಿದ. ತಾವು ಹೊರಡುವುದಾಗಿ ಸ್ವಾಮೀಜಿ ಅವನಿಗೆ ತಿಳಿಸಿದರು.

" ಎಷ್ಟು ದಿನ ತಾವು ಈ ಪಟ್ಟಣದಲ್ಲಿರುತ್ತೀರಿ, ಸ್ವಾಮೀಜಿ ? " ಎಂದು ಆನಂದ ಕೇಳಿದ.

" ಹೇಳುವ ಹಾಗಿಲ್ಲ. ನೀವು ? "

" ನಾವು ಮೂರು ದಿನ ಇರುತ್ತೇವೆ. ಭಾನುವಾರ ಬೆಳಗಿನ ರೈಲಿಗೆ ಹೊರಡುತ್ತೇವೆ. ಪುನಃ ನಾನು ತಮ್ಮನ್ನು ಎಲ್ಲಿ ದರ್ಶನಮಾಡಬಹುದು ? "

" ನನಗೆ ವಿಳಾಸ ಯಾವುದೂ ಇಲ್ಲ. ನಾನೇ ಬಂದು ಇನ್ನೊಂದು ಸಲ ನಿಮ್ಮನ್ನು ನೋಡುತ್ತೇನೆ " ಎಂದು ಹೇಳಿ ಹೊರಟೇಹೋದರು.

ಸ್ವಾಮೀಜಿ ಕಾಶೀ ಪಟ್ಟಣದಲ್ಲಿ ಎಲ್ಲಿ ವಾಸಮಾಡುತ್ತಾರೆ, ಯಾವುದಾದರೂ ಆಶ್ರಮದಲ್ಲಿರಬಹುದೇ ಎಂಬ ಯಾವ ವಿಚಾರವೂ ಆನಂದನಿಗೆ ತಿಳಿಯಲಿಲ್ಲ.

ಮಾರನೆಯ ದಿನ ಬೆಳಗ್ಗೆ ಗಂಗಾಸ್ನಾನ, ವಿಶ್ವೇಶ್ವರನ ದೇವಸ್ಥಾನದಲ್ಲಿ ಅಭಿಷೇಕ, ಅನ್ನಪೂರ್ಣ, ಕಾಮಾಕ್ಷಿ ದೇವಸ್ಥಾನಗಳಲ್ಲಿ ಕುಂಕುಮಾರ್ಚನೆ ಎಲ್ಲವನ್ನೂ ಮುಗಿಸಿಕೊಂಡು ಆನಂದ, ಸರೋಜ ಮತ್ತು ಮಕ್ಕಳು ಛತ್ರಕ್ಕೆ ಹಿಂದಿರುಗಿದರು.

ಅದೇ ಸಂಜೆ ಆನಂದ ರಾಮಕೃಷ್ಣಾಶ್ರಮಕ್ಕೆ ಹೋದ. ಅಲ್ಲಿಯ ಒಪ್ಪ ಓರಣವನ್ನು ಕಂಡು ಬೆರಗಾದ. ದಕ್ಷಿಣೇಶ್ವರದ ಆಶ್ರಮದಲ್ಲಿ ಕಂಡ ಅದೇ ದಿವ್ಯವಾದ ಆವರಣ. ಅಲ್ಲಿಗೆ ಹೋಗುವಾಗ ಆನಂದನನ್ನು ಬೇರೆಯೊಂದು ಆಸೆಯೂ ಪ್ರೇರೇಪಿಸಿತ್ತು. ತನ್ನೊಡನೆ ಪ್ರಯಾಣ ಮಾಡಿ ಬಂದ ಸ್ವಾಮೀಜಿ ಬಹುಶಃ ಅಲ್ಲಿಯೇ ಇರಬಹುದೆಂಬುದೇ ಅವನ ಆಸೆ. ಆದರೆ ಅವರು ಅಲ್ಲಿ ಎಲ್ಲಿಯೂ ಕಾಣಲಿಲ್ಲ.

ಆನಂದ ಆಶ್ರಮದಿಂದ ಹಿಂದಿರುಗುತ್ತಿದ್ದ. ಆಗ ಕನ್ನಡದಲ್ಲಿಯೇ ಮಾತನಾಡುತ್ತಿದ್ದ ಇಬ್ಬರು ವಯೋವೃದ್ಧರನ್ನು ಸಂಧಿಸಿದ.

" ತಾವು ಯಾವ ಪ್ರಾಂತದವರು ? " ಎಂದು ಆನಂದನೇ ಒಬ್ಬರನ್ನು ಕೇಳಿದ.

ಕನ್ನಡ ಮಾತನ್ನು ಕೇಳಿ ಅವರಲ್ಲಿ ಏನೋ ವಿಶ್ವಾಸ ಮೂಡಿತು.

" ನಾವು ಧಾರವಾಡದವರು. ತಾವೂ ಕನ್ನಡಿಗರೇ ? "

" ಹೌದು, ನಾನು ಮೈಸೂರಿನವನು."

" ಇಷ್ಟು ದೂರದ ಪಟ್ಟಣದಲ್ಲಿ ನಾವು ಮೂವರು ಕನ್ನಡಿಗರು ಸೇರಿದೆವಲ್ಲಾ ! "

# ಉಷಾ ಸಾಹಿತ್ಯ ಮಾಲೆ, ಮೈಸೂರು

---

## ಕಾದಂಬರಿಗಳು

| | | | | | |
|---|---|---|---|---|---|
| ೧ | ಪಯಣದ ಹಾದಿಯಲ್ಲಿ | ಎಸ್. ಅನಂತನಾರಾಯಣ | ೧ | ೧೨ | ೦ |
| ೨ | ಕನಸಿನ ಮನೆ | ವಿ. ಎಂ. ಇನಾಂದಾರ್ | ೩ | ೪ | ೦ |
| ೩ | ಕುಮಾರ ಸಂಭವ | ಶ್ರೀರಂಗ | ೨ | ೧೨ | ೦ |
| ೪ | ಭಸ್ಮಾಸುರ | ಮಿರ್ಜಿ ಅಣ್ಣಾರಾಯ | ೧ | ೮ | ೦ |
| ೫ | ರೂಪದರ್ಶಿ | ಕೆ. ವಿ. ಅಯ್ಯರ್ | ೪ | ೦ | ೦ |
| ೬ | ಮಾಡಿ ಮಡಿದವರು | ಬಸವರಾಜ ಕಟ್ಟೀಮನಿ | ೩ | ೦ | ೦ |
| ೭ | ಮಂಜುಳಾ | ಕೃಷ್ಣಮೂರ್ತಿ ಪುರಾಣಿಕ | ೩ | ೦ | ೦ |
| ೮ | ಜೋಕಾಲಿಯ ಮೇಲೆ | ಮಾಲತೀಬಾಯಿ ಬೇಡೇಕರ್ | ೨ | ೮ | ೦ |
| ೯ | ಸ್ವರ್ಗದ ಬಾಗಿಲು | ವಿ. ಎಂ. ಇನಾಂದಾರ್ | ೨ | ೧೨ | ೦ |
| ೧೦ | ನಂಜಿನ ಸವಿ | ಎಂ. ವಿ. ಸೀತಾರಾಮಯ್ಯ | ೨ | ೪ | ೦ |
| ೧೧ | ಬಾಳುವೆಯ ಮಡಿಲಲ್ಲಿ | ಕೆ. ರಾಮಚಂದ್ರಾಚಾರ್ | ೩ | ೪ | ೦ |
| ೧೨ | ಅತ್ತಿಗೆ | ಎಸ್. ಅನಂತನಾರಾಯಣ | ೨ | ೪ | ೦ |
| ೧೩ | ಬಾಳ್ವೆ | ಡಾ. ಕೆ. ವಿ. ರಾವ್ | ೭ | ೦ | ೦ |
| ೧೪ | ಕಟ್ಟಿದ ಮನೆ | ವಿ. ಎಂ. ಇನಾಂದಾರ್ | ೪ | ೮ | ೦ |
| ೧೫ | ಮಸಣದ ಹೂವು | ತ. ರಾ. ಸು. | ೩ | ೧೨ | ೦ |
| ೧೬ | ಮುಳುಗು – ತೇಲು | ಬಿ. ವಿ. ದಕ್ಷಿಣಾಮೂರ್ತಿ | ೨ | ೦ | ೦ |

# ಬಿಡಿಮುತ್ತುಗಳು

| | | | | | |
|---|---|---|---|---|---|
| ೧ | ಕಾರಂತರ ಕಾದಂಬರಿಗಳು | ಎಸ್. ಅನಂತನಾರಾಯಣ | ೨ | ೦ | ೦ |
| ೨ | ಉಷಾ ಸ್ವಪ್ನ | ,, ,, | ೧ | ೦ | ೦ |
| ೩ | ಜಗಜ್ಜ್ಯೋತಿ ಬಸವೇಶ್ವರ | ಅ. ನ. ಕೃಷ್ಣರಾಯ | ೨ | ೦ | ೦ |
| ೪ | ಮೂರಾಬಟ್ಟೆ | ವಿ. ಎಂ. ಇನಾಂದಾರ್ | ೩ | ೧೫ | ೦ |
| ೫ | ನಟಸಾರ್ವಭೌಮ | ಅ. ನ. ಕೃಷ್ಣರಾಯ | ೧೦ | ೦ | ೦ |
| ೬ | ಐಸಾಕ್ ನ್ಯೂಟನ್ | ಎನ್. ಎಸ್. ವೀರಪ್ಪ | ೩ | ೦ | ೦ |
| ೭ | ದಿಲ್ಲಿಯ ಪತ್ರಗಳು | ಎಸ್. ವಿ. ಕೃಷ್ಣಮೂರ್ತಿರಾವ್ | ೧ | ೮ | ೦ |
| ೮ | ಅಭಿಜ್ಞಾನ ಶಾಕುಂತಲ | ವಿ. ಸೀತಾರಾಮಯ್ಯ | ೦ | ೧೨ | ೦ |
| ೯ | ಮನಸ್ವಿನಿ ಮತ್ತು ಇತರ ಕತೆಗಳು | ತಿ. ಜೇ. ಮಣಿ | ೨ | ೦ | ೦ |
| ೧೦ | ಅದ್ಭುತರಾಮಾಯಣಂ | ಎಸ್. ವಿ. ಪರಮೇಶ್ವರಭಟ್ಟ | ೨ | ೦ | ೦ |
| ೧೧ | ಸ್ವಾಮಿ ಮತ್ತು ಅವನ ಸ್ನೇಹಿತರು | ಆರ್. ಕೆ. ನಾರಾಯಣ್ | ೨ | ೮ | ೦ |
| ೧೨ | ನಡೆದು ಬಂದ ದಾರಿ | ಎಂ. ಗೋಪಾಲಕೃಷ್ಣ ಅಡಿಗ | ೧ | ೮ | ೦ |
| ೧೩ | ನಮ್ಮ ನಾಡು | ರೇ. ಸಿದ್ದಪ್ಪ | ೧ | ೮ | ೦ |
| ೧೪ | ಸುಖವಿಪ್ಲವ | ರಾ. ಸು. ಮಣಿ | ೧ | ೮ | ೦ |
| ೧೫ | ಮಾಟಗಾತಿ | ಆನಂದ | ೧ | ೪ | ೦ |
| ೧೬ | ಕನ್ನಡ ಸಾಹಿತ್ಯ ಚರಿತ್ರೆ | ರಂ. ಶ್ರೀ. ಮುಗಳಿ | ೮ | ೦ | ೦ |
| ೧೭ | ರೂಪಾರಾಧಕ | ಬೇರೆ ಬೇರೆ ಬರಹಗಾರರು | ೧ | ೦ | ೦ |

" ಒಳ್ಳೆಯ ಆಕಸ್ಮಿಕ."

" ಬೆಳಗ್ಗೆ ನೀವು ಇಲ್ಲಿಗೆ ಬಂದಿದ್ದಿರೇನು ? "

" ಇಲ್ಲವಲ್ಲಾ. ಏನು ಇಲ್ಲಿ, ಬೆಳಗ್ಗೆ ? "

" ಆತ್ಮಾನಂದ ಯೋಗಿಗಳು ಎಲ್ಲರಿಗೂ ದರ್ಶನ ಕೊಟ್ಟರಂತೆ."

" ಆತ್ಮಾನಂದ ಯೋಗಿಗಳು ಯಾರು ? "

" ಅವರ ವ್ಯಕ್ತಿಪರಿಚಯ ಯಾರಿಗೂ ಇರುವ ಹಾಗೆ ಕಾಣಲಿಲ್ಲ. ನಾನೂ ವಿಚಾರಿಸಿದೆ. ವರ್ಷಕ್ಕೊ, ಎರಡು ವರ್ಷಕ್ಕೊ ಒಂದು ಸಲ ಈ ಆಶ್ರಮದಲ್ಲಿ ದರ್ಶನ ಕೊಡುತ್ತಾರಂತೆ. ಈ ಸಲ ಅವರು ಬಂದದ್ದು ಮೂರು ವರ್ಷದ ಮೇಲಂತೆ."

" ಬೆಳಗ್ಗೆ ನೀವು ಅವರನ್ನು ನೋಡಿದಿರೇನು ? "

" ಇಲ್ಲ ಸ್ವಾಮಿ, ನನಗೂ ವಿಚಾರ ತಿಳಿಯಲಿಲ್ಲ. ಅಂತಹ ಮಹಾತ್ಮರ ದರ್ಶನ ಆಗಬೇಕಾದರೂ ಪುಣ್ಯ ಇರಬೇಕು."

ಆತ್ಮಾನಂದರು ಯಾರು ಎಂದು ಆನಂದನಿಗೆ ಬಗೆಹರಿಯದಾಯಿತು. ಅವನಿಗೆ ಒಂದು ಯೋಚನೆ ಹೊಳೆಯಿತು. ತನ್ನೊಡನೆ ಕಲ್ಕತ್ತೆಯಿಂದ ಬಂದ ಸ್ವಾಮೀಜಿಯೂ ಬಹುಶಃ ಆತ್ಮಾನಂದ ಯೋಗಿಗಳನ್ನು ನೋಡುವ ಉದ್ದೇಶ ದಿಂದಲೇ ಬಂದಿರಬಹುದೆಂದು ಆನಂದ ಊಹಿಸಿದ. ಆದರೆ ಅವರೇಕೆ ತಮ್ಮ ಉದ್ದೇಶವನ್ನು ತಿಳಿಸಿ ಯೋಗಿಗಳ ದರ್ಶನಲಾಭವನ್ನು ತಮಗೂ ದೊರಕಿಸಿ ಕೊಡಲಿಲ್ಲವೆಂದು ಪ್ರಶ್ನೆ ಹಾಕಿಕೊಂಡ. ಅಂತೂ ಮತ್ತೊಂದು ಬಾರಿ ಸ್ವಾಮೀಜಿ ತನಗೆ ಭೇಟಿಕೊಡುವುದಾಗಿ ಹೇಳಿದ್ದರು. ಅದು ಖಂಡಿತ. ಆಗ ಅವರನ್ನೇ ಕೇಳಿದರೆ ವಿಚಾರಗಳೆಲ್ಲ ಪೂರ್ತಿಯಾಗಿ ತಿಳಿಯುವುದೆಂದು ಆನಂದ ಸಮಾಧಾನಗೊಂಡ.

ಆನಂದ ಧಾರವಾಡದ ಗೆಳೆಯರನ್ನು ಮೈಸೂರು ಛತ್ರಕ್ಕೆ ಬರಹೇಳಿದ. ಆದರೆ ಅವರಿಗೆ ಬೇರೆ ಕೆಲಸಗಳಿದ್ದುದರಿಂದ ಅವರು ಹೊರಟುಹೋದರು.

ಆನಂದ ಸ್ವಾಮೀಜಿಗಾಗಿ ಎದುರು ನೋಡುತ್ತಲೇ ಇದ್ದ. ಆದರೆ ಅವರು ಬರಲೇ ಇಲ್ಲ. ಮತ್ತೊಂದು ಬಾರಿ ಅವರನ್ನು ನೋಡಿ ಅಪ್ಪಣೆಯನ್ನು ಪಡೆಯದೆ ಹೇಗೆ ಹೊರಡುವುದು ಎಂದು ಆನಂದ ಅತೃಪ್ತಿಗೊಂಡ. ಶನಿವಾರ ಸಂಜೆ ಅವರಿಗಾಗಿ ಕಾಶೀ ಪಟ್ಟಣವನ್ನೆಲ್ಲ ಸುತ್ತಾಡಿದ. ಅವರ ಭೇಟಿಯಾಗ

ಲಿಲ್ಲ. ಬಹುಶಃ ಏನೋ ತೊಂದರೆಯಾದುದರಿಂದ ಅವರು ಬರದೆ ಹೋದ ರೆಂದು ಆನಂದ ಭಾವಿಸಿದ.

ಭಾನುವಾರ ಬೆಳಗ್ಗೆ ಕುಟುಂಬದೊಂದಿಗೆ ಆನಂದ ನಿಲ್ದಾಣದಲ್ಲಿ ಹಾಜ ರಿದ್ದ. ಇಂಟರ್ ಕ್ಲಾಸ್ ಟಿಕೆಟ್ಟನ್ನು ಕೊಂಡ. ಎಲ್ಲರೂ ರೈಲನ್ನು ಹತ್ತಿದರು. ಜೀವನದಲ್ಲಿ ಸಾಮಾನ್ಯನಿಗೆ ಒಂದು ಬಾರಿ ಒದಗಬಹುದಾದ ಕಾಶೀಯಾತ್ರೆ ತನಗೆ ಲಭಿಸಿದುದಕ್ಕಾಗಿ ವಿಶ್ವೇಶ್ವರನನ್ನು ವಂದಿಸಿದ.

ರೈಲು ಇನ್ನು ಹತ್ತು ನಿಮಿಷದಲ್ಲಿ ಕಾಶೀ ಪಟ್ಟಣವನ್ನು ಬಿಡುತ್ತದೆ. ಆಗ ತನ್ನ ಬೋಗಿಯ ಕಡೆಗೇ ಬೇಗ ಬೇಗ ಹೆಜ್ಜೆಹಾಕುತ್ತಿದ್ದ ವ್ಯಕ್ತಿಯನ್ನು ಕಂಡು ಆನಂದ ದಂಗುಬಡಿದುಹೋದ. ಆ ವ್ಯಕ್ತಿ ಸ್ವಾಮೀಜಿ! ಆನಂದ ದಿಗ್ಗನೆದ್ದು ಸೀಟಿನಿಂದ ಇಳಿದುಬಂದ.

"ನಿಮ್ಮನ್ನು ಒಂದು ಸಲ ನೋಡುತ್ತೇನೆ ಎಂದಿದ್ದೆ. ನಿಲ್ದಾಣದಲ್ಲೇ ನೋಡಬೇಕಾಯಿತು."

"ನಮಗಾಗಿ ಎಷ್ಟು ಶ್ರಮ ತೆಗೆದುಕೊಂಡಿರಿ, ಸ್ವಾಮೀಜಿ! ಊರಿಗೆ ಹೊರಡುವುದಕ್ಕೆ ಮುಂಚೆ ತಮ್ಮ ದರ್ಶನ ಇಲ್ಲದೇ ಹೋಯಿತಲ್ಲಾ ಎಂದು ನಿನ್ನೆಯೆಲ್ಲ ನಾವು ಬಹಳ ವ್ಯಾಕುಲ ಪಟ್ಟೆವು. ನಮ್ಮ ಮೇಲೆ ನಿಮಗೆ ಎಷ್ಟೊಂದು ದಯೆ ಇದೆ! ನನ್ನ ಹೃದಯ ಈಗ ತುಂಬಿಹೋಯಿತು."

ನಿಮಿಷಗಳು ಸರಿದವು. ಆನಂದನಿಗೆ ಯಾವ ಮಾತನ್ನಾಡುವುದಕ್ಕೂ ಹೊತ್ತಿರಲಿಲ್ಲ. ಇನ್ನು ಅಗಲಲೇ ಬೇಕು. ಸ್ವಾಮೀಜಿ ವೇಣುಗೆ, ಉಮಾಗೆ ಒಂದೊಂದು ಕಾಗದದ ಪೊಟ್ಟಣವನ್ನು ಕೊಟ್ಟರು.

"ಇದೇನು, ಸ್ವಾಮೀಜಿ!" ಎಂದ ಆನಂದ.

"ಪಾಪ, ಮಕ್ಕಳು" ಎಂದರು ಸ್ವಾಮೀಜಿ.

"ನೀವು ದಕ್ಷಿಣಕ್ಕೆ ಬಂದರೆ ಖಂಡಿತ ಬೆಂಗಳೂರಿಗೆ ಬಂದು ಹೋಗ ಬೇಕು, ಸ್ವಾಮೀಜಿ."

ಸ್ವಾಮೀಜಿ ನಕ್ಕರು.

"ನೀವು ದಕ್ಷಿಣೇಶ್ವರಕ್ಕೆ ಬಂದಿದ್ದರ ಗುರುತಾಗಿ ಇದು ನಿಮ್ಮಲ್ಲಿರಲಿ" ಎಂದು ಒಂದು ರಟ್ಟಿನ ಪೆಟ್ಟಿಗೆಯನ್ನು ಆನಂದನ ಕೈಲಿರಿಸಿದರು.

ಆನಂದ ಪೆಟ್ಟಿಗೆಯನ್ನು ತೆಗೆದುಕೊಳ್ಳುತ್ತಿರುವಂತೆ ರೈಲು ಕೂಗುತ್ತಾ

ಮುಂದಕ್ಕುರುಳಿತು. ಎಲ್ಲರೂ ಸ್ವಾಮಿಾಜಿಗೆ ಒಳಗಿನಿಂದಲೇ ಕೈಮುಗಿದರು. ಸ್ಟೇಷನ್ ಕಣ್ಮರೆಯಾಗುವವರೆಗೂ ಆನಂದ ಕತ್ತನ್ನು ಒಳಗೆ ಎಳೆದುಕೊಳ್ಳ ಲಿಲ್ಲ. ಆಗ ಅವನ ಬಾಳಿನಲ್ಲಿ ಇನ್ನಿಲ್ಲದ ತೃಪ್ತಿ ಮೂಡಿದ್ದಿತು.

"ಅಪ್ಪಾ, ಸ್ವಾಮಿಾಜಿ ಕೊಟ್ಟಿದ್ದು ಪೇಡಾ ಪೆಪ್ಪರ್‌ಮೆಂಟ್" ಎಂದು ಉಮಾ ಕುಣಿದಾಡಿದಳು.

"ಎಲ್ಲಿ ಕೊಡಿ ಆ ಪೆಟ್ಟಿಗೆ, ನೋಡೋಣ" ಎಂದು ಸರೋಜ ಪೆಟ್ಟಿಗೆ ಯನ್ನು ತೆಗೆದಳು.

ಒಳಗೆ ಸುಂದರವಾದ ಮೂರು ದಂತದ ವಿಗ್ರಹಗಳು—ಶ್ರೀರಾಮಕೃಷ್ಣ ಪರಮಹಂಸ, ಶ್ರೀ ಶಾರದಾಮಣಿದೇವಿ, ಸ್ವಾಮಿ ವಿವೇಕಾನಂದ. ಸರೋಜ, ಮಕ್ಕಳು ಕಣ್ಣರಳಿಸಿಕೊಂಡು ನೋಡಿದರು. ಆನಂದನಿಗೆ ಭಕ್ತಿಪೂರಿತ ಹರ್ಷ.

ವಿಗ್ರಹಗಳನ್ನು ಹತ್ತಿಯಲ್ಲಿ ಸುತ್ತಲಾಗಿತ್ತು. ಪೆಟ್ಟಿಗೆಯ ತಳದಲ್ಲಿ ಒಂದು ತಿಳಿ ನೀಲಿಯ ಕಾಗದ. ಆನಂದ ಅದನ್ನು ಬಿಚ್ಚಿನೋಡುತ್ತಾನೆ, ಎಲ್ಲಿಯೋ ಎಂದೋ ಪರಿಚಿತವಾದ ಹಸ್ತಾಕ್ಷರ! ಪತ್ರ ಕನ್ನಡದಲ್ಲಿತ್ತು.

ಪ್ರಿಯ ಮಿತ್ರ ಆನಂದ,

ಈ ಪತ್ರವನ್ನೋದಿ ಕೆಳಗಿಡುವವರೆಗೂ ಇದರ ಕರ್ತೃ ಯಾರೆಂದು ನಿನಗೆ ತಿಳಿಯಲಾರದು. ನಿನ್ನನ್ನು ನಾನು ದಕ್ಷಿಣೇಶ್ವರದಲ್ಲಿಯೇ ಗುರು ತಿಸಿದೆ. ಕಲ್ಕತ್ತೆಯಿಂದ ನಿನ್ನ ಜೊತೆಯಲ್ಲಿಯೇ ಕಾಶೀ ಪಟ್ಟಣಕ್ಕೆ ಪ್ರಯಾಣಮಾಡಿದೆ.

ನೀನು ಕುಟುಂಬದೊಂದಿಗೆ ಸುಖವಾಗಿರುವುದನ್ನು ಕಂಡು ನನ್ನ ಮನಸ್ಸಂತೋಷವಾಯಿತು. ದೀರ್ಘವಾದ ಬಾಳಿನಲ್ಲಿ ಇಷ್ಟ–ಅನಿಷ್ಟ ಗಳು ನಡೆದುಹೋಗುತ್ತವೆ. ಮುಗಿಲೂ ಮುಸುಕುವುದು, ಬೆಳುದಿಂಗಳೂ ಬಿತ್ತರಿಸುವುದು. ಕಷ್ಟದ ದಿನಗಳು ಎಷ್ಟೋ ಬರಬಹುದು, ಸುಖದ ದಿನಗಳೂ ಎಷ್ಟೋ ಬರಬಹುದು. ಯಾವುದೇ ಸಂದರ್ಭದಲ್ಲಿಯೂ ಬಾಳಿನ ಆಸೆಯನ್ನು ನೀಗಿಕೊಳ್ಳಬಾರದು. ಕಷ್ಟ–ಸುಖಗಳನ್ನು ನಗು ನಗುತ್ತ ಉಂಡು ನಮಗೂ ಮಿಾರಿದ ಆ ಶಕ್ತಿ ನಡೆಸಿದಂತೆ ನಡೆಯುವುದೇ ವಿವೇಕದ ದಾರಿ. ಬಾಳ ದೋಣಿ ಕಡಲಲೆಗಳ ಹೊಡೆತವನ್ನು ಸಹಿಸಿ

ಕೊಂಡು, ಚಂಡಮಾರುತವನ್ನು ಎದುರಿಸಿ ತನ್ನ ನಿಯತಿಯ ರೇವನ್ನು ಸೇರಬೇಕು. ಮಾರ್ಗಾಯಾಸವನ್ನು ಸಹಿಸಿಕೊಳ್ಳಲಾರದೆ ಅಂಬಿಗನು ಮಧ್ಯಮಾರ್ಗದಲ್ಲಿಯೇ ನೀರನ್ನು ಹಾರಿಕೊಂಡರೆ ಏನಿದೆ?

ಮಮತೆಯೇ ಜಗತ್ತಿನ ಭ್ರಾಂತಿಗೆಲ್ಲ ಕಾರಣ, ಕ್ಲೇಶಗಳಿಗೆಲ್ಲ ಉಗಮ. ಮನುಷ್ಯನು ಅದನ್ನು ಗೆದ್ದರೆ ಸತ್ಯದ ಹೆಬ್ಬಾಗಿಲು ತಾನಾಗಿ ತೆರೆಯುವುದು. ದೇವರು ಮಮತೆಯ ತೆರೆಯನ್ನು ಹರಿದು ವಿವೇಕದ ಪಂಜಿನಿಂದ ನಿನ್ನ ಬಾಳ ದಾರಿಯನ್ನು ಬೆಳಗಲಿ.

ನಾನು ಈಗ ಸರ್ವಸಂಗಪರಿತ್ಯಾಗಿಯಾಗಿದ್ದೇನೆ. ನನ್ನ ಪ್ರಪಂಚವೆಲ್ಲ ಅಂತರ್ಮುಖವಾಗಿದೆ. ಪೂಜ್ಯ ಗುರು ಶ್ರೀ ರಾಮಕೃಷ್ಣ ಪರಮಹಂಸರ ಕಟಾಕ್ಷದಿಂದ ನಾನು ಬಾಹ್ಯಬಂಧನಗಳನ್ನೆಲ್ಲ ಕತ್ತರಿಸಿಕೊಂಡಿದ್ದೇನೆ. ನನ್ನ ಸುಖಕ್ಕೆ ಈಗ ಪ್ರಾಪಂಚಿಕ ವಿಷಯಗಳು ಕೂಡದು. ಈಗ ನಾನು ಕೇವಲ ಆತ್ಮಾನಂದ.

ನನ್ನ ಗುರುತನ್ನು ನಿನಗೆ ತಿಳಿಸಿದರೆ ನೀನು ಚಕಿತನಾಗುತ್ತೀ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ನಿನಗೆ ರಾಜು ಎಂಬ ಒಬ್ಬ ಗೆಳೆಯನಿದ್ದ. ಬಹುಶಃ ನೀನು ಅವನನ್ನು ಮರೆತಿರಲಾರೆ. ಆಗ ರಾಜು ಆಗಿದ್ದವನೇ ಈಗ ಆತ್ಮಾನಂದನಾಗಿದ್ದಾನೆ!

ಇತಿ,

ರಾಜು

(ಈಗ ಆತ್ಮಾನಂದ)

ಆನಂದನು ಆತ್ಮಾನಂದರನ್ನು ಆಯುಷ್ಯದಲ್ಲಿ ಮತ್ತೆ ನೋಡಲಾಗಲಿಲ್ಲ.

---

ಉಷಾ ಪ್ರೆಸ್, ಮೈಸೂರು